# ನವಕರ್ನಾಟಕ ೫೦ರ ಸಂಭ್ರಮದಲ್ಲಿ

## ಚಿನ್ನದ ಹಬ್ಬಕ್ಕೆ ಚಂದದ ಕೊಡುಗೆ

**ಆಗಸ್ಟ್ 29, 2010ರಂದು ಬೆಳಗ್ಗೆ 10 ಕ್ಕೆ**
**ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ**

## ಲೋಕಾರ್ಪಣೆ




ಸಂಪಾದಕರು :

ಪ್ರೊ|| ಎಂ. ಎಚ್. ಕೃಷ್ಣಯ್ಯ, ಡಾ|| ವಿಜಯಾ, ಶ್ರೀ ಸಿ. ಆರ್. ಕೃಷ್ಣರಾವ್

1200 ಪುಟಗಳು. ಆಕಾರ : ಡೆಮಿ ¼ (22 x 28 ಸೆಂಮೀ).
ಎರಡು ಸಂಪುಟಗಳು,
ಸಂದರ್ಭಸೂಚಿ ಮತ್ತು ಸಿಡಿ ರಟ್ಟಿನ ಪೆಟ್ಟಿಗೆಯಲ್ಲಿ.

ಆರ್ಟ್ ಕಾಗದದ ಮೇಲೆ ಬಹುವರ್ಣದಲ್ಲಿ
ಮುದ್ರಣವಾಗುವ ಮಹತ್ವದ ಕೃತಿ

ಕರ್ನಾಟಕ ಕಲಾ ಪರಂಪರೆಯನ್ನು ಅನಾವರಣಗೊಳಿಸುವ ಮಹಾಪ್ರಯತ್ನ. ಸುಮಾರು 4500ಕ್ಕೂ ಹೆಚ್ಚು ಅಪೂರ್ವ ವರ್ಣ ಹಾಗೂ ಕಪ್ಪುಬಿಳುಪು ಚಿತ್ರಗಳು. 9 ಅಧ್ಯಾಯಗಳು, 55 ಪರಿಣತರ 50 ಲೇಖನಗಳ ಬೃಹತ್ ಗ್ರಂಥ.

**ನವಕರ್ನಾಟಕ ಪ್ರಕಾಶನದ ಈ ವಿಶಿಷ್ಟ ಯೋಜನೆ ಸಾಂಸ್ಕೃತಿಕ ರಂಗಕ್ಕೆ ಮಹಾನ್ ಕೊಡುಗೆ. ನಾಡು ನುಡಿಗೆ ವಿಶೇಷ ಕಾಣಿಕೆ**

ಇಂದೇ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ವಿಳಾಸಕ್ಕೆ ರೂ. 2000ವನ್ನು ಕಳಿಸಿ ನಿಮ್ಮ ಹೆಸರನ್ನು ನೋಂದಣಿ ಮಾಡಿಕೊಳ್ಳಿ. ಹಣವನ್ನು ಬ್ಯಾಂಕ್ ಡ್ರಾಫ್ಟ್ ಅಥವಾ ಮನಿ ಆರ್ಡರ್ ಮೂಲಕ ಕಳಿಸಿ. ಕೋರ್ ಬ್ಯಾಂಕಿಂಗ್ ಸೌಲಭ್ಯ ಇರುವ ಯಾವುದೇ ಬ್ಯಾಂಕ್‌ನಿಂದ ನಮ್ಮ ಬ್ಯಾಂಕ್ ಅಕೌಂಟ್‌ಗೆ ನಗದು ಅಥವಾ ಚೆಕ್ ಮೂಲಕ ಹಣವನ್ನು ಜಮಾ ಮಾಡಬಹುದು. (Current A/c No. 0788201010612; IFSC Code CNRB0000788; Canara Bank, Madhavnagar Branch. ಹೀಗೆ ಜಮಾ ಮಾಡುವವರು ಬ್ಯಾಂಕ್ ಚಲನ್‌ನ ಜೆರಾಕ್ಸ್ ಪ್ರತಿ ಹಾಗೂ ತಮ್ಮ ಹೆಸರು, ವಿಳಾಸವನ್ನು ಕೆಳಕಂಡ ನಮ್ಮ ಪ್ರಧಾನ ಕಛೇರಿಗೆ ಕಳಿಸಬೇಕು).
*(ಹಣವನ್ನು ನವಕರ್ನಾಟಕದ ಶಾಖೆಗಳಲ್ಲಿ, ಮಳಿಗೆಗಳಲ್ಲಿ ಅಥವಾ ಪುಸ್ತಕ ಪ್ರದರ್ಶನಗಳಲ್ಲಿ ಕೂಡ ಪಾವತಿಸಬಹುದು)*

ಕೃತಿಯ ಮುಖ ಬೆಲೆ
ರೂ. 3000
ಪ್ರಕಟಣಪೂರ್ವ ಬೆಲೆ
ರೂ. 2000
ಭಾರಿ ಉಳಿತಾಯ
ರೂ. 1000

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :





## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com


ಕರ್ನಾಟಕ ಕಲಾದರ್ಶನದ ಮಾದರಿ ಪುಟಗಳಿಗೆ ನೋಡಿ : http://navakarnataka.blogspot.com

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಬಿ. ವಿಲ್ಸನ್, ಎನ್. ಆರ್. ಬೊಮ್ನಳ್ಳಿ

ಮುಖಪುಟ : ವಿಶ್ವಕಪ್ ಫುಟ್ಬಾಲ್ ಪಂದ್ಯಗಳ ಉದ್ಘಾಟನಾ ಸಮಾರಂಭದ ಒಂದು ರೋಚಕ ಕ್ಷಣ (ಜೋಹಾನ್ಸ್‌ಬರ್ಗ್, ದಕ್ಷಿಣ ಆಫ್ರಿಕ)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಹರ್ಯಾಣ ರಾಜ್ಯ ಸಾರಿಗೆ ನಿಗಮವು ಬೇಕಾದಷ್ಟು ಬಸ್ಸುಗಳನ್ನು ಓಡಿಸುತ್ತದೆ. ಅಲ್ಲಿ ಸರ್ಕಾರಿ ಬಸ್ಸುಗಳು ಜಾಸ್ತಿ. ನಮ್ಮಲ್ಲಿರುವಂತೆ ಅಲ್ಲಿಯೂ ಬಸ್ ಡ್ರೈವರುಗಳು, ಕಂಡಕ್ಟರುಗಳು ಇದ್ದಾರೆ. ಕೆಲವು ಕಂಡಕ್ಟರುಗಳಿಗೆ ಅವರ ಸಚಿವರಿಗಿರುವ ಜಾಡ್ಯ ಇರುತ್ತದೆ. ಎಲ್ಲೆಲ್ಲಿ, ಎಷ್ಟೆಷ್ಟು, ಸಾರ್ವಜನಿಕ ಹಣ ಕದಿಯಬಹುದೆಂಬುದು ಅಂಥ ಒಂದು ಜಾಡ್ಯ. ಸಚಿವರಿಗಾದರೆ ವೋಲ್ವೊ, ಅರ್ಬನ್ ರಿನ್ಯೂಯಲ್ ಮಿಶನ್, ಟೈರುಗಳು, ಕಂಟ್ರಾಕ್ಟುಗಳು, ಹೀಗೆ ''ಫಲವಂತಿಕೆಯ'' ಮೂಲಗಳು ನೂರಾರು. ಕಂಡಕ್ಟರುಗಳಿಗೆ ಸೀಮಿತ ಸಾಧ್ಯತೆಗಳು ಒಂದೋ ಎರಡೋ ಅಷ್ಟೆ. ಒಂದೇ ಟಿಕೆಟನ್ನು ಹಲವರಿಗೆ ನೀಡುವ ಜಾಣತನ, ಹಳೆಯದನ್ನು ಸ್ವೀಕರಿಸಲು ನಿರಾಕರಿಸಿದವರಿಗೆ ಬೈಗುಳ (ಪ್ರಸ್ತುತ ಲೇಖಕನಿಗೆ ಜೂನ್ ೧೫ರಂದು ಅದರ ಅನುಭವ ಬಿರುಸಾಗಿಯೇ ಆಯಿತು), ಟಿಕೆಟ್ ಕೊಡದಿರುವುದು, ಹೀಗೆ. ಅದರಿಂದ ಕೋಟಿ ಸಂಪಾದನೆಯಾಗುವುದಿಲ್ಲ, ಆದರೆ ಹತ್ತಾರು ಕಂಡಕ್ಟರುಗಳ 'ಜಾಣತನ'ದಿಂದ ನಿಗಮಕ್ಕೆ ವರ್ಷಕ್ಕೆ ಕೋಟಿ ನಷ್ಟವಾದರೆ ಆಶ್ಚರ್ಯವಿಲ್ಲ. ಅದಿರಲಿ, ಹರ್ಯಾಣಕ್ಕೆ ಹಿಂದಿರುಗೋಣ. ಅಲ್ಲಿಯ ಒಬ್ಬ ಕಂಡಕ್ಟರ್ ಸರ್ವೋಚ್ಚ ನ್ಯಾಯಾಲಯದ ಮೊರೆಹೋಗಿದ್ದ. ನ್ಯಾಯಾಲಯ ಅವನ ವಿರುದ್ಧ ತೀರ್ಪು ನೀಡಿ ಅವನಿಗೊಂದು ದೀರ್ಘವಾದ ನೈತಿಕ ಉಪನ್ಯಾಸ ನೀಡಿತು. ಏನು ನೀತಿ ? ''ನೀನು ಸರ್ಕಾರಿ ನೌಕರ, ಸಾರ್ವಜನಿಕರ ಸೇವೆಯನ್ನು ನಿರ್ವಂಚನೆಯಿಂದ ಮಾಡಬೇಕು, ಟಿಕೆಟ್ ಕೊಡಬೇಕಾದ್ದು ನಿನ್ನ ಕರ್ತವ್ಯ, ಹಾಗೆ ಟಿಕೆಟ್ ಕೊಡದಿರುವುದು ಅಪರಾಧ, ಅದು ನಿಯಮಬಾಹಿರವಾದ್ದು, ಗಾಂಧೀಜಿ ಹೇಳಿದಂತೆ ಸಾರ್ವಜನಿಕ ಸೇವೆಯು ಪವಿತ್ರ ಕೆಲಸ'' ಇತ್ಯಾದಿ. ಒಟ್ಟಿನಲ್ಲಿ ಅವನು ಕೆಲಸ ಕಳೆದುಕೊಂಡ. ಸರ್ವೋಚ್ಚ ನ್ಯಾಯಾಲಯವು ಸಂವಿಧಾನ, ನೀತಿ ಸಂಹಿತೆ, ಕಾನೂನು, ಎಲ್ಲವನ್ನೂ ''ರಕ್ಷಿಸಿ'' ದೇಶವನ್ನು ಬಲಪಡಿಸಿತು. ನಡೆದಿದ್ದದ್ದಾದರೂ ಏನು ? ಒಬ್ಬ ಕಂಡಕ್ಟರ್ ಯಾವನೋ ಪ್ರಯಾಣಿಕನಿಗೆ ಟಿಕೆಟ್ ಕೊಟ್ಟಿರಲಿಲ್ಲವಂತೆ; ಅವನನ್ನು ಹಿಡಿದು ಕಾನೂನು ಕ್ರಮ ಜರುಗಿಸಲಾಗಿತ್ತು. ಆಪಾದನೆಯು ಸುಳ್ಳೆಂದು ಅವನ ವಾದ. ಕೋರ್ಟಿಗೆ ಹೋದರು. ಕಂಡಕ್ಟರನನ್ನು 'ಡಿಸ್‌ಮಿಸ್' ಮಾಡಿದ್ದು ಸರಿ ಎಂದಿತು ನ್ಯಾಯಾಲಯ. ಅವನು ಹರ್ಯಾಣ ಉಚ್ಚ ನ್ಯಾಯಾಲಯದ ಮೆಟ್ಟಿಲೇರಿದ. ಅವನ ಮೇಲಿನ ಆರೋಪ ಸಾಬೀತಾಗಿಲ್ಲ, ಅವನನ್ನು ಕೆಲಸಕ್ಕೆ ಹಿಂದಿರುಗಲು ಬಿಡಬೇಕು, ಎಂದಿತು ಹೈಕೋರ್ಟು. ನಿಗಮವು ದೆಹಲಿಯ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಯಿತು. ಅಲ್ಲಿ ಅವನಿಗೆ ನೀತಿಪಾಠ ಹೇಳಿ ಮನೆಗೆ ಕಳಿಸಲಾಯಿತು.

ಇದು ತಪ್ಪೇ, ಸರಿಯೇ ಎಂಬುದು ಪ್ರಶ್ನೆಯಲ್ಲ. ಸರ್ವೋಚ್ಚ ನ್ಯಾಯಾಲಯದ ಧೀಮಂತರು ಹೇಳಿದ್ದೇ ಅಂತಿಮ ಸತ್ಯ ಮತ್ತು ನ್ಯಾಯವೆಂಬ ಐತಿಹ್ಯ ನಮ್ಮಲ್ಲಿದೆ. ''ಸನ್ಮಾನ್ಯ'' ದಿನಕರನ್ ಹೆಸರು ದೆಹಲಿಯ ಸರ್ವೋಚ್ಚ ನ್ಯಾಯಾಧೀಶರಿಗೆ ಗೊತ್ತು; ಅವರ ''ಸರ್ವಥಾ ನೈತಿಕ'' ಕ್ರಿಯೆಗಳಂತೂ ಇಡೀ ದೇಶಕ್ಕೆ ಗೊತ್ತು. ಆದರೆ ಅವರು ಬಸ್ ಕಂಡಕ್ಟರ್ ಅಲ್ಲ. ಆದ್ದರಿಂದ ಅವರಿಗೆ ನೀತಿಪಾಠ ಹೇಳುವವರಾರೂ ಇಲ್ಲ ಮತ್ತು ಅವರನ್ನು 'ಡಿಸ್‌ಮಿಸ್' ಮಾಡಲು ಯಾರಿಗೂ ಹಕ್ಕಿಲ್ಲ. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಬೆಂಗಳೂರಿಗೆ ದಯಮಾಡಿಸಿದ್ದಾಗ ಸನ್ಮಾನ್ಯರು ಎರಡು ಬಾರಿ ಅವರಿಗೆ ಮೈಸೂರು ಪೇಟ ತೊಡಿಸಿದ್ದರಂತೆ. ಒಂದೊಂದು ಬಾರಿಯೂ ಪೇಟಾ ಇತ್ಯಾದಿ ಬಾಬ್ತು ಕೇವಲ ಐದಂಕಿಯ ಮೊಬಲಗು; ನ್ಯಾಯಾಧೀಶರಿಗೆ ಪೇಟ, ಸಾರ್ವಜನಿಕ ಖಜಾನೆಗೆ ಟೋಪಿ, ಅಷ್ಟೆ. ಬಸ್ ಕಂಡಕ್ಟರ್ ಅವ್ಯವಹಾರ ಐದು ರೂಪಾಯಿ ಇದ್ದೀತು, ದಿನಕರನ್ ಮಹಾಶಯರದು ಐದಂಕಿ ರೂಪಾಯಿಗಳು. ಇದನ್ನೆಲ್ಲಾ ನ್ಯಾಯಮೂರ್ತಿ ಶ್ರೀ. ಡಿ. ವಿ. ಶೈಲೇಂದ್ರಕುಮಾರ್ ಅವರು ತಮ್ಮ ವೆಬ್‌ಸೈಟ್‌ನಲ್ಲಿ ಪ್ರಚುರಪಡಿಸಿದ್ದಾರೆಂದು ಹೇಳಲಾಗಿದೆ. ಆಸಕ್ತರು ಅದನ್ನು ನೋಡಿ ಇಂತಹ ಇನ್ನಷ್ಟು ''ನ್ಯಾಯಯುತ ವೆಚ್ಚ''ಗಳ ಮಾಹಿತಿ ಪಡೆಯಬಹುದು. ಹರ್ಯಾಣ ಸಾರಿಗೆ ನಿಗಮವು ಸಹ ಎಲ್ಲ ಕಂಡಕ್ಟರುಗಳಿಂದ ಮಾಹಿತಿ ಸಂಗ್ರಹಿಸಿ, ಅವರೆಲ್ಲಾ ಸೇರಿ ಸಾರ್ವಜನಿಕ ಖಜಾನೆಗೆ ಎಷ್ಟು ಚಿಕ್ಕ ಟೋಪಿ ಹಾಕಿ ದಡ್ಡರಾಗಿದ್ದಾರೆಂದು ತಿಳಿಯಪಡಿಸಬಹುದು. ಭ್ರಷ್ಟಾಚಾರವಾಗಲಿ, ತತ್ತ್ವಶಾಸ್ತ್ರವಾಗಲಿ, ಮಾಧ್ಯಮಗಳ ಆಯ್ಕೆಗಳಾಗಲಿ, ಸಂವಿಧಾನಾತ್ಮಕ ನ್ಯಾಯವಾಗಲಿ, ಎಲ್ಲಾ ''ವರ್ಗ ಲಕ್ಷಣ''ಗಳನ್ನು ಹೊಂದಿವೆಯೆಂಬುದಕ್ಕೆ ಹರ್ಯಾಣದ ಒಬ್ಬ ಕಂಡಕ್ಟರ್ ಜೀವಂತ ಸಂಕೇತವಾಗಿದ್ದಾನೆ. ಅವನನ್ನು ಕ್ಷಮಿಸಿ ಬಿಡಬೇಕೆಂಬ ಆಗ್ರಹಕ್ಕಿಂತಲೂ, ಇನ್ನೂ ''ದೊಡ್ಡ ಮಹಾತ್ಮ''ರಿರುವಾಗ ಅವನ ಮೇಲೆ ಮಾತ್ರ ಏಕೆ ಕೆಂಪು ಕಣ್ಣು ಎಂಬುದು ನಿಜವಾದ ಆಗ್ರಹ. ಮಾನ್ಯ ದಿನಕರನ್ ಸೇರಿದಂತೆ ಯಾರೂ ಕ್ಷಮಾರ್ಹರಲ್ಲ. ಆದರೆ ದಿನಕರನ್ ಅವರ ಬಗ್ಗೆ ತೀರ್ಮಾನ ಬರುವವರೆಗೂ ಅವರು ಎಲ್ಲಾ ಅಧಿಕಾರ ಚಲಾಯಿಸಲು ಅವಕಾಶವಿದೆ, ಬಸ್ ಕಂಡಕ್ಟರ್‌ಗೆ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೧೨ ಜುಲೈ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com


**ಸಂಪಾದಕೀಯ**

# ಆ್ಯಂಡರ್ಸನ್ ಉಪಜೀವಿಗಳು

ಕೆಲವು ಮಕ್ಕಳಿಗೆ 'ಅನುಯಾಯಿಗಳು' ಎಂಬ ಪದದ ಉಚ್ಚಾರಣೆ ತೊಡಕಿನದು; ಸುಲಭವಾಗಿ ಅದು 'ಅನುನಾಯಿ'ಯೆಂದು ಬಂದುಬಿಡುತ್ತದೆ. ನಮ್ಮ ದೇಶದ ಆ್ಯಂಡರ್ಸನ್ ಅನುಯಾಯಿಗಳು ನಿಜಾರ್ಥದಲ್ಲಿ ಅನುನಾಯಿಗಳೇ ಆಗಿದ್ದಾರೆ. ಭೋಪಾಲ್ ಅನಿಲ ದುರಂತದ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ತೀರ್ಪು ಬಂದನಂತರ ಇದೆಲ್ಲಾ ಏನೋ ಇಂದು ಅಥವಾ ನಿನ್ನೆ ನಡೆದ ಘಟನೆ ಎಂಬಂತೆಯೂ, ಈಗಿನ ಅಧಮ ತೀರ್ಪು ಎಲ್ಲೋ ಅನಿರೀಕ್ಷಿತವಾಗಿ ಆಕಾಶದಿಂದ ಉದುರಿಬಿಟ್ಟಿತು, ಅದು ನ್ಯಾಯಸಮ್ಮತವಾದುದಲ್ಲ ಎಂಬಂತೆಯೂ ಪರಸ್ಪರ ಚುಚ್ಚಿನ ಮಾತುಗಳ ಸುರಿಮಳೆಯನ್ನು ನೋಡುತ್ತಿದ್ದೇವೆ. ಇಂದಿರಾ, ರಾಜೀವ್ ಮತ್ತು ಸೋನಿಯಾ ಗಾಂಧಿಗಳು ಮಾತ್ರ ಅಲ್ಲದೆ, ಇತರರೆಲ್ಲಾ ಮನದಾಳದಲ್ಲಿ ನೋವು ಅನುಭವಿಸಿ ಪ್ರತಿಕ್ರಿಯಿಸಿದ ರಾಜಕೀಯ ಶ್ರೇಷ್ಠರು ಎಂಬರ್ಥ ಬರುವ ಮಾತುಗಳು ಕೇಳಿಬಂದಿವೆ. ಸಾಮಾಜಿಕ ಜವಾಬ್ದಾರಿಯನ್ನು ನಿಷ್ಠೆಯಿಂದ ನಿರ್ವಹಿಸುವ ಘನತೆ ತಮ್ಮದೆಂದು ಭಾಸವಾಗುವ ರೀತಿಯಲ್ಲಿ ಮಾಧ್ಯಮಗಳು ಸ್ಪರ್ಧೆಗಿಳಿದು ಭೋಪಾಲ್‌ನಲ್ಲಿ ದುರ್ಗತಿಗೆ ಈಡಾದ ಜನರ ಬಗ್ಗೆ ಮರುಕ ತೋರಿಸುತ್ತಿವೆ. ಸ್ವಲ್ಪ ದಿನ ಕಳೆದ ಮೇಲೆ ಇದು ಯಥಾಪ್ರಕಾರ ತಣ್ಣಗಾಗುತ್ತದೆ, ಬೇರೇನೋ ಅದ್ಭುತವಾದ ನೈತಿಕ ಸವಾಲನ್ನು ಕುರಿತಂತೆ ಮಾಧ್ಯಮಗಳು ಮತ್ತೆ ಅಬ್ಬರಿಸುತ್ತವೆ. ಹೇಗೂ ಸರಿ, ನಾಟಕ ನಡೆಯುತ್ತಿದ್ದರೆ ನೋಡಲು ಮೋಜಿರುತ್ತದೆಂದು ಪ್ರಜಾಸಮೂಹವು ತನ್ನ ಪ್ರಜ್ಞೆಯನ್ನು ಆ್ಯಂಡರ್ಸನ್ ಎಂಬ ಧೂರ್ತನಲ್ಲಿ ಕೇಂದ್ರೀಕರಿಸುತ್ತದೆ.

ಇದಿಷ್ಟೂ ಸಿನಿಕತನದ ಮಾತಿನಂತೆ ತೋರುತ್ತದೆ. ಆದರೆ ನಮ್ಮ ದೀರ್ಘ ಇತಿಹಾಸವನ್ನು ನೋಡಿದರೆ ಭೋಪಾಲ್ ದುರಂತವು ರಾಜಕೀಯ-ಸಾಮಾಜಿಕ ವಿಷಯವಾಗಿರುವಂತೆ ಆಳದಲ್ಲಿ ದೊಡ್ಡ ಸಾಂಸ್ಕೃತಿಕ ಪ್ರಶ್ನೆಯಾಗಿ ಕಾಡುತ್ತದೆ. ಸರ್ವೋಚ್ಚ ನ್ಯಾಯಾಲಯವು ದುರಂತದಲ್ಲಿ ಸತ್ತವರಿಗೆ, ನಷ್ಟ ಅನುಭವಿಸಿದವರಿಗೆ, ನೀಡಿದ ಪರಿಹಾರವೆಷ್ಟು? ಅದನ್ನು ಯಾರು ಮತ್ತು ಹೇಗೆ ನಿಗದಿಪಡಿಸಿದರು ? ಅದಕ್ಕೆ ಯಾವ ಕಾನೂನಿನ ಅನ್ವಯವಾಯಿತು ? ಈ ಪ್ರಶ್ನೆಯನ್ನು ಅಂದು ಗಂಭೀರವಾಗಿ ಪರಿಗಣಿಸಲಿಲ್ಲ, ಇಂದು ಅದರ ಮಾತೇ ಬಂದಿಲ್ಲ. ಆಗ್ಗೆ ಮುಖ್ಯ ನ್ಯಾಯಾಧೀಶರು ಶ್ರೀ. ಇ. ಎಸ್. ವೆಂಕಟರಾಮಯ್ಯ. ನ್ಯಾಯಾಲಯದಲ್ಲಿ ಮೊಕದ್ದಮೆ ಜಾರಿಯಲ್ಲಿದ್ದಾಗ ಕಕ್ಷಿ-ಪ್ರತಿಕಕ್ಷಿಗಳಿಗೆ ಅವರು ಒಂದು ಮೊತ್ತವನ್ನು ಸೂಚಿಸಿದರು, 'ಕೇಸ್ ಖಲಾಸೆ' ಆಯಿತು. ಅಷ್ಟು ಕಡಿಮೆ ಏಕೆ ಸ್ವಾಮಿ, ಎಂದು ಯಾರೂ ಕೇಳಲಿಲ್ಲ; ಮಾಧ್ಯಮಗಳಂತೂ ಅದು ನೀಚಮಟ್ಟದ ಮೊತ್ತವೆಂದು ಅರಿಯುವ ಗೋಜಿಗೇ ಹೋಗಲಿಲ್ಲ. ಆಮೇಲೆ ಬಂದಿದ್ದು ಅಹ್ಮದಿ ಪ್ರಕರಣ : ೩೦೪ನ್ನು ೩೦೪(ಎ) ಮಾಡಿದ್ದು. ಆಗ ನಾಗರಿಕರಿಗೆ, ನ್ಯಾಯವಾದಿಗಳಿಗೆ, ಮಾಧ್ಯಮಗಳಿಗೆ, ರಾಜಕೀಯ ಪಕ್ಷಗಳಿಗೆ ೩೦೪ (ಎ) ಎಂದರೇನೆಂದು ಗೊತ್ತಿರಲಿಲ್ಲವೆ ? ೩೦೪ನ್ನು ೩೦೪(ಎ) ಎಂದು ತಪ್ಪಾಗಿ ತಿದ್ದಲು ನ್ಯಾಯಾಧೀಶರಿಗೆ ಅಧಿಕಾರವಿದೆಯೆ ? ಇಲ್ಲದಿದ್ದರೆ ಹಾಗೇಕೆ ಮಾಡಿದ್ದು? ಅಧಿಕಾರವಿದ್ದು ಹಾಗೆ ಮಾಡಿದ್ದರೆ ಅದನ್ನು ಸರ್ಕಾರ ಆಕ್ಷೇಪಿಸಲಿಲ್ಲವೇಕೆ ? ಹೀಗೆ ಪ್ರಶ್ನೆಗಳು ನೂರಾರಿವೆ. ಅಂದರೆ, ಈಗಿನ ಹೇಳಿಕೆಗಳು – ಪ್ರತಿಕ್ರಿಯೆಗಳು ಅಂದೇ ಬರಬೇಕಿತ್ತು, ಆಗ ಸ್ವಲ್ಪವಾದರೂ ಪ್ರಯೋಜನವಿರುತ್ತಿತ್ತು.

ಯೂನಿಯನ್ ಕಾರ್ಬೈಡ್ ಭಾರತದಲ್ಲಿ ಕಾಲಿಟ್ಟು ಏನೇನು ಅನಾಹುತಗಳಿಗೆ ಕಾರಣವಾಯಿತೆಂಬುದು ಎಲ್ಲರಿಗೂ ತಿಳಿದಿದೆ. ಆ ಕಂಪನಿಗೆ ಹೆಜ್ಜೆಹೆಜ್ಜೆಗೂ ಅನುಕೂಲ ಕಲ್ಪಿಸಿಕೊಟ್ಟಿದ್ದುದರ ಇತಿಹಾಸ ಲ್ಯಾಪ್ಯೇರ್ ಬರೆದ 'ಮಧ್ಯರಾತ್ರಿಗೆ ಐದು ನಿಮಿಷ' ಎಂಬ ಪುಸ್ತಕದಲ್ಲಿ ದಾಖಲಾಗಿದೆ. ಹತ್ತಾರು ಕಾನೂನುಗಳ ಉಲ್ಲಂಘನೆಯು ಅನೂಚಾನವಾಗಿ ನಡೆದು ಆ ವಿಷದ ಕಾರ್ಖಾನೆ ಭೋಪಾಲ್‌ನಲ್ಲಿ ಸ್ಥಾಪನೆಗೊಂಡಿತು. ಈಗ ಮೊದಲ ಬಾರಿಗೆ ಅದನ್ನು ಕೆದಕಲಾಗುತ್ತಿದೆಯೆಂಬಂತೆ ನಡೆದುಕೊಳ್ಳುವುದು ಮೋಸದ ವ್ಯವಹಾರ. ನಗರದ ಮಧ್ಯಭಾಗದಲ್ಲಿ ಕಾರ್ಬೈಡ್ ಕಾರ್ಖಾನೆಗೆ ಪರವಾನಗಿ ದೊರಕಿಸಿ ಕೊಡಲು ಅನೇಕ ರಾಜಕಾರಣಿಗಳು ಮತ್ತು ಸರ್ಕಾರಿ ಅಧಿಕಾರಿಗಳು ಕೈಜೋಡಿಸಿದ್ದರು ಮತ್ತು ಹಾಗೆ ಕೈಜೋಡಿಸಿದ್ದಕ್ಕೆ ಜೋಳಿಗೆಗಳನ್ನು ಯಥೇಚ್ಛವಾಗಿ ತುಂಬಿಕೊಂಡರು, ಜನರ ಜೀವಗಳನ್ನು ಹೂತುಹಾಕಿದರು.

ಇನ್ನು ಆ್ಯಂಡರ್ಸನ್ - ಅರ್ಜುನ ಸಿಂಗ್ - ಚಿದಂಬರಂ ವಿಚಾರ : ಆ್ಯಂಡರ್ಸನ್ ಎಂಬ ದುಷ್ಟಪಾತಕಿಗೆ ನಮ್ಮ ದೇಶದ ಸರ್ಕಾರದ ವಿವಿಧ ಅಂಗಗಳ ಸಂಪೂರ್ಣ ಬೆಂಬಲವಿರದಿದ್ದರೆ ಅವನಿಗೆ ಓಡಿಹೋಗಲಾಗುತ್ತಿರಲಿಲ್ಲವೆಂಬುದು ಹೊಸ ಬೆಳಕಿನಲ್ಲಿ ಕಂಡುಕೊಂಡ ಅಪೂರ್ವ ಸತ್ಯವೇನಲ್ಲ. ಆ ಪಾತಕಿಗಿಂತಲೂ ಮೂರು ಪಟ್ಟು, ನೂರು ಪಟ್ಟು, ಪಾತಕಿಗಳು ನಮ್ಮವರು, ನಮ್ಮಲ್ಲೇ ಇರುವವರು; ಅವರು ಪ್ರತಿನಿಧಿಸುವ ಬಂಡವಾಳಶಾಹಿಯು ದೈತ್ಯ ಅಮೆರಿಕಾದ ಕುನ್ನಿ. ಆ ಕುನ್ನಿಯು ಕಾಂಗ್ರೆಸ್ ಲಾಂಛನ ಮಾತ್ರವೇ ಧರಿಸಿಲ್ಲ, ಅದಕ್ಕೆ ಭಾರತೀಯ ಜನತಾ ಪಕ್ಷದ ಧ್ವಜವೂ ಆಸರೆ ನೀಡುತ್ತದೆ. ಮೊನ್ನೆ ತಾನೆ ಎರಡು ವರ್ಷದ ಕಾರಾಗೃಹ ವಾಸದ ಶಿಕ್ಷೆಗೆ ಗುರಿಯಾಗಿ ಒಂದು ಗಂಟೆಯೊಳಗಾಗಿ ಜಾಮೀನು ಪಡೆದು ಬಿಡುಗಡೆಯಾದ ಕಾರ್ಬೈಡ್‌ನ ಭಾರತದ ಪಾಲುದಾರ ಕೇಶವ ಮಹೀಂದ್ರಾಗೆ ಪದ್ಮಭೂಷಣ ಪ್ರಶಸ್ತಿ ಕೊಟ್ಟಿದ್ದದ್ದು ವಾಜಪೇಯಿ ಸರಕಾರ! ಅದನ್ನು ಮರೆಮಾಚಲು ಯಾರೋ ಬರೆದುಕೊಟ್ಟ ನಾಟಕದ ಸಂಭಾಷಣೆಯನ್ನು ಒದರಿದ ಮತ್ತು ಒದರುತ್ತಿರುವ ದೊಡ್ಡ ನಾಯಕರ ಸಣ್ಣತನಕ್ಕೆ ಮಿತಿಯಿಲ್ಲ. ಅಂದಿನ ಸೂತ್ರಧಾರ ರಾಜೀವ ಗಾಂಧಿ, ಇಂದಿನ ಸೂತ್ರಧಾರ ಮನಮೋಹನ ಸಿಂಗ್. ಅವರಿಬ್ಬರ ನಡುವೆ ಸೂತ್ರ ಹಿಡಿದೆಳೆದವರು ನೂರಾರು ಮಂದಿ: ಅರ್ಜುನ ಸಿಂಗ್, ವಾಜಪೇಯಿ ಮುಂತಾಗಿ ಅವರ ಹೆಸರುಗಳು. ಅವರೆಲ್ಲರ ಗುರಾಣಿ ನ್ಯಾಯಾಲಯ. ಭೋಪಾಲಿನ ಜನರಿಗೆ ಇವರೆಲ್ಲಾ ನೀಡಿದ ಅಮೋಘ ಕಾಣಿಕೆಯೆಂದರೆ ಬೂದಿ, ನೀಡಿದ ಸಾಂತ್ವನವೆಂದರೆ ಆಗಾಗ್ಗೆ ಲಾಠಿ ಏಟು. ಈಗಂತೂ ಆ್ಯಂಡರ್ಸನ್ ಸಂಪ್ರದಾಯದ ರಕ್ಷಕರು ನಮ್ಮ ಮಂತ್ರಿಗಳಾದ ಪಿ. ಚಿದಂಬರಂ, ಕಮಲನಾಥ್, ಮುಂತಾದವರು. ಯೂನಿಯನ್ ಕಾರ್ಬೈಡ್‌ನ ಈಗಿನ ಅವತಾರವಾದ ಡೋ ಕೆಮಿಕಲ್ಸ್ ನಮ್ಮ ದೇಶದಲ್ಲಿ ಅಪಾರ ಬಂಡವಾಳ ಹೂಡಲಿದೆಯಂತೆ, ಆದ್ದರಿಂದ ಆ ಕಂಪನಿಯನ್ನು ಹೀಯಾಳಿಸಬಾರದಂತೆ, ಕಾರ್ಬೈಡ್ ಪಾಪದ ಹೊರೆಯನ್ನು ಅದರ ಮೇಲೆ ಹೇರಬಾರದಂತೆ. ಇದು ಭಾರತದ ಆಧುನಿಕ ನೈತಿಕತೆ; ಅದರ ಧರ್ಮಶಾಸ್ತ್ರಕಾರ ಚಿದಂಬರಂ. ಬಂಡವಾಳ ಹೂಡಿದರೆ ಸರಿ, ಅದರಿಂದ ೨೫,೦೦೦ ಮಂದಿಯನ್ನು ಕೊಂದರೆ ಚಿಂತೆಯಿಲ್ಲ; ಹೇಗೂ ಹೀಗೆ ದಣಿದು ಸಾಯುವವರು ಚಿದಂಬರಂ ವರ್ಗದ, ಕುಟುಂಬದ, ಸದಸ್ಯರಲ್ಲವಲ್ಲ! ಪ್ರಣವ ಮುಖರ್ಜಿ ಕಾನೂನು-ಶಿಸ್ತು ಪರಿಪಾಲನೆಯ ಅಂಗವಾಗಿ ಆ್ಯಂಡರ್ಸನ್‌ನನ್ನು ಮರ್ಯಾದೆಯಿಂದ ಬೀಳ್ಕೊಡಲಾಯಿತು, ಎಂದಿದ್ದಾರೆ. ಹಾಗೆ ಇನ್ನೆಷ್ಟು ಮಂದಿಯನ್ನು

ಬಿಡುತ್ತೀರೆಂದು ಅವರನ್ನು ಕೇಳಬೇಕು. ದಾವೂದ್ ಇಬ್ರಾಹಿಂನನ್ನು ಬಂಧಿಸಿದರೆ ನಾಳೆ ಒಂದಷ್ಟು ಜನ ಬೀದಿಗಿಳಿಯುತ್ತಾರೆನ್ನಿ, ಆ ಕಾರಣಕ್ಕೆ ಅವನನ್ನು ಬಂಧಿಸದೆ ಬಿಡಬೇಕೇನು ? ಇದೇ ಡೌ ಕೆಮಿಕಲ್ಸ್ ಅಮೆರಿಕಾದಲ್ಲಿ ಬೇರೆ ಕಂಪನಿಗಳನ್ನು ತನ್ನದನ್ನಾಗಿ ಮಾಡಿಕೊಂಡ ನಂತರ ಉಂಟಾದ ಅಪಘಾತಗಳಿಗೆ ಮತ್ತು ನಷ್ಟಗಳಿಗೆ ಹೊಣೆ ಹೊತ್ತಿದೆ. ೨೦೦೩-೦೪ರ ಸುಮಾರಿನಲ್ಲಿ ಒಂದು ಆಸ್ಬೆಸ್ಟಾಸ್ ಉತ್ಪಾದನಾ ಘಟಕದಲ್ಲಿ ಆಕಸ್ಮಿಕ ಹಾನಿಯಾದಾಗ ಕೋಟಿಗಟ್ಟಲೆ ಹಣವನ್ನು ಪರಿಹಾರವಾಗಿ ನೀಡಿತು. ಆದರೆ ಭೋಪಾಲ್ ದುರಂತದಲ್ಲಿ ಮಡಿದವರಿಗೆ, ನೊಂದವರಿಗೆ, ಏನೂ ಕೊಡುವುದಿಲ್ಲ; ಏಕೆಂದರೆ ಭಾರತೀಯರ ಜೀವ ಬಹಳ ಅಗ್ಗ!

ಈ ಇಡೀ ಪ್ರಕರಣದಲ್ಲಿ ನಿಜವಾದ ಒತ್ತಡ ಇರುವುದೇ ಬೇರೆ : ಅದು ನಮ್ಮ ಸಾಂಸ್ಕೃತಿಕ ಬೇರು. ಮನುಷ್ಯಜೀವಕ್ಕೆ ಬೆಲೆ ಕೊಡದಿರುವುದು ನಮ್ಮ ಸಂಪ್ರದಾಯ. ಇಲ್ಲದಿದ್ದರೆ ಸಹಸ್ರಾರು ವರ್ಷಗಳ ಕಾಲ ನಾವು ಅಸ್ಪೃಶ್ಯತೆಯಂತಹ ಹೀನಾಯ ಪದ್ಧತಿಯನ್ನು ಇರಿಸಿಕೊಳ್ಳುತ್ತಿದ್ದೆವೆ ? ಈಗಲೂ ದೇಶದಲ್ಲಿ ಕೋಟಿಗಟ್ಟಲೆ ಜನರು ನಿಕೃಷ್ಟವಾಗಿ ಜೀವಿಸುತ್ತಿದ್ದಾರಲ್ಲ, ಅದನ್ನು ನಮ್ಮ 'ಸಂಸ್ಕೃತಿ-ವಕ್ತಾರರು' ಎಂದಾದರೂ ಗಂಭೀರ ಸಮಸ್ಯೆಯೆಂದು ಪರಿಗಣಿಸಿದರೆ, ಪರಿಹಾರದ ಮಾರ್ಗಕ್ಕಾಗಿ ಹೋರಾಡಿದರೆ ? ಮನೆ, ಭೂಮಿ, ಎಲ್ಲಾ ಕಿತ್ತುಕೊಂಡು ಜನರನ್ನು ನಿರ್ಗತಿಕರನ್ನಾಗಿಸುತ್ತೇವಲ್ಲ, ಅದಕ್ಕೆ 'ಸಂಸ್ಕೃತಿ' ಅಡ್ಡಬರುತ್ತಿದೆಯೆ ? ಎಲ್ಲವನ್ನೂ ಸಂತೃಪ್ತ ಮನೋಭಾವದಿಂದ, ಯಾವ ಅಪರಾಧಪ್ರಜ್ಞೆಯೂ ನಮ್ಮನ್ನು ಬಾಧಿಸದಂತೆ, ಚಾಪೆ ಕೆಳಗೆ ತಳ್ಳಲು 'ಕರ್ಮಸಿದ್ಧಾಂತ' ಅಥವಾ 'ಹಣೆಬರಹ' ನಮಗೆ ಶ್ರೀರಕ್ಷೆಯಾಗಿದೆ. ಸಮುದಾಯದ ಬಗ್ಗೆ ಚಿಂತೆ ಅನಗತ್ಯ, ''ಹುಟ್ಟಿಸಿದವನು ಹುಲ್ಲು ನೀಡುತ್ತಾನೆ'' ಎಂಬ ಪೊಳ್ಳು ಭರವಸೆ ! ಆದ್ದರಿಂದ ಭೋಪಾಲಿನಲ್ಲಿ ಆ್ಯಂಡರ್ಸನ್ ೨೫,೦೦೦ ಜನರನ್ನು ಕೊಂದರೆ, ಅವನನ್ನು ಹಿಡಿದು ಒದೆಯುವ ಬದಲು, ಕ್ಷೇಮವಾಗಿ ಅವನನ್ನು ತನ್ನ ಸ್ವರ್ಗಕ್ಕೆ ರವಾನಿಸುತ್ತೇವೆ; ಮಣಿಪುರದ ಜನ ಅತ್ಯಂತ ಭೀಕರ ಬಾಧೆಗೆ ತುತ್ತಾದರೆ ದೆಹಲಿಯ ಪ್ರಭುಗಳಿಗೆ ಅದರ ತಾಪ ತಟ್ಟುವುದಿಲ್ಲ; ಒರಿಸ್ಸಾದಲ್ಲಿ 'ಪಾಸ್ಕೊ' ವಿರುದ್ಧ ದನಿಯೆತ್ತಿದರೆ ಬೆತ್ತದಿಂದ ಚಚ್ಚಿ ಜನರನ್ನು ಜೈಲಿಗೆ ಹಾಕುತ್ತೇವೆ; ಛತ್ತೀಸಗಢದ ಬುಡಕಟ್ಟು ಜನ ತಮ್ಮ ಜೀವನವು ಸುಸೂತ್ರವಾಗಿರಲೆಂದು ಆಶಿಸಿದರೆ ಅವರು ನಕ್ಸಲೀಯರ ಬೆಂಬಲಿಗರೆಂದು ಅವರನ್ನು ಹಿಂಸಿಸುತ್ತೇವೆ. ಪಟ್ಟಿಗೆ ಕೊನೆಯಿಲ್ಲ.

ಹಾಗಿದ್ದರೆ ಜನರನ್ನು ನಮ್ಮವರೆಂದು ಪ್ರೀತಿಸುವುದು ಹೇಗೆ ಮತ್ತು ಯಾವಾಗ ? ಬಸವಣ್ಣನ ವಚನ ಉದ್ಧರಿಸುವುದರಿಂದಲೆ, ಭಗವದ್ಗೀತೆ ಪಠಿಸುವುದರಿಂದಲೆ, ಸೌಂದರ್ಯ ಲಹರಿಯನ್ನು ಉರುಹಚ್ಚುವುದರಿಂದಲೆ, ಮಾರಮ್ಮನ ಜಾತ್ರೆಗೆ ಮತ್ತು ರಾಮಚಂದ್ರಪುರ ಮಠಕ್ಕೆ ಸಾರ್ವಜನಿಕ ಹಣ ಸುರಿಯುವುದರಿಂದಲೆ ? ಅದಷ್ಟೇ ಸಂಸ್ಕೃತಿಯೇ ? ಅವನ್ನೆಲ್ಲಾ ಉಳಿಸಿಕೊಳ್ಳೋಣ, ಆದರೆ ಖಾಸಗಿ ಸಂಪನ್ಮೂಲಗಳ ಮೂಲಕ. ಅದರಾಚೆಗೂ ಜೀವನವಿದೆ, ಜೀವನಮೌಲ್ಯಗಳಿವೆ. ಒಟ್ಟಿನಲ್ಲಿ, ಅಮೂರ್ತ ಸಂಸ್ಕೃತಿಯು ಮೂರ್ತ ಜೀವನವನ್ನು – ಜೀವಗಳನ್ನು ಯಃಕಶ್ಚಿತ್ ಎನ್ನುವಂತಾಗಿಸಕೂಡದು. ಭೋಪಾಲ್ ದುರಂತ ಘಟಿಸಿದ್ದು, ಅದಕ್ಕೆ ಪ್ರತಿಯಾಗಿ ನಮ್ಮ ದೇಶ ನಿಷ್ಕ್ರಿಯವಾಗಿದ್ದು ನಮ್ಮ ಆಳುವ ವರ್ಗದವರು ಆ್ಯಂಡರ್ಸನ್ ವರ್ಗದ ಊಳಿಗದವರಾದ್ದರಿಂದ, ಉಪಜೀವಿಗಳಾಗಿರುವುದರಿಂದ. ಅಂತಹ ದರಿದ್ರದ ಸಂಬಂಧವಿಲ್ಲದಿರುವಂತೆ ಮಾಡಬೇಕಾದ್ದು ಜನರ ಐತಿಹಾಸಿಕ ಜವಾಬ್ದಾರಿ. ಅದು ವರ್ಗ ಸಮರದ ವಿಷಯ, ಮಾನವನನ್ನು ಪ್ರೀತಿಸುವ ಸಂಸ್ಕೃತಿಗಾಗಿ ನಡೆಯಬೇಕಾದ ಹೋರಾಟ. ಒಬಾಮನನ್ನು ಓಲೈಸುವುದೊಂದೇ ಜೀವನದ ಪರಮಧ್ಯೇಯ ಮಾಡಿಕೊಂಡಿರುವ ಮನಮೋಹನ ಸಿಂಗ್ ಬಳಗಕ್ಕೆ ಭೋಪಾಲ್‌ನ ನರಹತ್ಯೆ ಮಹಾಪರಾಧವೆಂದು ತೋರದಿರುವುದು ಆ ಬಳಗದ ಸಾಂಸ್ಕೃತಿಕ ಚಹರೆಯ ಸೂಚನೆ. ಎಗ್ಗಿಲ್ಲದೆ ಅಮೆರಿಕಾದ ಕಂಪನಿಗಳಿಗೆ ಆಹ್ವಾನ ನೀಡಿ ಪರಮಾಣು ಇಂಧನದಿಂದ ವಿದ್ಯುತ್ ತಯಾರಿಸಲು ಅವಕಾಶ ಮಾಡಿಕೊಡುವಾಗ, ಈ ಕಂಪನಿಗಳು ನಾಳೆ ಒಂದು ಲಕ್ಷ ಭಾರತೀಯರನ್ನು ಕೊಂದರೆ ಒಂದು ಘಮಘಮಿಸುವ ಹೂಗುಚ್ಛ ನೀಡಿ ಸನ್ಮಾನಿಸುವ ವಿಕೃತ ಮನಸ್ಸು ಈ ಬಳಗದ್ದು. ಇಲ್ಲದಿದ್ದರೆ, ಯಾವ ಷರತ್ತೂ ಇಲ್ಲದೆ ಆ ಕಂಪನಿಗಳಿಗೆ ಇಲ್ಲಿ ಲಾಭ ಮಾಡಿಕೊಳ್ಳಲು ಸ್ವಾಗತ ಕೋರುತ್ತಿರುವವರು ಇವರಾಗಿರುತ್ತಿದ್ದರೆ ? ಇಂಥವರನ್ನು ಕಟ್ಟಿಕೊಂಡು ಆಳಬೇಕು ನಮ್ಮ ದೇಶ ! ಆ್ಯಂಡರ್ಸನ್ ಜೊತೆ ಇವರೂ ತೊಲಗಿಹೋಗಿದ್ದಿದ್ದರೆ ಯಾರು ಆಳುತ್ತಿದ್ದರು, ಏಕೆ ಆಳಬೇಕಿತ್ತು!!

## ಹೀಗೊಂದು 'ಭವಿಷ್ಯ ನುಡಿ'

೧೮೯೬ರಲ್ಲಿ ಮ್ಯಾಕ್ಸ್ ನೋರ್ಡೋ ಎಂಬುವವನು 'ವಿರೋಧಾಭಾಸಗಳು' (ಪ್ಯಾರಡಾಕ್ಸ್) ಎಂಬ ಪುಸ್ತಕವನ್ನು ಪ್ರಕಟಿಸಿದ್ದ. ಅದರಲ್ಲಿ ಒಂದು ಅಧ್ಯಾಯ 'ಭವಿಷ್ಯದತ್ತ ಒಂದು ನೋಟ' ಎಂಬುದು. ಏನವನ ನೋಟ ಮತ್ತು ಅದಕ್ಕೆ ಅವನು ಜೋಡಿಸಿಕೊಂಡ ಸಾಮಗ್ರಿ ಎಂಥದು ? ಸ್ಥೂಲವಾಗಿ ಅದನ್ನು ಗಮನಿಸೋಣ :

ಕ್ರಿ.ಶ. ೮೭೧ರಲ್ಲಿ ಆಲ್‌ಫ್ರೆಡ್ ಇಂಗ್ಲೆಂಡಿನ 'ರಾಜ'ನಾಗಿದ್ದಾಗ ಸುಮಾರು ೨೦ ಲಕ್ಷ ಇಂಗ್ಲಿಷಿನವರಿದ್ದರು; ಅಷ್ಟೇ ಸಂಖ್ಯೆಯ ಸ್ಕಾಂಡಿನೇವಿಯನ್ನರಿದ್ದರು (ಸ್ವೀಡನ್, ನಾರ್ವೆ ಇತ್ಯಾದಿ ದೇಶಗಳವರು). ೧೮೯೬ರಲ್ಲಿ ೩೪೦ ಲಕ್ಷ ಇಂಗ್ಲಿಷಿನವರಿದ್ದಾರೆ, ೮೦ ಲಕ್ಷ ಸ್ಕಾಂಡಿನೇವಿಯನ್ನರಿದ್ದಾರೆ. ಹೀಗೇಕೆ ? ಕೇವಲ ಭೂಮಿ, ಅದರ ಫಲವತ್ತತೆ ಮತ್ತು ವಾಯುಗುಣ ಕಾರಣವಲ್ಲ. ಭೂಮಿ ಎರಡೂ ಕಡೆಯೂ ಹೆಚ್ಚುಕಡಿಮೆ ಒಂದೇ. ಅಲ್ಲದೆ, ಇಂಗ್ಲಿಷಿನವರು ತಮ್ಮ ಸಾಹಸದಿಂದಾಗಿ ವಿಶ್ವದ ಹಲವೆಡೆ ಅಧಿಕಾರ ಹೊಂದಿದ್ದಾರೆ. ಫ್ರಾನ್ಸಿನಲ್ಲಿ ೧೯ನೆಯ ಶತಮಾನದ ಆದಿಯಲ್ಲಿ ೨೨೦ ಲಕ್ಷ ಜನ ಇದ್ದವರು ಶತಮಾನದ ಕೊನೆಯ ವೇಳೆಗೆ ೩೮೦ ಲಕ್ಷ ಆಗಿದ್ದಾರೆ, ಅದೇ ಅವಧಿಯಲ್ಲಿ ಜರ್ಮನಿಯ ಜನಸಂಖ್ಯೆ ೧೬೦ ಲಕ್ಷದಿಂದ ೪೯೦ ಲಕ್ಷಕ್ಕೇರಿದೆ. ಅದು ಕೇವಲ ವಾಯುಗುಣದ ಪರಿಣಾಮವಲ್ಲ. ಹಾಗೆ ನೋಡಿದರೆ ಫ್ರಾನ್ಸಿನ ಮಣ್ಣು ಮತ್ತು ವಾಯುಗುಣ ಜರ್ಮನಿಯದಕ್ಕಿಂತ ಉತ್ತಮವಾದ್ದು, ಆದರೆ ಅವರ ಏಳಿಗೆಯ ಮಟ್ಟ ಬೇರೆ. ಇದರಿಂದ ತೀರ್ಮಾನಿಸ

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಈ ತಿಂಗಳು (೩ನೇ ಪುಟದಿಂದ)*

೨೪ ಗಂಟೆಯ ಅವಕಾಶವೂ ಇರುವುದಿಲ್ಲ. ಇಂಥವನ್ನೆಲ್ಲಾ ಆಡಬಾರದೇನೋ! ಜೂನ್ ೧೪ರಂದು ಬೆಂಗಳೂರಿನ ಒಂದು ಸಂಜೆ ಪತ್ರಿಕೆಯ ತಲೆಬರಹ ''ಶೈಲೇಂದ್ರಕುಮಾರ್ ಬಾಯಿಗೆ ಬೀಗ'' ಎಂದಿತ್ತು. ಅದೂ ಸರ್ವೋಚ್ಚ ನ್ಯಾಯಾಲಯದ ಒಂದು ತೀರ್ಪು. ಅವರಿಗೇ ಬೀಗವಾದರೆ ಇನ್ನು ಬೇರೆಯವರ ಮಾತು ಬೇಡ. ಅಂದ ಹಾಗೆ, ಸರ್ವೋಚ್ಚ ನ್ಯಾಯಾಲಯವು ನ್ಯಾ. ಶೈಲೇಂದ್ರ ಕುಮಾರ್ ಅವರ ಬಗ್ಗೆ ತೀರ್ಪು ನೀಡುವಾಗ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ಕೋರ್ಟು ಅವರಿಗೆ ಅವಕಾಶ ನೀಡಿತ್ತೆಂದು ವರದಿಯಾಗಿಲ್ಲ. ನೀಡಿದ್ದಿದ್ದರೆ ಸರ್ವೋಚ್ಚ ನ್ಯಾಯಾಧೀಶರು ಕಣ್ಣೀರು ಸುರಿಸಬೇಕಾಗುತ್ತಿರಲಿಲ್ಲವೋ ಏನೋ! (ನ್ಯಾ. ಶೈಲೇಂದ್ರಕುಮಾರ್ ಅವರ ಚರ್ಯೆ ಮತ್ತು ಮಾತು ಆಘಾತಕರವೆಂದು ನ್ಯಾಯವಾದಿ ಶ್ರೀ. ಉದಯ ಹೊಳ್ಳ ವಿವರಿಸುತ್ತಿದ್ದಾಗ ಸರ್ವೋಚ್ಚ ನ್ಯಾಯಾಲಯದ ಒಬ್ಬ ನ್ಯಾಯಮೂರ್ತಿಗಳು ಕಣ್ಣೀರು ಒರಸಿಕೊಳ್ಳುತ್ತಿದ್ದರೆಂದು ವರದಿಯಾಗಿದೆ.)

ಈ ಸಂದರ್ಭದಲ್ಲಿ ಇನ್ನೊಂದು ವಿಚಾರ : ಅಂಬಾನಿ ಸೋದರರ ವ್ಯವಹಾರಗಳ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಹಿಂದೊಮ್ಮೆ ಪ್ರಸ್ತಾಪಿಸಲಾಗಿತ್ತು. ''ನೀವೇ ಪರಸ್ಪರ ಮಾತುಕತೆಗಳಿಂದ ಬಗೆಹರಿಸಿಕೊಳ್ಳಿ'' ಎಂದು ಆ ತೀರ್ಪು. ಆ ತೀರ್ಪು ಪ್ರಕಟವಾದ ನಂತರ ಅನಿಲ್ ಅಂಬಾನಿ ಪ್ರಧಾನಿ ಮನಮೋಹನ ಸಿಂಗರ ಜೊತೆ ತೊಂಭತ್ತು ನಿಮಿಷಗಳ ಕಾಲ ಚರ್ಚೆಯಲ್ಲಿ ಪಾಲ್ಗೊಂಡಿದ್ದನಂತೆ. ಏನು ವಿಚಾರ ಅಷ್ಟು ಗಹನವಾದ ಚರ್ಚೆಗೆ ಬಂತು ? ನಮಗೆ ತಿಳಿಯದು. ಇಂಗ್ಲಿಷ್‌ನಲ್ಲಿ ''ಬೆನಿಫಿಟ್ ಆಫ್ ಡೌಟ್'' ಅನ್ನುತ್ತಾರಲ್ಲ, ಅದರ ಪ್ರಕಾರ ಇಬ್ಬರೂ ನಮ್ಮ ''ದೇಶದ ಹಿತ''ದ ಬಗೆಗೇ ಚರ್ಚಿಸಿದ್ದಿರಬೇಕಲ್ಲವೆ! ಅಥವಾ ''ಸೋದರರಿಬ್ಬರೂ ಜೊತೆಯಾಗಿ ತೀರ್ಥಯಾತ್ರೆ ಮಾಡಿ ಪುನೀತರಾಗಿ'' ಎಂದು ಅಂಬಾನಿಗೆ ಪ್ರಧಾನಿಗಳು ಉಪದೇಶ ನೀಡಿದ್ದಿರಬಹುದೆ ?

* * *

ನಮ್ಮ ರಾಜ್ಯದಲ್ಲಿ ಬಂಡವಾಳ ಹೂಡಲು ಕ್ಯೂ ನಿಂತಿದ್ದವರನ್ನೆಲ್ಲಾ ಕಲೆಹಾಕಿ ಮುಖ್ಯಮಂತ್ರಿಗಳು ಒಂದು ಮಹಾ ಅಬ್ಬರದ ಮೇಳ ನಡೆಸಿದರು. ನಮಗೆ ಲೆಕ್ಕ ಹಾಕಲಾಗದಷ್ಟು ಕೋಟಿಗಳು ಈಗಾಗಲೆ ಪೈಪಿನಲ್ಲಿವೆಯಂತೆ, ಅದು ಹರಿದುಬರಲು ಪೈಪಿನ ಈ ಕಡೆಯ ಮುಚ್ಚಳ ತೆಗೆದುಕೊಳ್ಳಬೇಕು, ಅಷ್ಟೆ. ಅಥವಾ ಆ ಕಡೆಯಿಂದ ಪೈಪಿನೊಳಕ್ಕೆ ರಭಸವಾಗಿ ಗಾಳಿ ನುಗ್ಗಿಸಿದರೆ ಈ ಕಡೆ ಬಿರಡೆ ತನಗೆ ತಾನೆ ಕಿತ್ತುಬರುತ್ತದೆಯೆಂದು ತೋರುತ್ತದೆ. ಆದರೆ ಸಮಸ್ಯೆ ಏನೆಂದರೆ ಅಷ್ಟು ರಭಸವಾಗಿ ಗಾಳಿ ನುಗ್ಗಿಸಲು ಒಂದು ಫ್ಯಾನ್ ತಯಾರಾಗಬೇಕು, ಆ ತಯಾರಿಕೆಗೆ ಹಣ ಹೂಡುವವರು ಕೂಡ ಆ ಮೇಳದಲ್ಲೇ ಇದ್ದರು! ಹಾಗಿದ್ದರೆ ಅದು ಸಿದ್ಧವಾಗುವುದೆಂದು ? ಕಾದು ನೋಡೋಣ, ಏನವಸರ! ವಸ್ತುಸ್ಥಿತಿ ಸರಳವಾಗಿದೆ, ಅದನ್ನು ತಿಳಿಯುವುದು ಕಠಿಣವೇನೂ ಅಲ್ಲ. ಬಂಡವಾಳ ಹೂಡಲು ಕಿಕ್ಕಿರಿದಿದ್ದವರಲ್ಲಿ ಈಗಾಗಲೇ ಹೂಡಿ, ನಮ್ಮಲ್ಲೇ ನೆಲೆಸಿ ಕಂಗೊಳಿಸುತ್ತಿರುವವರೇ ಹೆಚ್ಚು. ಹಿಂದೆ ಹೂಡಿದ್ದಕ್ಕೆ ನೂರಿನ್ನೂರು ಎಕರೆಗಳಷ್ಟು ಭೂಮಿ ಪಡೆದಾಗಿದೆ, ಈಗ ಒಟ್ಟು ಒಂದು ಲಕ್ಷ ಎಕರೆ ಭೂಮಿಯಲ್ಲಿ ತಮ್ಮ ಪಾಲು ಎಷ್ಟಾಗಬಹುದೆಂದು ಲೆಕ್ಕಹಾಕುತ್ತಿದ್ದಾರೆ. ಅಷ್ಟನ್ನು ಕಳೆದುಕೊಳ್ಳುವ ರೈತರ ಕನಸುಗಳು ಭಗ್ನವಾಗಿ ಇವರ ಕನಸು ಚಿಗುರುತ್ತಿದೆ. ಬಂಡವಾಳ ಹೂಡಲು ಕಾತುರರಾಗಿರುವವರಲ್ಲಿ ಭೂಕಬಳಿಕೆಯ ಉದ್ದೇಶವೇ ಮಹತ್ವದ್ದು. ''ಇಲ್ಲೂ ಟ್ರೈ ಮಾಡ್ತೀನಿ, ಬೇರೆ ಕಡೆಯೂ ಟ್ರೈ ಮಾಡ್ತಿದ್ದೀನಿ'' ಎಂದವರು ಗಣನೀಯ ಸಂಖ್ಯೆಯಲ್ಲಿದ್ದಾರೆ. ಇವರೆಲ್ಲಾ ಭರವಸೆ ಕೊಟ್ಟಿರುವ ಯೋಜನೆಗಳಿಗೆಲ್ಲಾ ಸುಮಾರು ನಾಲ್ಕೈದುಸಾವಿರ ಎಕರೆ ಭೂಮಿ ಸಾಕು, ಆದರೆ ಅವರು ಪಡೆಯಬೇಕೆಂದಿರುವುದು ಒಂದು ಲಕ್ಷ ಎಕರೆ. ಪಾಪ ಅವರೊಬ್ಬೊಬ್ಬರೂ ಗಾಲ್ಫ್ ಕೋರ್ಸ್, ಸ್ವಿಮಿಂಗ್ ಪೂಲ್, ಕ್ಲಬ್ ಎಲ್ಲಾ ಕಟ್ಟಿಕೊಳ್ಳಬೇಕಲ್ಲ! ಯಥಾಪ್ರಕಾರ ಇನ್‌ಫೋಸಿಸ್ ಮತ್ತು ವಿಪ್ರೋ ಭೂಮಿ ಬಾಚಿಕೊಳ್ಳಲು ಮುಂಚೂಣಿಯಲ್ಲಿವೆ. ಕಟ್ಟೆ ನಾಯಿಡು ಅವರು (ಇಂಗ್ಲಿಷಿನಲ್ಲಿ ಬರೆದಾಗ ಅದನ್ನು ಬೇರೆ ರೀತಿಯಲ್ಲೂ ಓದಿಕೊಂಡು ತಪ್ಪಾಗಿ ಭಾವಿಸಬಾರದು) ಅರವತ್ತುಸಾವಿರ ಹೊಸ ಮನೆಗಳಿಗಾಗಿ ಭೂಮಿ ಪಡೆಯಲಿದ್ದಾರೆ. ಒಟ್ಟಿನಲ್ಲಿ ಇಂದಿನ ಚಿನ್ನವೆಂದರೆ ಭೂಮಿ. ಅದನ್ನು ಕಳೆದುಕೊಳ್ಳಬೇಕಾಗಿ ಬರುವ ರೈತರು ಈಗಲೇ ಎಚ್ಚರ ವಹಿಸಬೇಕು. ''ನಿಮ್ಮ ಕ್ಲಬ್ಬುಗಳಿಗೆ ಭೂಮಿ ಕೊಡುವುದಿಲ್ಲ, ಅದೇನು ಕಡಿಯಬೇಕೆಂದಿದ್ದೀರೋ ಅದನ್ನು ಒಂದಷ್ಟು ಬಹುಮಹಡಿ ಕಟ್ಟಡಗಳಲ್ಲಿ ಕಡಿದುಕೊಳ್ಳಿ , ಅದಷ್ಟಕ್ಕೆ ಬೇಕಾದ ಭೂಮಿ ಬಿಟ್ಟು ಬೇರೆ ಒಂದಂಗುಲ ಭೂಮಿಯನ್ನೂ ಕೊಡೆವು'' ಎಂದು ಗಟ್ಟಿಯಾಗಿ ಹೇಳಬೇಕು. ಮುಖ್ಯಮಂತ್ರಿಗಳಿಗೆ ಆಶ್ವಾಸನೆ ನೀಡಿರುವ ಎಲ್ಲ ಉದ್ಯಮಿಗಳೂ ನಮ್ಮ ರಾಜ್ಯಕ್ಕೆ ಲಗ್ಗೆಯಿಟ್ಟರೆ ಭೂಮಿಯ ಜೊತೆಗೆ ಅವರಿಗೆ ನೀರು ಮತ್ತು ವಿದ್ಯುತ್ ಸಹ ಕೊಡಬೇಕಾಗುತ್ತದಲ್ಲ, ಎಲ್ಲಿಂದ ತಂದು ಕೊಡಬೇಕು ? ಭೂಮಿಯನ್ನೇನೋ ರೈತರಿಂದ ಕಿತ್ತುಕೊಂಡು ಅವರನ್ನು ನಿರ್ಗತಿಕರನ್ನಾಗಿಸಬಹುದು, ಹೇಗಿದ್ದರೂ ಅದು ನಮ್ಮ ಪರಂಪರೆ! ಆದರೆ ಜಲ ಮತ್ತು ವಿದ್ಯುತ್ ? ಮಠಗಳಲ್ಲಿ ಹೋಮ, ಜಪ, ಮಾಡಿಸಿದರಾಯಿತು; ಆಗ ಅದೂ ಸುರಿಯಲೇಬೇಕು !! ಹೇಗೂ ಬಿಡದಿಯ ನಿತ್ಯಾನಂದಸ್ವಾಮಿ ಬಂಧನದಿಂದ ಬಿಡುಗಡೆ ಹೊಂದಿದ್ದಾನೆ ಮತ್ತು ಕಂಚಿ ಕಾಮಕೋಟಿ ಸ್ವಾಮಿ ಹೇಗಿದ್ದರೂ ಜೈಲಿಗೆ ಹೋಗುವುದಿಲ್ಲ. ಅವರ ಸಹಾಯ ಪಡೆದರಾಯಿತು, ಅಲ್ಲವೆ ?

* * *

ಕಳೆದ ವರ್ಷ ನೆರೆ ಸಂತ್ರಸ್ತರಿಗಾಗಿ ಸಾರ್ವಜನಿಕರಿಂದ ಸಂಗ್ರಹಿಸಿದ ಹಣವನ್ನು ರಾಜ್ಯ ಕಾಂಗ್ರೆಸ್ ಅಧ್ಯಕ್ಷ ಆರ್. ವಿ. ದೇಶಪಾಂಡೆ 'ಗುಳುಂ' ಮಾಡಲು ಎಲ್ಲ ಏರ್ಪಾಟೂ ಮಾಡಿಕೊಂಡಿದ್ದುದು ಈಗ ಬಹಿರಂಗವಾಗಿದೆ. ಬಹಿರಂಗಪಡಿಸಿದ ಕಾರ್ಯಕರ್ತರಿಗೆ ನಾವು ಕೃತಜ್ಞರು. ಕಾಂಗ್ರೆಸ್‌ನಲ್ಲಿ ಒಳಜಗಳ ಇಲ್ಲದಿದ್ದರೆ ಇಂತಹ ನೀಚ ಅವ್ಯವಹಾರಗಳು ಬೆಳಕಿಗೆ ಬರುವುದಿಲ್ಲ. ಎಪ್ಪತ್ತು ಲಕ್ಷ ರೂಪಾಯಿಗಳನ್ನು ದೇಶಪಾಂಡೆ ಕದಲಿಸಲಾಗದ ಠೇವಣಿಯನ್ನಾಗಿ ಇಟ್ಟಿದ್ದಾರಂತೆ. ಅವರದು ಬಹಳ ದೂರದೃಷ್ಟಿ: ಈ ವರ್ಷದ ನೆರೆ ಸಂತ್ರಸ್ತರಿಗೆ ನೀಡಿ ಧನ್ಯರಾಗಲು ಅದನ್ನು ಇಡುಗಂಟನ್ನಾಗಿ ಇಟ್ಟುಕೊಂಡಿದ್ದಾರೆ! ಬೇರೆಯಂತೆ ಅವರು ಆ ಹಣವನ್ನು ಪೋಲು ಮಾಡಿರುವುದು ಅವರ ಪ್ರಕಾರ ಕೇವಲ 'ಜುಜುಬಿ' ಮೊತ್ತ. ಕಾಂಗ್ರೆಸ್ ಸ್ವಯಂಸೇವಕರಿಗೆ ಸಮವಸ್ತ್ರ ಹೊಲಿಸಿಕೊಟ್ಟಿದ್ದಾರಂತೆ. ಪಾಪ, ಆ ಸೇವಕರಿಗೆ ಸೇವೆ ಸಲ್ಲಿಸುವ ಅವಕಾಶ ಇನ್ನೂ ದೊರೆತಿಲ್ಲ. ದೇಶಪಾಂಡೆಯಂತಹ ಮಹಾಪಿಂಡಗಳು ನಮ್ಮ ರಾಜ್ಯದ ತಲೆಯ ಮೇಲಿನ ದೊಡ್ಡ ಬಂಡೆಗಳು. ದೇಶಪಾಂಡೆ ಮಗ ಒಬ್ಬರು ಮುಂಬೈನಲ್ಲಿ ವಕೀಲರು. ಅವರಿಗೆ ಅಗಾಧ ಆದಾಯವಿರಬೇಕು, ಏಕೆಂದರೆ ಪಾಲ್ಖಿವಾಲಾಗೆ ಕೂಡ ಇರದಿದ್ದಂತಹ ಮೂರು ಸಾವಿರ ಚದರ ಅಡಿ ವಿಸ್ತೀರ್ಣದ ಕಚೇರಿ ಈ ವಕೀಲರಿಗೆ ಮುಂಬೈನ ನಾರಿಮನ್ ಪಾಯಿಂಟ್‌ನಲ್ಲಿದೆ. ಬೇರೆಬೇರೆ ದಶಕಗಳ ಸಂತ್ರಸ್ತರ ಹಣ ತಂದೆಯಿಂದ ಅವರಿಗೆ ದೊರಕಿರಲಾರದು, ಅಲ್ಲವೆ ? ಅದೇನೇ ಇರಲಿ, ಇಂತಹ ಅಧ್ಯಕ್ಷರನ್ನು ಹೊಂದಿರುವ ಕಾಂಗ್ರೆಸ್ ನಮ್ಮ ದೇಶವನ್ನು ಮುನ್ನಡೆಸುವುದು ಯಾವ ದಾರಿಯಲ್ಲೆಂಬುದು ಸ್ಪಷ್ಟವಾಗಿದೆ. ಎಲ್ಲ ಪಕ್ಷಗಳಲ್ಲಿಯೂ ಇದ್ದು 'ಅಪಾರ ಅನುಭವ' ಹೊಂದಿರುವ ದೇಶಪಾಂಡೆಯವರು ಬೇರೆಲ್ಲ ಶಾಸಕರಿಗಿಂತಲೂ ಅತಿಹೆಚ್ಚಿನ ಪ್ರಮಾಣದ ಆಸ್ತಿ ಹೊಂದಿರುವುದು ಆಶ್ಚರ್ಯಕರವಲ್ಲ. ಅವರಿಗೆ ಯಾವ ಲೋಕಾಯುಕ್ತ ಏನು ಮಾಡಿಯಾನು! ಗಣಿ ಮಾಲಿಕ ರೆಡ್ಡಿಯವರಿಗೆ ಸರ್ವೋಚ್ಚ ನ್ಯಾಯಾಲಯದ ಆಶೀರ್ವಾದವಿದ್ದರೆ ದೇಶಪಾಂಡೆಗೇಕೆ ಬೇಡ!

* * *

ಮಮತಾ ಬ್ಯಾನರ್ಜಿ ಪಶ್ಚಿಮ ಬಂಗಾಳದ ಅನಭಿಷಿಕ್ತ ರಾಣಿ. ಬೇಗ ಅಭಿಷೇಕವೂ ಆಗಿ ಮುಖ್ಯಮಂತ್ರಿಯಾಗಲು ಅವರಿಗೆ 'ಗ್ರಹಗತಿ' ಚೆನ್ನಾಗಿದೆ. ಏಕೆಂದರೆ ದೀದಿಗೆ ಮತದಾರರ ಆಶೀರ್ವಾದವಿದೆ, ಜೊತೆಗೆ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದಿಂದ ಬೇಸತ್ತ 'ಬುದ್ಧಿಜೀವಿ'ಗಳ ಮಾರ್ಗದರ್ಶನವಿದೆ. ಅಂಥವರಲ್ಲಿ ಒಬ್ಬರಾದ ಖ್ಯಾತ ಕಲಾವಿದೆ ಅಪರ್ಣಾ ಸೇನ್ ಇತ್ತೀಚೆಗೆ ಮಮತಾ ಬಗೆಗೂ ಬೇಸತ್ತು ಹೇಳಿದರು, ''ನಮ್ಮ ರಾಜ್ಯಕ್ಕೆ ಪರ್ಯಾಯ ಬೇಕು, ಸಿ.ಪಿ.ಎಂ. ಸಾಕಾಗಿದೆ; ಆದರೆ ಮಮತಾ ಅಂತಹ ಪರ್ಯಾಯವಲ್ಲ'', ಎಂದು. ಹಾಗಿದ್ದರೆ ಆಕೆಯನ್ನು ಬೆಂಬಲಿಸಿ ಬೆಳೆಸಿದ್ದೇಕೆ ? ದೆಹಲಿಯಿಂದ ದೂರವಿದ್ದುಕೊಂಡೇ ರೈಲ್ವೆ ಸಚಿವಾಲಯಕ್ಕೆ ನಾಯಕತ್ವ ಕೊಡುವ ಮಮತಾ ಅವರ ರಾಜಕೀಯವು ಅವರ ಕಟ್ಟಾ ಬೆಂಬಲಿಗರಿಗೆ ಇಬ್ಬಂದಿಯನ್ನುಂಟುಮಾಡಿದೆ. ಅಲ್ಲದೆ, ಆಕೆಯ ಅದ್ಭುತ ರಾಜಕೀಯ ತಂತ್ರವು ಮೌಲ್ಯಗಳ ಗೊಡವೆಗೆ ಹೋಗದೆ ಬೇರೆಂಥವೋ ಲೆಕ್ಕಾಚಾರಗಳಲ್ಲಿಯೇ ಪರ್ಯವಸಾನವಾಗುತ್ತದೆ. ದಕ್ಷಿಣ ಕೊಲ್ಕತ್ತಾದ ಎಲ್ಲೆಯಲ್ಲಿ ಹಿಂದಿನ ಪೂರ್ವ ಪಾಕಿಸ್ತಾನದಿಂದ ಓಡಿಬಂದ ನಿರಾಶ್ರಿತರಿಗೆ ವಸತಿ ಕಲ್ಪಿಸಿಕೊಡಲಾಗಿದೆ. ಅಲ್ಲಿಂದ ಪೂರ್ವಕ್ಕೆ ಹತ್ತು ಕಿಲೋಮೀಟರ್ ಹೋದರೆ ಮಮತಾ ಸೋದರನ ಸಾಮ್ರಾಜ್ಯದ ಆರಂಭ. ಅಲ್ಲೆಲ್ಲಾದರೂ ನೀವು ಮನೆ ಕಟ್ಟಿಕೊಳ್ಳಬೇಕಾದರೆ ಆತನಿಂದಲೇ ಸಿಮೆಂಟ್, ಉಕ್ಕು ಮುಂತಾದುವನ್ನು ಕೊಳ್ಳಬೇಕೆಂಬುದು ಮಮತಾ ಬಣದ ಅಲಿಖಿತ ನಿರ್ದೇಶನ. ಇವೆಲ್ಲಾ ಚಿಕ್ಕ ವಿಷಯಗಳು. ದೊಡ್ಡ ವಿಷಯವೇನೆಂದರೆ ಯಾರಿಗೂ ತಿಳಿಯದ ಗುಟ್ಟು ಮಮತಾ ದೀದಿಗೆ ತಿಳಿಯುತ್ತದೆ. ಉದಾಹರಣೆಗೆ, ರೈಲು ಹಳಿ ತಪ್ಪಿಸುವುದು, ಹಳಿಯನ್ನು ಬಾಂಬಿನಿಂದ ಸಿಡಿಸುವುದು ಮೊದಲಾದ ಪಾಪಕೃತ್ಯಗಳನ್ನೆಸಗುವುದು ಎಡರಂಗ ಸರ್ಕಾರದ ಪಿತೂರಿ ಎಂಬ ವಿಷಯ. ಚಿದಂಬರಂಗೂ ಗೊತ್ತಾಗದ ಈ ಗುಟ್ಟು ಆಕೆಗೆ

ಗೊತ್ತು! ಆಕೆಯ ರಾಜಕೀಯ ಷಡ್ಯಂತ್ರ ಇಂತಹ ಬೇಜವಾಬ್ದಾರಿ ಸುಳ್ಳಿನ ಕಂತೆಗಳ ಆಗರವಾಗಿದೆ. ಆಕೆಯ ಜೊತೆಗೂಡಿ ಕ್ರಾಂತಿ ಮಾಡಲು ಪಣತೊಟ್ಟಿರುವ ಪಶ್ಚಿಮ ಬಂಗಾಳ ಪ್ರೇಮಿಗಳಿಗೆ ನಿರಾಸೆಯಾಗಲು ಇನ್ನೂ ಸ್ವಲ್ಪ ಸಮಯ ಬೇಕು. ಅವರೆಗೆ ಮಮತಾ ದೀದಿ ಬೇಟೆ ಯಾಡುವವನ ನಾಯಿಯಂತೆ ಮೊಲ ಹಿಡಿಯಲು ಅವನೊಂದಿಗೆ ಓಡಬಹುದು ಮತ್ತು ಬೇಟೆಯಾಡು ವವನಿಂದ ತಪ್ಪಿಸಿಕೊಳ್ಳಲು ವೇಗವಾಗಿ ಓಡಿ ಪೊದೆಯಲ್ಲಿ ತೂರಿಕೊಳ್ಳುವ ಮೊಲದಂತೆ ಕೇಂದ್ರ ಸರ್ಕಾರದ ಪೊದೆಯಲ್ಲಿ ಅವಿತುಕೊಳ್ಳಬಹುದು. ನಕ್ಸಲೀಯರನ್ನು ದಂಡಿಸಬಯಸುವ ಚಿದಂಬರಂ ಜೊತೆ ಕೇಂದ್ರ ಸಂಪುಟದಲ್ಲಿ ಸ್ಥಾನ ಆಕೆಗೆ; ಅಂತೆಯೇ ಚಿದಂಬರಂಗೆ ಚಳ್ಳೆಹಣ್ಣು ತಿನ್ನಿಸಬಯಸುವ ನಕ್ಸಲೀಯರೊಡನೆಯೂ ಬಾಂಧವ್ಯ ಆಕೆಗೆ. ಇದಲ್ಲವೆ ಶುದ್ಧ ರಾಜಕೀಯ !!

*   *   *

ದೇವೇಗೌಡರ ಪಕ್ಷಕ್ಕೆ ಭಾರಿ ಹಣವಂತರೆಂದರೆ ವ್ಯಾಮೋಹ. ಆದ್ದರಿಂದ ವಿಜಯ ಮಲ್ಯನನ್ನು ಕಂಡಾಗ ಅದಾರೋ ಅವರ ಪಕ್ಷದ ಕಾರ್ಯದರ್ಶಿ ದಾನಿಶ್ ಅಲಿ ಇದ್ದಾರಂತಲ್ಲ, ಅವರು ದೇವೇಗೌಡರಿಗೆ ಮತ್ತು ಅವರ ಪುತ್ರದ್ವಯರಿಗೆ ಕಾಣದಾಗುತ್ತಾರೆ. ''ರಾಜ್ಯಸಭೆಗೆ ಆಲಿಯೇ ನಮ್ಮ ಪಕ್ಷದ ಅಭ್ಯರ್ಥಿ'' ಎಂದು ಹೇಳುತ್ತಿದ್ದ ದೇವೇಗೌಡ-ಪಕ್ಷ ಇದ್ದಕ್ಕಿದ್ದಂತೆ ವಿಜಯ ಮಲ್ಯನ ಸಾರಥಿ ಯಾಗುತ್ತದೆ. ರಾಜಸ್ತಾನದಲ್ಲಿ ಜೇಠ್‌ಮಲಾನಿ ಮತ್ತು ಕರ್ನಾಟಕದಲ್ಲಿ ಮಲ್ಯ ಭಾರತೀಯ ಜನತಾ ಪಕ್ಷದ ಅಭ್ಯರ್ಥಿಗಳಾಗುವುದು ಇಂತಹ ಅನಿಷ್ಟಗಳ ಹಿನ್ನೆಲೆ ಯಲ್ಲಿ. ಹಿಂದೊಮ್ಮೆ ಕುದುರೆ ರಾಮಸ್ವಾಮಿಯು ಮೂವತ್ತು ಕೋಟಿಯೋ ಏನೋ ಕೊಟ್ಟು ಕರ್ನಾಟಕದ ಉದ್ಧಾರ ಮಾಡಲು ರಾಜ್ಯಸಭೆಗೆ ಹೋಗಿದ್ದನೆಂದು ಪ್ರತೀತಿ. ವಿಜಯ ಮಲ್ಯ ಅದನ್ನು ಎರಡನೆಯ ಬಾರಿಗೆ ಮಾಡುತ್ತಿರುವುದು ಕರ್ನಾಟಕದ ಪುಣ್ಯ !! ಜೆಡಿ(ಎಸ್) ಎಂದು ಅರ್ಥರಹಿತ ಹೆಸರನ್ನು ಹೊಂದಿದ ಪಕ್ಷದ ಶಾಸಕರಿಗೆ ತೆವಳುವ ಬದಲು ಸ್ವಂತ ಕಾಲಿನ ಮೇಲೆ ನಿಲ್ಲುವ ಸಾಮರ್ಥ್ಯ ಎಂದಾದರೊಂದು ದಿನ ದೊರಕ ಲೆಂದು ಆಶಿಸೋಣ. ಸದ್ಯಕ್ಕಂತೂ ದೇವೇಗೌಡರ ಮುಂದೆ ಅವರೆಲ್ಲಾ ಮಂಡಿಯೂರಿ ಕುಳಿತಿದ್ದಾರೆ. ಹಾಗೇ ಕೂತಿದ್ದರೆ ಮೊಳೆಗಳೆಲ್ಲಾ ಹುಳಬಿದ್ದು ಹಾಳಾದಾವು, ಜೋಕೆ.

[signature]

*ಸಂಪಾದಕೀಯ (೫ನೇ ಪುಟದಿಂದ)*

ಬಹುದಾದ್ದೇನು ? ದೈಹಿಕ ಅನನ್ಯತೆ ಪ್ರತಿಯೊಂದು ದೇಶಕ್ಕೂ ಇದೆ; ಬೇರೆ ದೇಶಗಳವರ ರಕ್ತ ಬೆರೆತಾಗ ಅದು ವೃದ್ಧಿಯಾಗಬಹುದು, ಇಲ್ಲವೆ ಕ್ಷೀಣಿಸಬಹುದು. ಅಸ್ತಿತ್ವದ ಪ್ರಾಕೃತಿಕ ಸನ್ನಿವೇಶವು ಅನುಕೂಲಕರವಾಗಿದ್ದರೆ ಒಂದು ಗಹನವಾದ ಚಾರಿತ್ರಿಕ ಫಲಿತಾಂಶ ಮೂಡುತ್ತದೆ; ಅದನ್ನು ಯಾವ ಮಾನವಶಕ್ತಿಯೂ ತಡೆಯಲಾರದು. ಪಕ್ಕದವನು ಶತಮಾನದಿಂದ ಶತಮಾನಕ್ಕೆ ಸೊರಗಿ ಹೋಗುತ್ತಿರುತ್ತಾನೆ, ಕಡೆಗೆ ನಷ್ಟವಾಗುತ್ತಾನೆ. ಈಗ ನೋಡಿ, ಒಟ್ಟಾರೆಯಾಗಿ ಯೂರೋಪಿನ ಜನ ತಮ್ಮ ಖಂಡದ ಹೊರಗೆಲ್ಲಾ ಪಸರಿಸಿಹೋಗಿದ್ದಾರೆ, ಆದರೆ ಅವರಿಗೆ ಎಲ್ಲಿಯಾದರೂ ಪ್ರತಿರೋಧ ಬಂದಿತೆ ? ಕನಿಷ್ಠ ಪ್ರತಿರೋಧವಿರುವ ಕಡೆಗೆ ಅವರು ಮೊದಲು ಹೋಗುತ್ತಾರೆ, ಆಮೇಲೆ ವಿಸ್ತರಿಸಿ ಕೊಳ್ಳುತ್ತಾರೆ. ಆದ್ದರಿಂದಲೇ ಮೊದಲು ಆಫ್ರಿಕಾಕ್ಕೆ ಹೋದದ್ದು. ಅಲ್ಲಿಯ ಪಾಪದ ಜನ ಏನು ಮಾಡಿಯಾರು ? ಅವರಿಗೆ ಭವಿಷ್ಯವಿಲ್ಲ, ಮೊದಲು ಇರುವುದಷ್ಟನ್ನು ಕಳೆದು ಕೊಳ್ಳುತ್ತಾರೆ, ಆಮೇಲೆ ನಾಶವಾಗಿ ಹೋಗುತ್ತಾರೆ! ಈ ಪ್ರಕ್ರಿಯೆ ಮುಂದುವರಿಯುತ್ತದೆ. ಕ್ರಮೇಣ ಬೇರೆ ಕೆಳಮಟ್ಟದ ಜನಾಂಗಗಳೂ ನಶಿಸಿಹೋಗುತ್ತವೆ. ಅವಕ್ಕೆ ಗತ್ಯಂತರವೇ ಇಲ್ಲ. ಕರಿಯರು, ಹಳದಿಯವರು, ಕೆಂಚಿಗರು ಎಲ್ಲಾ ಬಿಳಿಯರ ದ್ವೇಷಿಗಳಾಗುತ್ತಾರೆ, ಶತ್ರು ಗಳಾಗುತ್ತಾರೆ. ಬಿಳಿಯರಾದರೂ ಏನು ಮಾಡುತ್ತಾರೆ ? ಇತರರಿಗೆ ಅಸ್ತಿತ್ವವು ಕಠಿಣವಾಗುವಂತೆ ಇಲ್ಲವೆ ಅಸಾಧ್ಯ ವಾಗುವಂತೆ ಮಾಡುತ್ತಾರೆ. ಬಿಳಿಯರಿಗೆ ಸಹ ಮೊದಲು ಕೆಲವು ಪಶು-ಪ್ರಾಣಿಗಳು ಹಿಂಸೆ ನೀಡುತ್ತಿರಲಿಲ್ಲವೆ ? ಅವನ್ನೇನು ಮಾಡಿದರು ? ತಗ್ಗಿ-ಬಗ್ಗಿ ನಡೆಯುವಂತೆ ಮಾಡಿದರು. ತಮ್ಮ ಮಕ್ಕಳು, ದನ-ಕರು, ನೆಲ-ಹೊಲ ಎಲ್ಲವನ್ನೂ ರಕ್ಷಿಸಿಕೊಳ್ಳಲು ಇದು ಅಗತ್ಯವಾಗಿತ್ತು. ಈಗಲೂ ಮಾಡುವುದು ಅದನ್ನೇ, ಹಾಗೆಯೇ. ಆಫ್ರಿಕಾ ಮತ್ತು ಇಂಡಿಯಾ ದೇಶಗಳಲ್ಲಿ ಕ್ರೂರ ಪ್ರಾಣಿಗಳಿವೆಯಲ್ಲ, ಅವನ್ನು ಹಿಮ್ಮೆಟ್ಟಿಸಿದಂತೆ ಅಲ್ಲಿಯ ಜನರನ್ನೂ ಹಿಮ್ಮೆಟ್ಟಿಸ ಲಾಗುತ್ತದೆ. ಯೂರೋಪಿನಲ್ಲೂ ಕರಡಿ, ತೋಳ, ಎಮ್ಮೆ ಮುಂತಾದವು ಕಾಡುಗಳಲ್ಲಿ ತುಂಬಿಕೊಂಡಿದ್ದವು. ಅವನ್ನು ಹೇಗೆ ನಡೆಸಿಕೊಳ್ಳಲಾಯಿತು ? ಕರಿ-ಹಳದಿ-ಕೆಂಪು ಜನರಿದ್ದಾರಲ್ಲಾ, ಅವರ ಭವಿಷ್ಯವು ಈ ಕಾಡುಪ್ರಾಣಿಗಳ ಭವಿಷ್ಯಕ್ಕಿಂತಲೂ ಭಿನ್ನವೇನಲ್ಲ.

– ಅಮೆರಿಕಾದಲ್ಲಿ ಐಸೆಂಕ್ ಎಂಬ ಮನೋವಿಜ್ಞಾನಿ (ಅಥವಾ ಮನೋ-ಅಜ್ಞಾನಿ) ಕಳೆದ ದಶಕದವರೆಗೂ ಒಂದು ಸಿದ್ಧಾಂತವನ್ನು ಪ್ರಚುರಪಡಿಸುತ್ತಿದ್ದ. ಅವನ ಪ್ರಕಾರ ಬಿಳಿಯರು ಸಹಜವಾಗಿಯೇ ಇತರರಿಗಿಂತ ಹೆಚ್ಚು ಬುದ್ಧಿವಂತರು, ಅವರ ಐ.ಕ್ಯೂ. ಬಹಳ ಜಾಸ್ತಿ. ಆದ್ದರಿಂದ ಅವರ ಸಂತಾನ ಮಾತ್ರವೇ ವೃದ್ಧಿಯಾಗುವಂತೆ ಮಾಡಿದರೆ ಕೆಲಸಕ್ಕೆ ಬಾರದ ದಡ್ಡ-ಗೊಡ್ಡು ಜನ ಭೂಮಿಗೆ ಭಾರವಾಗುವುದಿಲ್ಲ, ಹಾಗೆ ಮಾಡಬೇಕು, ಎಂದು. ಹಿಟ್ಲರನ ಮೂಲ ಸಿದ್ಧಾಂತವೂ ಇದೇ ಆಗಿತ್ತು. ಅವನನ್ನು ಅಣಕಿಸಲೆಂದೋ ಏನೋ, ಕೆಲವು ಆಧುನಿಕ ಮನೋ-ಅಜ್ಞಾನಿಗಳು 'ಸಹಜವಾಗಿಯೇ' ಹೆಣ್ಣಿನ ಮಿದುಳು ಗಂಡಿನ ಮಿದುಳಿಗಿಂತಲೂ ಚಿಕ್ಕದು, ಅಶಕ್ತವಾದ್ದು, ಎಂದು ಪುಸ್ತಕಗಳನ್ನು ಬರೆದಿದ್ದಾರೆ. ನಮ್ಮ ದೇಶದಲ್ಲಿ ಶ್ರೇಷ್ಠ - ಕನಿಷ್ಠ ಎಂಬ ಶ್ರೇಣೀಕರಣದಲ್ಲೂ ಇಂತಹ ಭಾವನೆಯು ಗುಪ್ತವಾಗಿ ಕೆಲಸ ಮಾಡಿದೆ ಎನ್ನಬಹುದು. ವಿಶ್ವದ ಜನರನ್ನು ನಾಗರಿಕರನ್ನಾಗಿಸಲು ಭಗವಂತ ಬಿಳಿಯರ ಹೆಗಲ ಮೇಲೆ ಹೊರೆ ಹೊರಿಸಿ ದ್ದಾನೆಂಬ ಮಾತನ್ನು ಬಿಳಿಯರ ಪ್ರತಿನಿಧಿಗಳು ೨೦ನೆಯ ಶತಮಾನ ಪೂರ್ತಿ ಹೇಳುತ್ತಲೇ ಬಂದರು. ಆ ಹೊರೆಯನ್ನು ಇಳಿಸಿಕೊಳ್ಳಲು ಆಫ್ರಿಕಾದ ಲೂಟಿಯಾಯಿತು, ವಿಯೆಟ್ನಾಂ ಅನ್ನು ನೆಲಸಮ ಮಾಡಲಾಯಿತು. ಇಂಥದೇ 'ಹೊರೆ' ಯನ್ನು ಭಾರತದಲ್ಲಿ ಬ್ರಿಟಿಷರು ಹೇಗೆ ಹೊತ್ತರೆಂಬುದನ್ನು ಲಾಲಾ ಲಜಪತ ರಾಯ್ ಸುಮಾರು ಒಂದು ಶತಮಾನದ ಹಿಂದೆಯೇ ''ಭಾರತಕ್ಕೆ ಇಂಗ್ಲೆಂಡಿನ ಋಣ'' ಎಂಬ ತಮ್ಮ ಉದ್ಗ್ರಂಥದಲ್ಲಿ ಅಂಕಿ-ಸಂಖ್ಯೆಯೊಂದಿಗೆ ದಾಖಲಿ ಸಿದ್ದಾರೆ. ಆಗ್ಗೆ ಭಾರತದಿಂದ ಲೂಟಿಯಾಗಿದ್ದ ಸಂಪತ್ತು ಹಲವು ಕೋಟಿ ಪೌಂಡುಗಳಷ್ಟು; ಆಮೇಲೆ ನಡೆದದ್ದು ಇನ್ನಷ್ಟು ಕೊಸರು.

ಅದಿರಲಿ, ಭಾರತದ ಸರ್ಕಾರ, ಮಾಧ್ಯಮಗಳು ಮತ್ತು ಒಂದು ವಿಭಾಗದ ಜನ ನಡೆದುಕೊಳ್ಳುವುದನ್ನು ನೋಡಿದರೆ ನೋರ್ಡೋ ನುಡಿದಿದ್ದ ಭವಿಷ್ಯ ನಿಜವಾಗಿಬಿಡುತ್ತದೇನೋ ಎಂಬ ಆತಂಕ ಮೂಡುತ್ತದೆ. ಆರ್ಯ ಮತ್ತು ದ್ರಾವಿಡ ಜನಾಂಗಗಳು ನೈಚ್ಯಾನು ಸಂಧಾನದಲ್ಲಿ ಅಗ್ರರು ; ಆದ್ದರಿಂದಲೇ ಬಿಳಿಯರು ಮತ್ತು ಬಿಳಿಯರದು ಎಂದ ತಕ್ಷಣ ಒಂದು ರೀತಿಯ ಆರಾಧನಾ ಮನೋಭಾವ ಪ್ರಜ್ವಲಿಸುತ್ತದೆ. ಸಾಹಿತ್ಯ, ಮಾಧ್ಯಮಗಳು, ಸಿನಿಮಾ ಮುಂತಾದವುಗಳಲ್ಲಿ ಇದು ಎದ್ದುಕಾಣುತ್ತದೆ. ಟೈಗರ್ ವುಡ್ಸ್‌ನ ಪತ್ನಿ-ಉಪಪತ್ನಿಯರ ಮಾಹಿತಿಯನ್ನು ನೋಡಿ : ಅದನ್ನು ಕಟ್ಟಿಕೊಂಡು ನಮಗೇನಾಗಬೇಕೆಂದು ನಮ್ಮ ಪತ್ರಿಕೆಗಳೆಂದೂ ಭಾವಿಸಲಿಲ್ಲ. ಸಲ್ಮಾನ್ ರಶ್ದಿಯ ಒಂದು ಕಾಲದ ಹೆಂಡತಿಯೊಬ್ಬಳಿಗೆ ಈಗ ಮಗುವಾಗು ತ್ತದಂತೆ, ಆದರೆ ಅದರಪ್ಪ ಯಾರೆಂದು ಅವಳು ಹೇಳುವುದಿಲ್ಲವಂತೆ. ಇದು ನಮ್ಮ ಪತ್ರಿಕೆಗಳಲ್ಲಿ ಪದೇ ಪದೇ ಕಾಲಂಗಟ್ಟಲೆ ಬರುವ ಸಮಾಚಾರ! ಇಂತಹ ಒಂದು ಲಕ್ಷ ಉದಾಹರಣೆಗಳು ನಮ್ಮೆಲ್ಲರ ಅನುಭವದ ಪರಿಧಿಯಲ್ಲಿವೆ. ಬಿಳಿಯರೆಂದರೆ ಮನಮೋಹನ ಸಿಂಗ್ ಬೆಚ್ಚಿಬೀಳುತ್ತಾರಲ್ಲ, ಅದು ಇದರ ಇನ್ನೊಂದು ಮುಖ. ಅಂತಹ ಮುಖ ಆಫ್ರಿಕದಲ್ಲಿ ಕಡಿಮೆಯಾಗಿದೆ ಮತ್ತು ಭಾರತದಲ್ಲಿ ಹೆಚ್ಚಾಗಿದೆ. ವಿಶ್ವಕಪ್ ಪಂದ್ಯಗಳಲ್ಲಿ ಮೊನ್ನೆ ಮೊನ್ನೆ ಘಾನಾದ ಫುಟ್‌ಬಾಲ್ ತಂಡವು ತನ್ನ ಮೊದಲನೆಯ ಗೋಲು ಹೊಡೆದಾಗ ಇಡೀ ಆಫ್ರಿಕಾ ರೋಮಾಂಚನಗೊಂಡಿತು. ಆದರೆ ನಾವಿನ್ನೂ ಕೊಚ್ಚಿ ಹಾಕಿಸಿಕೊಳ್ಳುವ 'ಕರಡಿ-ತೋಳ-ಎಮ್ಮೆ'ಗಳಾಗಿಯೇ ಉಳಿದಿದ್ದೇವೆಯೆ ? ಜನಾಂಗೀಯ ದರ್ಪವನ್ನು ಖಂಡಿಸುವ ನಾವು ಆ ದರ್ಪವನ್ನಿಳಿಸಲು ಏನು ಮಾಡುತ್ತೇವೆಂಬುದು ಮೂಲಪ್ರಶ್ನೆ. ಸ್ವಂತಿಕೆ ಎಂಬುದು ಭೂತಕಾಲದ ವೈಭವೀಕರಣದಿಂದ ಬರುವುದಲ್ಲ, ವರ್ತಮಾನದ ಸನ್ನಿವೇಶಗಳನ್ನು ಎದುರಿಸುವ ಮುಖಾಂತರ ಬರುವಂಥದು. ನಮ್ಮ ಬಹಳಷ್ಟು ಸಮಸ್ಯೆಗಳಿಗೆ ಪರಿಹಾರ ಅದು; ಸುಮ್ಮನೆ ವರ್ಷಗಟ್ಟಲೆ 'ಅಧ್ಯಾಸ ಭಾಷ್ಯ'ವನ್ನು ಕುರಿತು ನೀಡುವ ಮತ್ತು ಕೇಳುವ ಶುಷ್ಕ ಉಪನ್ಯಾಸಗಳಿಂದ ಅದು ಗಿಟ್ಟುವುದಿಲ್ಲ. ಇಂದಿನ ನಮ್ಮ ವ್ಯವಹಾರಗಳಲ್ಲಿ, ಆಂತರಿಕ ಸಂಬಂಧಗಳಲ್ಲಿ, ಸಂಸ್ಕೃತಿಯನ್ನು ಅರ್ಥೈಸಿಕೊಳ್ಳುವಲ್ಲಿ, ಅಧ್ಯಾಸ (ಅಂದರೆ, ಅದಲ್ಲದ್ದನ್ನು ಅದೆಂದು ತಿಳಿಯುವುದು; ಅತಸ್ಮಿನ್ ತದ್ಬುದ್ಧಿಃ) ಎಲ್ಲಿದೆ ಎಂಬುದನ್ನು ಅರಿಯುವ ಧೈರ್ಯ ನಮ್ಮದಾಗಬೇಕು.

[signature]




**ಜೂನ್ ಸಂಚಿಕೆ**

'ಈ ತಿಂಗಳು' ಮತ್ತು 'ಸಂಪಾದಕೀಯ' ನಕ್ಸಲರ ನಿಗ್ರಹ ಕುರಿತಂತೆ ಒಂದಿಷ್ಟು ಅನಿಸಿಕೆಗಳು :

ಇತ್ತೀಚೆಗೆ ಕೆಲವು ನ್ಯಾಯಾಧೀಶರು ಜನಪರವಾದ ನಿಲುವುಗಳನ್ನು ತಮ್ಮ ತೀರ್ಪುಗಳಿಗೆ ಪೀಠಿಕೆಯಾಗಿ ಉಚ್ಚರಿಸಿದ್ದಾರೆ; ಆದರೆ ಅವರ ತೀರ್ಪುಗಳು ಹಿಂದಿನಂತೆಯೇ ಇವೆ. ಇದಕ್ಕೆ ಅವರು ನೀಡುವ ಕಾರಣಗಳಲ್ಲಿ ಒಂದು, ತಾವು ಶಾಸನಸಭೆಗಳು ಜಾರಿಗೊಳಿಸುವ ಕಾನೂನು ಸಂವಿಧಾನ ಬದ್ಧವಾಗಿದೆಯೇ ಎಂಬುದನ್ನು ಪರೀಕ್ಷಿಸುವವರೇ ವಿನಾ ಸ್ವತಃ ಕಾನೂನು ರೂಪುಗೊಳಿಸುವವರಲ್ಲ, ಎಂಬುದು.

ಸ್ವಲ್ಪ ಹಿಂದೆ ಕೇಳಿಬರುತ್ತಿದ್ದ ಆರೋಪಗಳನ್ನು ನೆನಪಿಸಿಕೊಳ್ಳಿ : ನ್ಯಾಯಾಧೀಶರು ಬೇರುಬಿಟ್ಟ ಹಿತಾಸಕ್ತಿಗಳನ್ನು ಪ್ರತಿನಿಧಿಸುತ್ತಾರೆ, ನ್ಯಾಯಾಧೀಶರೇ ಕಾನೂನು ಮಾಡ ಹೊರಟಿದ್ದಾರೆ, ಶಾಸನಸಭೆಗಳ ಕೆಲಸವನ್ನು ತಮ್ಮ ಮೇಲೆ ಆರೋಪಿಸಿಕೊಂಡಿದ್ದಾರೆ, ಇತ್ಯಾದಿ. ಹೀಗೆಲ್ಲ ಹೇಳುವಾಗ ಸಂವಿಧಾನದಲ್ಲಿರುವುದೆಲ್ಲ ಸಮರ್ಪಕವೆಂದು ಭಾವಿಸಿರಲಾಗುತ್ತದೆ. ಸಂವಿಧಾನ ಪೀಠವು ಬಹುಮತದಿಂದ ತೀರ್ಮಾನ ನೀಡುತ್ತದೆ. ಕಾನೂನಿನ ಲೋಪವೆಂಬ ತೀರ್ಮಾನ ಬಂದರೆ ಶಾಸನಸಭೆಯು ಅದನ್ನು ಸರಿಪಡಿಸುತ್ತದೆ; ಆದರೆ ಮಾಡಲಾದ ಕಾನೂನು ಸಂವಿಧಾನಬದ್ಧವಲ್ಲವೆಂಬ ತೀರ್ಮಾನ ಬಂದರೆ ಸಂಬಂಧಪಟ್ಟ ಸಂವಿಧಾನದ ಭಾಗಕ್ಕೆ ತಿದ್ದುಪಡಿ ತರಬೇಕಾಗುತ್ತದೆ. ಆದರೆ ನ್ಯಾಯಾಲಯವು ಸಂವಿಧಾನಕ್ಕೆ ಅಚಲವಾದ ಮೂಲ ಸ್ವರೂಪವಿದೆಯೆಂದೂ, ಅದನ್ನು ಬದಲಾಯಿಸುವಂತಿಲ್ಲ ಎಂದೂ ಹೇಳಿಬಿಟ್ಟಿದೆ. ಹಾಗಾದರೆ, ಯಾವ ತಿದ್ದುಪಡಿಗಳನ್ನು ಮಾಡಕೂಡದು ? ಅದನ್ನು ಹೇಳುವುದೂ ನ್ಯಾಯಾಲಯವೇ. ಹೀಗಾಗಿ ಅಗತ್ಯಬಿದ್ದಾಗ ಸಂವಿಧಾನಕ್ಕೆ ಮೂಲಭೂತ ಬದಲಾವಣೆ ತರುವ ಹಕ್ಕನ್ನು ತಡೆಹಿಡಿಯಲಾಗಿದೆ. ಇದು ಮೂಲತಃ ಸಂವಿಧಾನ ವಿರೋಧಿಯಲ್ಲವೆ ? ಶಾಸನಸಭೆಗಿಂತಲೂ ತಾನು ಮೇಲೆಂದು ನ್ಯಾಯಾಲಯವು ಘೋಷಿಸಿಕೊಂಡಂತಾಗುವುದಿಲ್ಲವೆ ?

ಯಾವ ಜನತೆ ತನಗೆ ತಾನು ಈ ಸಂವಿಧಾನವನ್ನು ಕೊಟ್ಟುಕೊಂಡಿತೊ, ಅದಕ್ಕೆ ಅದನ್ನು ಬೇಕಾದಂತೆ ತಿದ್ದಿಕೊಳ್ಳಲು ಪರಮಾಧಿಕಾರವಿದೆ ಎಂದು ಸ್ಥಾಪಿಸಿಕೊಳ್ಳಲು ಚಳುವಳಿ ಮಾಡಬೇಕಾದ ಕಾಲ ಒದಗಿಬಂದಿದೆ. ಇತ್ತೀಚೆಗೆ ಅಂಬಾನಿ ಹಾಗೂ ಅರ್ಕಾವತಿ ಬಡಾವಣೆ ತೀರ್ಮಾನಗಳಲ್ಲಿ ಯಾವುದು ಪ್ರಗತಿಪರವಾಗಿ ಕಂಡಿತೋ ಅದು ಕೇವಲ ಪೀಠಿಕೆಯ ಸ್ವರೂಪದಲ್ಲಿದೆ. ತೀರ್ಮಾನ ಹಿಂದಿನಂತೆಯೆ ಜನವಿರೋಧಿಯಾದುದು. ಅಂತಹ ಪೀಠಿಕೆಯಿಂದೇನು ಪ್ರಯೋಜನ ? 'ಗಾಣಿಗ ಅಯ್ಯೋ ಅಂದ್ರೆ ನೆತ್ತಿ ತಂಪಾಗೋಲ್ಲ' ಅನ್ನೋ ಹಾಗೆ ! ಅಥವಾ, ಸಂವಿಧಾನದಲ್ಲಿ ನಿರ್ದೇಶಕ ತತ್ತ್ವಗಳಿಲ್ಲವೆ, ಹಾಗೆ. ನಿರ್ದೇಶಕವೆಂದರೆ 'ಆದೇಶ' ಅಲ್ಲ ಅನ್ನುತ್ತವೆ ನ್ಯಾಯಾಲಯಗಳು, ಆದ್ದರಿಂದ ಆ ನಿರ್ದೇಶನಗಳನ್ನು ಆದೇಶಗಳನ್ನಾಗಿಸಲು ಜನತೆ ಈಗ ಹೋರಾಡಬೇಕು. ನಮ್ಮ ಇಂದಿನ ಆಳುವ ವರ್ಗದ ರಾಜಕೀಯ ಪಕ್ಷಗಳು ಅದಕ್ಕೆ ಮುಂದಾಗುವುದಿಲ್ಲ.

ಬೆಂಗಳೂರು **ಪಾರ್ಥ**

**ನಾಗರಿಕರ ಅನಾಗರಿಕತನ**

ಅತೀ ವೇಗವಾಗಿ ಅಭಿವೃದ್ಧಿ ಹೊಂದುತ್ತಿರುವ ಜಗತ್ತಿನ ಎರಡನೇ ದೇಶ ಭಾರತ ಎಂದು ಸಾರುತ್ತಿರುವ ಸರಕಾರಕ್ಕೆ ಸವಾಲಾಗಿರುವ ಖಾಪ್ ಪಂಚಾಯಿತಿಗಳ ನಡವಳಿಕೆಗಳನ್ನು ಅನಾವರಣಗೊಳಿಸಿರುವ ಲೇಖನವಿದು (ಜೂನ್ ೨೦೧೦). ಪ್ರಜಾತಂತ್ರದ ಮೂಲ ಉದ್ದೇಶವನ್ನು ನಿರ್ನಾಮ ಮಾಡಿ, ಮೂಢನಂಬಿಕೆಗಳನ್ನು ಶಾಸನವನ್ನಾಗಿ ಇರಿಸಿಕೊಂಡು, ಪುರುಷಪ್ರಧಾನ ವ್ಯವಸ್ಥೆಯನ್ನು ವೈಭವೀಕರಿಸುವ ಖಾಪ್ ಜಾತಿ ಪಂಚಾಯಿತಿಗಳು ದೇಶದ ಕಾನೂನು ವ್ಯವಸ್ಥೆ ಕುರಿತು ಅಣಕವಾಡುತ್ತಿರುವುದು ಆತಂಕದ ವಿಚಾರವಾಗಿದೆ. ಭಾರತದ ಶಾಸಕಾಂಗಗಳ




ಮೂಲ ಉದ್ದೇಶ ಅಧಿಕಾರವನ್ನು ಗಳಿಸುವುದು ಮತ್ತು ಅದನ್ನು ಉಳಿಸಿಕೊಳ್ಳುವುದರಿಂದಾಗಿ ಸಮುದಾಯಗಳ ಅತಿರೇಕವನ್ನು ಸಹಿಸಿಕೊಳ್ಳುವುದು ಅವರ ಆಜನ್ಮಸಿದ್ಧ ಹಕ್ಕಾಗಿರುತ್ತದೆ. ಕಾರ್ಯಾಂಗಗಳು ಸಾಮಾನ್ಯವಾಗಿ ಶಾಸಕಾಂಗಗಳ ಆಜ್ಞಾನುವರ್ತಿಗಳಾಗಿರುವುದರಿಂದಾಗಿ ಸಾಮಾಜಿಕ ಸಮಸ್ಯೆಗಳು ಶಮನವಾಗುವ ಬದಲು ಉಲ್ಬಣಗೊಳ್ಳುವುದು ಸರ್ವೇಸಾಮಾನ್ಯವಾಗಿದೆ. ನ್ಯಾಯಾಂಗಗಳು ಸಾಮಾಜಿಕ ಅವ್ಯವಸ್ಥೆಯನ್ನು ಸರಿಪಡಿಸುವಲ್ಲಿ ಸಾಕಷ್ಟು ಶ್ರಮವನ್ನು ವಹಿಸಿದರೂ ಸಹ ವಿದ್ಯಾವಂತ ಹಾಗೂ ಸಿರಿವಂತ ಸಮಾಜ ತನ್ನದೇ ಆದ ದೃಷ್ಟಿಕೋನವನ್ನು ಹೊಂದಿದ್ದು ಸಾಮಾಜಿಕವಾಗಿ, ಆರ್ಥಿಕವಾಗಿ ದುರ್ಬಲರಾಗಿರುವವರ ಬದುಕಿನ ಬಗ್ಗೆ ಗಮನ ನೀಡುವುದಿಲ್ಲ, ಆದುದರಿಂದಾಗಿ ಊಳಿಗಮಾನ್ಯ ಪದ್ಧತಿಯ ಬದಲಾವಣೆ ಸಾಧ್ಯವಿಲ್ಲದಾಗಿದೆ.

ಮೈಸೂರು **ನರೇಂದ್ರ ಸಿರಕಜೆ**

**ಶಿಕ್ಷಣ ಮಾರಾಟದ ಹುನ್ನಾರ**

ಇತ್ತೀಚೆಗೆ ಮುಕ್ತಾಯಗೊಂಡ ರಾಜ್ಯ ವಿಧಾನಮಂಡಲಗಳ ಅಧಿವೇಶನದಲ್ಲಿ ರಾಜ್ಯ ಸರ್ಕಾರ ಸಾಕಷ್ಟು ಮಸೂದೆಗಳನ್ನು ಮಂಡಿಸಿ ಅನುಮೋದನೆ ಪಡೆದಿದ್ದು, ಇವುಗಳಲ್ಲಿ ಕೆಲವು ಮಸೂದೆಗಳು ಸಮಾಜದ ಮೇಲೆ ಬಹಳ ಅಪಾಯಕಾರಿಯಾದ ಪರಿಣಾಮಗಳನ್ನು ಬೀರಲಿವೆ. ಅದರಲ್ಲಿ ಮುಖ್ಯವಾಗಿ ಶಿಕ್ಷಣ ಕ್ಷೇತ್ರದ ಮೇಲೆ ಖಾಸಗಿ ಒಡೆತನವನ್ನು ಸ್ಥಾಪಿಸುವ ''ಅಜೀಂ ಪ್ರೇಂಜಿ ವಿಶ್ವವಿದ್ಯಾನಿಲಯ ವಿಧೇಯಕ ೨೦೧೦'' ಮತ್ತು ''ಅಲಯನ್ಸ್ ವಿಶ್ವವಿದ್ಯಾನಿಲಯ ವಿಧೇಯಕ ೨೦೧೦'' ಎಂಬ ಎರಡು ಮಸೂದೆಯಲ್ಲಿರುವ ಜನವಿರೋಧಿ ನಿಲುವುಗಳನ್ನು ತೆರೆದಿಡುವ ಪ್ರಯತ್ನ ಇದಾಗಿದೆ. ಮೊದಲಿಗೆ ಈ ಎರಡು ವಿಶ್ವವಿದ್ಯಾನಿಲಯಗಳು ಸಂಪೂರ್ಣ ಖಾಸಗಿ ವಿ.ವಿ.ಗಳಾಗಿದ್ದು, ಇವುಗಳನ್ನು ಖಾಸಗಿ ಕಂಪನಿಗಳಾದ ಅಜೀಂ ಪ್ರೇಂಜಿ ಪ್ರತಿಷ್ಠಾನ ಮತ್ತು ಅಲಯನ್ಸ್ ಬಿಸಿನೆಸ್ ಸ್ಕೂಲ್‌ಗಳು ಪ್ರಾರಂಭಿಸಲು ರಾಜ್ಯ ಸರ್ಕಾರ ಈಗಾಗಲೇ ಒಪ್ಪಿಗೆ ನೀಡಿದ್ದು, ಅಜೀಂ ಪ್ರೇಂಜಿ ವಿ.ವಿ. ಮಸೂದೆ ಧ್ವನಿಮತದ ಮೂಲಕ ಯಾವುದೇ ಚರ್ಚೆಯಿಲ್ಲದೆ ವಿಧಾನಸಭೆಯಲ್ಲಿ ಅಂಗೀಕಾರವಾಗಿದೆ ಮತ್ತು ಅಲಯನ್ಸ್ ವಿ.ವಿ. ಮಸೂದೆಯನ್ನು ಸದನ ಸಮಿತಿಗೆ ಒಪ್ಪಿಸಲಾಗಿದೆ. ಈ ಎರಡು ಖಾಸಗಿ ವಿ.ವಿ.ಗಳಿಗೆ ಸಂಬಂಧಿಸಿದಂತೆ ಗುರುತಿಸಬೇಕಾದ ಕೆಲವು ಅಂಶಗಳು ಹೀಗಿವೆ :

**ಅಜೀಂ ಪ್ರೇಂಜಿ :** ಈ ವಿ.ವಿ.ಯು ಪ್ರಾಥಮಿಕ ಶಿಕ್ಷಣ, ಪ್ರೌಢ ಶಿಕ್ಷಣ, ಶಾಲಾ ಗುಣಮಟ್ಟದ ಚೌಕಟ್ಟುಗಳು, ಬೋಧನೆ-ಕಲಿಕೆ, ಬೋಧಕರ ಶಿಕ್ಷಣ, ಅಭಿವೃದ್ಧಿಯ ಇತರ ಸಂಬಂಧಪಟ್ಟ ಕ್ಷೇತ್ರಗಳನ್ನು ಒಳಗೊಂಡ ಶಿಕ್ಷಣದಲ್ಲಿನ ತಂತ್ರಜ್ಞಾನ ಮತ್ತು ವಿಜ್ಞಾನಗಳು, ಸಮಾಜ ವಿಜ್ಞಾನಗಳು, ಮಾನಸಿಕ ವಿಜ್ಞಾನಗಳು ಮತ್ತು ಆಡಳಿತ ವಿಜ್ಞಾನ ಈ ರಂಗಗಳಲ್ಲಿ ವಿವಿಧ ವಿಭಾಗಗಳಲ್ಲಿ ಶಿಕ್ಷಣ, ಬೋಧನೆ, ತರಬೇತಿ, ಸಂಶೋಧನೆ ಮತ್ತು ಅಭಿವೃದ್ಧಿಯನ್ನು ಒದಗಿಸುವುದು ಮತ್ತು ಈ ರಂಗಗಳಲ್ಲಿ ಸಂಶೋಧನೆ, ಜ್ಞಾನ ಸಂವರ್ಧನೆ ಹಾಗೂ ಪ್ರಸಾರಕ್ಕೆ ಏರ್ಪಾಡುಗಳನ್ನು ಮಾಡುವುದು, ಇವುಗಳ ಜೊತೆ ಮುಖ್ಯವಾಗಿ ಬೋಧಕರಿಗೆ, ಬೋಧಕರಿಗೆ ಶಿಕ್ಷಣ ನೀಡುವವರಿಗೆ, ಉನ್ನತ ಶಿಕ್ಷಣ ಮತ್ತು ವೃತ್ತಿ ಶಿಕ್ಷಣಗಳಲ್ಲಿನ ಬೋಧಕರಿಗೆ, ಆಡಳಿತಗಾರರಿಗೆ ಮತ್ತು ಭಾರತದ ವಿವಿಧ ರಾಜ್ಯಗಳು ಮತ್ತು ವಿದೇಶಗಳಲ್ಲಿ ಶಿಕ್ಷಣ ಮತ್ತಿತರ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವಂಥ ಅಭಿವೃದ್ಧಿ ವೃತ್ತಿಗಾರರಿಗೆ ಉನ್ನತ ಗುಣಮಟ್ಟದ ತರಬೇತಿ, ಸಾಮರ್ಥ್ಯ ನಿರ್ಮಾಣ ಪ್ರಕ್ರಿಯೆ ಮತ್ತು ಅಭಿವೃದ್ಧಿ ವ್ಯವಸ್ಥೆಗಳನ್ನು ವಿನ್ಯಾಸಗೊಳಿಸಿ ಒದಗಿಸುವುದು.

ಇದರಲ್ಲಿ ಅಡಗಿರುವ ಅಪಾಯಕಾರಿ ಅಂಶವೆಂದರೆ, ಈ ವಿ.ವಿ. ಈಗಾಗಲೇ ರಾಜ್ಯದಲ್ಲಿರುವ ಸರ್ಕಾರಿ ವಿ.ವಿ.ಗಳಲ್ಲಿ ಬೋಧನೆ ಮಾಡುವ ವಿಷಯಗಳಲ್ಲದೆ ಬೋಧನೆ ಮಾಡುವ ಶಿಕ್ಷಕ, ಉಪನ್ಯಾಸಕರಿಗೆ, ಅವರಿಗೆ ಬೋಧನೆ ಮಾಡುವ ಬೋಧಕರಿಗೆ ತರಬೇತಿ ನೀಡುವ ಉದ್ದೇಶವನ್ನು ಹೊಂದಿದೆ. ಅಂದರೆ ರಾಜ್ಯದಲ್ಲಿರುವ ಎಲ್ಲಾ ಶಿಕ್ಷಕ ತರಬೇತಿ ಶಾಲಾ ಕಾಲೇಜುಗಳನ್ನು ಈ ವಿ.ವಿ.ಯ ಕಂಪನಿಯ ಆಲೋಚನೆಗಳಿಗೆ ತಕ್ಕಂತೆ ತರಬೇತಿಗೊಳಿಸುವ ಅಪಾಯ ಇದೆ. ಜೊತೆಗೆ ಈಗ ರಾಜ್ಯದಲ್ಲಿ ಶಿಕ್ಷಕರಿಗೆ ತರಬೇತಿ ನೀಡುತ್ತಿರುವ ಸರ್ಕಾರಿ ಸಂಸ್ಥೆಗಳು ಮುಂದೆ ಮುಚ್ಚಿಕೊಳ್ಳುವ ಅಪಾಯವಿದೆ.

ಈ ವಿಧೇಯಕದ ಪ್ರಕಾರ ರಾಜ್ಯದ ಘನತೆವೆತ್ತ ರಾಜ್ಯಪಾಲರು ಕೇವಲ ಈ ವಿ.ವಿ.ಯ ಸಂದರ್ಶಕರಾಗಿದ್ದು (ವಿಸಿಟರ್), ಅವರು ಪದವಿ ಪ್ರದಾನ ಸಮಾರಂಭಗಳಲ್ಲಿ ಅಧ್ಯಕ್ಷತೆಯನ್ನು ವಹಿಸುವವರು ಮಾತ್ರವಾಗಿದ್ದಾರೆ. ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಿಗೆ ಕುಲಾಧಿಪತಿಗಳಾಗಿ (ಚಾನ್ಸಲರ್) ರಾಜ್ಯಪಾಲರು ನೇಮಕಗೊಂಡಿರುತ್ತಾರೆ. ಆದರೆ ಈ ಮಸೂದೆ ಪ್ರಕಾರ ಕುಲಾಧಿಪತಿಗಳಾಗಿ ವಿ.ವಿ.ಯನ್ನು ಸ್ಥಾಪಿಸಲು ಮುಂದಾಗಿರುವ ಕಂಪನಿಯ ಹಾಲಿ ಅಧ್ಯಕ್ಷರಾದ ಅಜೀಂ ಪ್ರೇಂಜಿಯವರು ಇರುತ್ತಾರೆ, ಅಷ್ಟೇ ಅಲ್ಲದೆ ಇವರು ಜೀವನಪರ್ಯಂತ ಕುಲಾಧಿಪತಿಗಳಾಗಿರುತ್ತಾರೆ. ಜೊತೆಗೆ ವಿವಿಧ ಸಮಿತಿಗಳನ್ನು ನೇಮಕ ಮಾಡುವ, ವಿ.ವಿ.ಗಳಿಗೆ ಸಂಬಂಧಿಸಿದಂತೆ ಪ್ರವೇಶ, ಶುಲ್ಕ ನಿಗದಿ, ಪಠ್ಯಕ್ರಮ, ಆಡಳಿತ ಉಳಿದ ಎಲ್ಲ ವಿಚಾರಗಳಿಗೂ ಅಜೀಂ ಪ್ರೇಂಜಿಯವರಿಗೆ ಪರಮಾಧಿಕಾರವನ್ನು ನೀಡಲಾಗಿದೆ. ಇದನ್ನು ಯಾರೂ ಪ್ರಶ್ನಿಸುವಂತಿಲ್ಲ ಇವರೆ ಕುಲಪತಿ (ವಿ.ಸಿ.) ಮತ್ತು ಕುಲಸಚಿವರನ್ನು (ರಿಜಿಸ್ಟ್ರಾರ್) ನೇಮಕ ಮಾಡುವವರು.

ಈ ಮಸೂದೆ ಪ್ರಕಾರ ವಿ.ವಿ.ಯ ಒಟ್ಟು ಸ್ಥಾನಗಳಲ್ಲಿ ರಾಜ್ಯದ ವಿದ್ಯಾರ್ಥಿಗಳಿಗೆ ಕೇವಲ ಶೇಕಡ ೨೫ರಷ್ಟು ಸ್ಥಾನಗಳಿಗೆ ಮಾತ್ರ ಪ್ರವೇಶಾವಕಾಶವನ್ನು ಕಲ್ಪಿಸಲಾಗಿದ್ದು, ಇವರುಗಳು ಪ್ರವೇಶಕ್ಕೆ ಇರುವ ಎಲ್ಲ ಮಾನದಂಡಗಳನ್ನು ಪೂರೈಸಬೇಕು. ಇಲ್ಲದಿದ್ದರೆ ಉಳಿಯುವ ಸೀಟುಗಳನ್ನು ಹೊರ ರಾಜ್ಯದ ವಿದ್ಯಾರ್ಥಿಗಳಿಂದ ಭರ್ತಿಮಾಡಿಕೊಳ್ಳಲಾಗುವುದು. ಹಾಗಾಗಿ ಇದರಿಂದ ರಾಜ್ಯದ ವಿದ್ಯಾರ್ಥಿಗಳಿಗೆ ಹೆಚ್ಚಿನ ಪ್ರಯೋಜನವಾಗುವುದಿಲ್ಲ. ಇದು ಹೊರರಾಜ್ಯದ ಮತ್ತು ಹೊರದೇಶದ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಹಣ ಸುಲಿಗೆ ಮಾಡಿ ಲಾಭ ಮಾಡುವ ಏಕೈಕ ಉದ್ದೇಶದಿಂದ ಪ್ರಾರಂಭವಾಗುತ್ತಿದೆ. ಮತ್ತು ಇದರಲ್ಲಿ ಯಾವುದೇ ರೀತಿಯ ಮೀಸಲಾತಿಗಳ ಬಗ್ಗೆ ಪ್ರಸ್ತಾಪಿಸದೆ ಸಾಮಾಜಿಕ ನ್ಯಾಯಕ್ಕೆ ತಿಲಾಂಜಲಿ ನೀಡಲಾಗಿದೆ.

ಈ ಮಸೂದೆ ಪ್ರಕಾರ ಆಡಳಿತ ಮಂಡಳಿಯ ವಿವೇಚನೆಯಂತೆ ಶುಲ್ಕ ನಿಗದಿ ಮತ್ತು ಸಂಗ್ರಹ, ವಿದ್ಯಾರ್ಥಿಗಳಿಂದ ವಂತಿಗೆ ಮತ್ತು ಅಭಿವೃದ್ಧಿ ಶುಲ್ಕಗಳನ್ನು ವಸೂಲಿ ಮಾಡಲು ಮುಕ್ತ ಅವಕಾಶವನ್ನು ಕಲ್ಪಿಸಲಾಗಿದೆ. ಈಗಾಗಲೇ ಕರ್ನಾಟಕ ರಾಜ್ಯದಲ್ಲಿ ವಂತಿಗೆ ನಿಷೇಧ ಕಾಯ್ದೆ ಜಾರಿಯಲ್ಲಿ ಇದ್ದು ಅದಕ್ಕೆ ತದ್ವಿರುದ್ಧವಾಗಿ ವಂತಿಗೆಯನ್ನು (ಡೊನೇಷನ್) ವಿದ್ಯಾರ್ಥಿಗಳಿಂದ ವಸೂಲಿ ಮಾಡಲಾಗುವುದು ಮತ್ತು ಎಲ್ಲ ಶುಲ್ಕಗಳನ್ನು ಆಡಳಿತ ಮಂಡಳಿಯ ವಿವೇಚನೆಗೆ ತಕ್ಕಂತೆ ನಿಗದಿಪಡಿಸಲು ಅವಕಾಶಗಳಿರುವುದರಿಂದ ಅಲ್ಲಿ ಸಾಮಾನ್ಯ ಬಡ, ಮಧ್ಯಮ ವರ್ಗದ ವಿದ್ಯಾರ್ಥಿಗಳು ಶಿಕ್ಷಣ ಪಡೆಯಲು ಸಾಧ್ಯವೇ ಇಲ್ಲ.

ಈ ಕಾಯ್ದೆ ಪ್ರಕಾರ ಸಂಬಂಧಿಸಿದ ಖಾಸಗಿ ವಿ.ವಿ.ಯ ಆಡಳಿತ ಮಂಡಳಿಯು ವಿ.ವಿ.ಯ ಕಟ್ಟಡವನ್ನು ಎಲ್ಲಿ ಬೇಕಾದರೂ ನಿರ್ಮಾಣ ಮಾಡಬಹುದು ಮತ್ತು ವಿಶ್ವವಿದ್ಯಾಲಯವು ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂತಹ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ತೆರೆಯಲು ಮುಕ್ತ ಅವಕಾಶ ಕಲ್ಪಿಸಿಕೊಡಲಾಗಿದೆ. ಅಂದರೆ ಇದರ ವ್ಯಾಪ್ತಿ ಇಡೀ ರಾಜ್ಯ; ಬೇರೆ ವಿ.ವಿ.ಗಳಂತಲ್ಲ. ಇದರಿಂದ ಯಾವುದೇ ಒಂದು ವಿಶ್ವವಿದ್ಯಾಲಯಕ್ಕೆ ಇರಬೇಕಾದ ಅಗತ್ಯ ಶೈಕ್ಷಣಿಕ ವಾತಾವರಣವಿಲ್ಲವಾಗಿ ವಿ.ವಿ.ಯನ್ನು ವಾಣಿಜ್ಯ ಸಂಕೀರ್ಣವನ್ನಾಗಿ ಪರಿವರ್ತಿಸಿ ತಮ್ಮ ಉದ್ಯಮದ ಲಾಭಕ್ಕೆ ಪೂರಕವಾಗಿ ಬಳಸಿಕೊಳ್ಳುವ ಸಾಧ್ಯತೆಗಳಿವೆ.

ವಿಧೇಯಕದ ಪ್ರಕಾರ ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಮೂರು ವರ್ಷಗಳು ಮುಕ್ತಾಯವಾದ ತರುವಾಯ ಈ ಪ್ರಕರಣದಡಿಯಲ್ಲಿ ಯಾವುದೇ ಅಧಿಸೂಚನೆ ಅಥವಾ ಆದೇಶಗಳನ್ನು ಹೊರಡಿಸುವಂತಿಲ್ಲ. ಈ ಖಾಸಗಿ ವಿ.ವಿ.ಯ ಮೇಲೆ ಈಗಲೇ ಸರ್ಕಾರದ ಯಾವ ರೀತಿಯ ಹಿಡಿತವೂ ಇಲ್ಲ. ಇದು ಸ್ಥಾಪನೆಯಾದ ಮೂರು ವರ್ಷಗಳ ನಂತರವಂತೂ ಅದು ಏನು ಮಾಡಿದರೂ ಪ್ರಶ್ನಿಸುವಂತಿಲ್ಲ.

ಅಲಯನ್ಸ್ ವಿಶ್ವವಿದ್ಯಾಲಯ ವಿಧೇಯಕವು ಬಹುತೇಕ ಅಜೀಂ ಪ್ರೇಂಜಿ ವಿ.ವಿ.ಯ ರೀತಿಯಲ್ಲೇ ಎಲ್ಲ ಗುಣಲಕ್ಷಣಗಳು, ಆಡಳಿತ ವ್ಯವಸ್ಥೆಯನ್ನು ಹೊಂದಿದ್ದು ಬೋಧನೆಯ ವಿಷಯದಲ್ಲಿ ಮಾತ್ರ ಸ್ವಲ್ಪ ಬದಲಾವಣೆ ಇದೆ. ಅಲಯನ್ಸ್ ವಿ.ವಿ.ಯನ್ನು ಬೆಂಗಳೂರಿನ ಅಲಯನ್ಸ್ ಬಿಸಿನೆಸ್ ಸ್ಕೂಲ್ ಎಂಬ ಖಾಸಗಿ ಸಂಸ್ಥೆಯು ಸ್ಥಾಪಿಸಲಿದೆ. ಇಲ್ಲಿ ವ್ಯವಹಾರ ಆಡಳಿತ ಮತ್ತು ವ್ಯವಸ್ಥಾಪನೆ, ಸಾರ್ವಜನಿಕ ನೀತಿ ಮತ್ತು ಆಡಳಿತ ತಂತ್ರಜ್ಞಾನ, ಆರೋಗ್ಯ ವಿಜ್ಞಾನ, ಪರಿಸರ ಮತ್ತು ಹವಾಮಾನ ಬದಲಾವಣೆ, ಜಾಗತೀಕರಣ ಮತ್ತು ರಾಷ್ಟ್ರ ಸೀಮಾತೀತ ಸಂಬಂಧಗಳೂ ಸೇರಿದಂತೆ ಜೀವವಿಜ್ಞಾನಗಳಂಥ ವಿಷಯಗಳಲ್ಲಿ, ಲಿಂಗ, ಬುಡಕಟ್ಟು, ಜನಾಂಗ, ವಯೋಮಾನ, ಸಾಮಾಜಿಕ ಮತ್ತು ಆರ್ಥಿಕ ಒಕ್ಕೂಟಗಳು, ಈ ವಿಷಯಗಳ ಬಗ್ಗೆ ಬೋಧಿಸುವ ಮತ್ತು ಸಂಶೋಧನೆ ನಡೆಸುವ ಉದ್ದೇಶವನ್ನು ಹೊಂದಿದ್ದು, ಈ ವಿ.ವಿ.ಯಲ್ಲಿಯ ಸಂಸ್ಥೆಯ ಹಾಲಿ ಅಧ್ಯಕ್ಷರೇ ಕುಲಾಧಿಪತಿಗಳಾಗಿದ್ದು (ಚಾನ್ಸಲರ್) ಅವರದೇ ಪರಮಾಧಿಕಾರವಿರುತ್ತದೆ.

ಒಟ್ಟಾರೆಯಾಗಿ ರಾಜ್ಯದಲ್ಲಿ ಈ ರೀತಿಯ ಖಾಸಗಿ ವಿ.ವಿ.ಗಳನ್ನು ಸ್ಥಾಪಿಸುವ ಹಿಂದೆ ಇಡೀ ಶಿಕ್ಷಣವನ್ನು ಅದರಲ್ಲೂ ಮುಖ್ಯವಾಗಿ ಉನ್ನತ ಶಿಕ್ಷಣವನ್ನು ಮಾರಾಟದ ಸರಕನ್ನಾಗಿ ಪರಿವರ್ತಿಸಿ ಖಾಸಗಿ ಕಂಪನಿಗಳ ಲಾಭಕ್ಕೆ ಅನುವು ಮಾಡಿಕೊಡುವುದು ಸರ್ಕಾರದ ಮುಖ್ಯ ಉದ್ದೇಶವಾಗಿದೆ. ಜೊತೆಗೆ ರಾಜ್ಯ ಸರ್ಕಾರ ಶಿಕ್ಷಣ ನೀಡುವ ತನ್ನ ಪ್ರಾಥಮಿಕ ಜವಾಬ್ದಾರಿಯನ್ನು ಖಾಸಗಿಯವರಿಗೆ ವರ್ಗಾಯಿಸುವ ಮೂಲಕ ಇಡೀ ಶಿಕ್ಷಣ ರಂಗವನ್ನು ಖಾಸಗೀಕರಣ ಮಾಡಲು ಹೊರಟಿದೆ.

ಈ ಕಾಯ್ದೆಯಲ್ಲಿ ರಾಜ್ಯದ ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿ ರಾಜ್ಯದಲ್ಲಿ ಉನ್ನತ ಶಿಕ್ಷಣವನ್ನು ಪಡೆಯುತ್ತಿರುವವರ ಸಂಖ್ಯೆ ಕೇವಲ ಶೇಕಡ ೧೧.೫ರಷ್ಟಿರುವುದರಿಂದ ಇದನ್ನು ಹೆಚ್ಚಿಸಲು ಖಾಸಗಿ ವಿ.ವಿ.ಗಳಿಗೆ ಅನುಮತಿ ನೀಡುತ್ತಿದ್ದೇವೆಂದು ಘೋಷಿಸಿಕೊಂಡಿದ್ದಾರೆ. ಇಂತಹ ಶಿಕ್ಷಣ ಸಚಿವರನ್ನು ಹೊಂದಿರುವ ರಾಜ್ಯ ಧನ್ಯೋಸ್ಮಿ? ಇದುವರೆಗೂ ಇರುವ ಸರ್ಕಾರಿ ವಿ.ವಿ.ಗಳಲ್ಲೇ ಉನ್ನತ ಶಿಕ್ಷಣವನ್ನು ಪಡೆಯಲಾಗದಂತಹ ಸ್ಥಿತಿ ರಾಜ್ಯದ ವಿದ್ಯಾರ್ಥಿ ಯುವಜನರಿಗಿರುವಾಗ ಮನಸೋ ಇಚ್ಛೆ ಶುಲ್ಕ, ವಂತಿಗೆ ವಸೂಲಿ ಮಾಡಿ ಲಾಭ ಮಾಡುವ ಉದ್ದೇಶದಿಂದಲೇ ಪ್ರಾರಂಭವಾಗುತ್ತಿರುವ ಖಾಸಗಿ ವಿ.ವಿ.ಗಳಲ್ಲಿ ಯಾರಿಗೆ ಶಿಕ್ಷಣ ಸಿಗುತ್ತದೆ? ಆದರಿಂದ ಉನ್ನತ ಶಿಕ್ಷಣ ಪಡೆಯುವವರ ಸಂಖ್ಯೆ ಎಷ್ಟು ಪ್ರಮಾಣದಲ್ಲಿ ಹೆಚ್ಚಾಗುತ್ತದೆ ಎಂಬ ಪ್ರಶ್ನೆ ಎದುರಾಗುತ್ತದೆ. ಇದರಿಂದ ಸಾಮಾನ್ಯ ಬಡ, ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತರನ್ನು ಉನ್ನತ ಶಿಕ್ಷಣದಿಂದ ಮತ್ತಷ್ಟು ದೂರ ತಳ್ಳುವುದು ಬಿಟ್ಟರೆ ಬೇರೇನೂ ಸಾಧನೆಯಾಗುವುದಿಲ್ಲ.

ರಾಜ್ಯದಲ್ಲಿ ಪ್ರಸಕ್ತ ಕಾರ್ಯ ನಿರ್ವಹಿಸುತ್ತಿರುವ ವಿಶ್ವವಿದ್ಯಾಲಯಗಳೂ ಹಣಕಾಸಿನ ಕೊರತೆಯಿಂದ ಅಗತ್ಯ ಮೂಲಭೂತ ಸೌಲಭ್ಯಗಳಿಲ್ಲದೆ ಬಹುತೇಕ ವಿಭಾಗಗಳಿಗೆ ಉಪನ್ಯಾಸಕರಿಲ್ಲದೆ ನರಳುತ್ತಿರುವ ಸಂದರ್ಭದಲ್ಲಿ ತೋರಿಕೆಗೆ ವಿಶ್ವವಿದ್ಯಾಲಯಗಳ ಸಂಖ್ಯೆಗಳನ್ನು ಹೆಚ್ಚಿಸುವ, ಜಿಲ್ಲೆಗೊಂದರಂತೆ ವಿ.ವಿ.ಗಳನ್ನು ತೆರೆಯುವ ಹಿಂದಿರುವ ಯಾವ ಉದ್ದೇಶವೂ ಸಾರ್ಥಕವಾಗುವುದಿಲ್ಲ. ಬದಲಾಗಿ ಇರುವ ಸರ್ಕಾರಿ ವಿ.ವಿ.ಗಳಿಗೆ ಬಜೆಟ್‌ನಲ್ಲಿ ಹೆಚ್ಚಿನ ಅನುದಾನವನ್ನು ಕೊಡುವ ಮೂಲಕ ಅವುಗಳನ್ನು ಅಭಿವೃದ್ಧಿಪಡಿಸಿ ಅಲ್ಲಿ ಶಿಕ್ಷಣದ ಗುಣಮಟ್ಟವನ್ನು ಕಾಪಾಡದಿದ್ದರೆ ಉನ್ನತ ಶಿಕ್ಷಣದ ಮೇಲೆ ಇರುವ ಭರವಸೆ ಕಡಿಮೆಯಾಗಿ ಮುಂದೊಂದು ದಿನ ಸರ್ಕಾರಿ ವಿಶ್ವವಿದ್ಯಾಲಯಗಳಿಗೆ ಬರುವ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿ ಎಲ್ಲ ಸರ್ಕಾರಿ ವಿ.ವಿ.ಗಳನ್ನು ಮುಚ್ಚುವ ಅಪಾಯವಿದೆ.

ನಮ್ಮ ಬೌದ್ಧಿಕ ಸ್ವಾವಲಂಬನೆಗೆ ಸವಾಲಾಗಿರುವ ನಮ್ಮ ನೆಲ, ಜಲ, ಭಾಷೆ, ಸಂಸ್ಕೃತಿ, ಜನರ ಜೀವನದ ಬಗ್ಗೆ ಅಧ್ಯಯನ ನಡೆಸದ ಖಾಸಗಿ ಮತ್ತು ವಿದೇಶಿ ವಿಶ್ವವಿದ್ಯಾಲಯಗಳ ಸ್ಥಾಪನೆಯ ಅಪಾಯಗಳ ಬಗ್ಗೆ ಎಲ್ಲ ವಿ.ವಿ.ಗಳಲ್ಲಿ, ಶಿಕ್ಷಣ ಪ್ರೇಮಿಗಳ ನಡುವೆ ಚರ್ಚೆ ನಡೆಸುವ ಮೂಲಕ ಇವುಗಳನ್ನು ವಿರೋಧಿಸಲು ಬೃಹತ್ ಜನಾಂದೋಲನವನ್ನು ಕಟ್ಟಿ ಬೆಳೆಸುವ ತುರ್ತು ಅವಶ್ಯಕತೆ ಇದೆ.

ಈ ಎರಡು ವಿಧೇಯಕಗಳ ಬಗ್ಗೆ ಕೇಂದ್ರ ಸರ್ಕಾರದ ಹಾಗೂ ವಿಶ್ವವಿದ್ಯಾಲಯ ಶಿಕ್ಷಣ ಆಯೋಗದ ಪಾತ್ರ ಸ್ಪಷ್ಟವಿಲ್ಲ. ಈಗಾಗಲೆ ಶೈಕ್ಷಣಿಕ ವಿಷಯಗಳು ಮಾಹಿತಿ ತಂತ್ರಜ್ಞಾನದ ಸರಕುಗಳಾಗುತ್ತಿದ್ದು, ಉದ್ದೇಶಿತ ಎರಡೂ ವಿಶ್ವವಿದ್ಯಾಲಯಗಳೂ ಅವುಗಳ ಫ್ಯಾಕ್ಟರಿಗಳಾಗುತ್ತವೆ, ಪ್ರಯೋಗಶಾಲೆಗಳಾಗುತ್ತವೆ. ಖಾಸಗಿ ಬಂಡವಾಳ ತತ್ವ ತನಗೆ ಅಗತ್ಯವಿರುವಂತೆ ಸರ್ಕಾರವನ್ನು, ಅದರ ಸಂಸ್ಥೆಗಳನ್ನು ಹೇಗೆ ಸೈದ್ಧಾಂತಿಕವಾಗಿ ಪರಿವರ್ತಿಸಿಕೊಳ್ಳಬಹುದು ಎಂಬ ಹುನ್ನಾರ ಸ್ಪಷ್ಟವಿದೆ.

*ಬೆಂಗಳೂರು* **ಎಚ್. ಆರ್. ನವೀನ್‌ಕುಮಾರ್**

---

**'ಹಣತೆ' ದೀಪಾವಳಿ ವಿಶೇಷಾಂಕ : ರಾಜ್ಯಮಟ್ಟದ ಕತೆ-ಕವನ ಸ್ಪರ್ಧೆ**

ಆಯ್ಕೆಯಾಗುವ ಸಣ್ಣ ಕತೆಗೆ ಪ್ರಥಮ, ದ್ವಿತೀಯ ಮತ್ತು ತೃತೀಯ ಬಹುಮಾನವಾಗಿ ಕ್ರಮವಾಗಿ ರೂ. ೩,೦೦೦, ರೂ. ೨,೦೦೦ ಮತ್ತು ರೂ. ೧,೦೦೦ವನ್ನೂ, ಕವನಕ್ಕೆ ಪ್ರಥಮ, ದ್ವಿತೀಯ ಹಾಗೂ ತೃತೀಯ ಬಹುಮಾನವಾಗಿ ಕ್ರಮವಾಗಿ ರೂ. ೧,೫೦೦, ರೂ. ೧,೦೦೦ ಮತ್ತು ರೂ. ೭೫೦ನ್ನು ನೀಡಲಾಗುವುದು.

ಸ್ಪರ್ಧೆಗೆ ಕತೆ, ಕವನ ಕಳುಹಿಸಲು ಕೊನೆಯ ದಿನಾಂಕ ಜುಲೈ ೨೫, ೨೦೧೦. ಕತೆ, ಕವನಗಳು ಸ್ವತಂತ್ರ ರಚನೆಗಳಾಗಿರಬೇಕು. ಸ್ಪರ್ಧೆಗೆ ಕಳುಹಿಸುವವರು ಹೆಸರು, ವಿಳಾಸ ಪ್ರತ್ಯೇಕ ಹಾಳೆಯಲ್ಲಿ ಬರೆದು ಲಗತ್ತಿಸಬೇಕು. ಇ-ಮೇಲ್ ಮೂಲಕವೂ ಕಳಿಸಬಹುದು.

ವಿಳಾಸ:
**ಅರವಿಂದ ಕರ್ಕಿಕೋಡಿ**
ಸಂಪಾದಕರು, 'ಹಣತೆ' ದೀಪಾವಳಿ ವಿಶೇಷಾಂಕ-೨೦೧೦
'ಅಮ್ಮಾ', ಅಗ್ರಹಾರ, ಅಂಚೆ - ಹಳದೀಪುರ
ಹೊನ್ನಾವರ ತಾಲ್ಲೂಕು - ೫೮೧೩೪೨, ಉತ್ತರಕನ್ನಡ ಜಿಲ್ಲೆ
ಇ-ಮೇಲ್ : arvindkarkikodi@yahoo.co.in









# ಪರಿಹಾರ

ಇತ್ತೀಚೆಗೆ ಟಿ.ವಿ. ನೋಡುತ್ತಿದ್ದಾಗ ೧೯೮೪ರಲ್ಲಿ ಭೋಪಾಲಿಗೆ ಹೋಗಿದ್ದಾಗಿನ ನೆನಪು ಕವರತೊಡಗಿತು. ಅಲ್ಲಿನ ರೈಲ್ವೆ ಸ್ಟೇಷನ್‌ನಿಂದ ಹಿಡಿದು ಊರನ್ನು ಸೇರಿ ಗೆಳೆಯರನ್ನು ಕಂಡು ಮಾತಾಡಿ ಗ್ಯಾಸ್ ಫ್ಯಾಕ್ಟರಿಯವರೆಗೂ ಹೋಗಿಬಂದೆ. ರೈಲ್ವೆ ಸ್ಟೇಷನ್ ಬಳಿ ಒಂದು ನೀಲಿ (ದೊಡ್ಡ) ಟೆಂಟ್ ತುಂಬಿದ ಅನಾಥರ ಹರಕು ಮುರುಕು ಚಾಪೆ ಸಹಿತ ಅಂಥದೇ ಕೆಲಸಕ್ಕೆ ಬಾರದ ಗಂಟುಮೂಟೆಗಳೂ ಇದ್ದುವು. ಕೆಲವು ಮಕ್ಕಳು ದಿಕ್ಕಿಲ್ಲದವರಾಗಿ ಓಡಾಡುತ್ತಿದ್ದುವು. ಅವುಗಳ ಮುಖದಲ್ಲಿ ಕಳೆ ಇರಲಿಲ್ಲ! ಕೆಲವರು ವೃದ್ಧರೂ ವಕ್ರ ರೀತಿಯಲ್ಲಿ ಬಿದ್ದಿದ್ದರು...

ಇಂಥ ನೆನಪಿನಲ್ಲಿ ನನ್ನ ಪರಿಚಯದವರನ್ನು ಕಂಡು ಮಾತಾಡಿದಾಗ, ಫ್ಯಾಕ್ಟರಿಯಲ್ಲಿ ಗ್ಯಾಸ್ ಲೀಕಾಗಿದೆ, ಎಂಬ ಸುದ್ದಿಯೂ ಗ್ಯಾಸಿನಂತೆ ಹರಡಿದ್ದು, ಜನಗಳು ಗುಂಪು ಗುಂಪಾಗಿ ಫ್ಯಾಕ್ಟರಿಯ ಕಡೆಗೆ ಓಡಿಹೋದರೆಂದು, ಸಾವು ಅಧಿಕವಾಗುವುದಕ್ಕೆ ಇದೇ ಕಾರಣವೆಂದೂ ಹೇಳಿದರು - ಪಾಪ, ಏನೂ ತಿಳಿಯದ, ವಿಜ್ಞಾನದ ಲವಲೇಶವಾದರೂ ಅರಿವಿಲ್ಲದ ಕಾರ್ಮಿಕರು ಹೀಗೆ ಮಾಡಿದುದರಲ್ಲಿ ತಪ್ಪಿರಲು ಶಕ್ಯವಿಲ್ಲ, ಎಂದುಕೊಂಡೇ ನಾನು ಮುಂದಕ್ಕೆ, ಅಂದರೆ ಅದೇ ರಾತ್ರಿ ರೈಲು ಹತ್ತಿದೆ ಅನ್ನಿ. (ಇದನ್ನು ಬರೆದುಕೊಡಲು ನನಗೆ ಆಗ ಮನಸ್ಸಾಗಲಿಲ್ಲ. ಕ್ಯಾಂಪುಗಳಲ್ಲಿ ಅನಾಥರ ರಕ್ಷಣೆಯಾಗುವುದರ ವಿಚಾರವಂತೂ ಪತ್ರಿಕೆಗಳಲ್ಲಿ ದಪ್ಪಕ್ಷರದಲ್ಲಿ ಪ್ರಕಟವಾದುದುಂಟಷ್ಟೆ – ಎಲ್ಲರಂತೆ ನಾನು, ಎಂದು ಸುಮ್ಮನಾದೆನೆಂದರೂ ಸರಿಯೆ ? ಆದರೆ ನಾನೊಬ್ಬ ಏನು ತಾನೆ ಮಾಡಬಲ್ಲೆ? ಹಣವಂತ ಮೊದಲೆ ಅಲ್ಲ!

ಆದರೆ ಟಿ.ವಿ.ಯ ಒಂದು ಚಿತ್ರ, ಎಚ್ಚರಿಸಿತು. ಕಣ್ಣಿಲ್ಲದ ಗುಡ್ಡೆಗಳು ಭಯವನ್ನು ಉಂಟುಮಾಡುವಂತಿದ್ದು, ಬಾಯಿಯೂ ಇಲ್ಲದ ಒಂದು ಕೂಸಿನ ಮುಖ, ಅದು...

ಅದರ ಚಿತ್ರದ ಕಾಟವನ್ನು ತಡೆಯಲಾರದೆ ಬರೆಯುತ್ತಿದ್ದೇನೆ. ಎಷ್ಟೊಂದು ಜೀವಗಳು ಗ್ಯಾಸಿನ ವಿಷಕ್ಕೆ ಬಲಿಯಾಗಿವೆ ? ಇಂದಿಗೂ ಪರಿಹಾರವಿಲ್ಲದೆ ಉಳಿದಿರುವ ಒಂದೆರಡು ಮಾತ್ರ, ಭಿಕ್ಷುಕರೋ ಹೇಗೋ, ಉಳಿದವರು – ಹೀಗಿರುವುದನ್ನು ಕುರಿತು ಬರೆಯುವುದಕ್ಕೂ ಮನಸ್ಸು ತಲ್ಲಣಗೊಳ್ಳುತ್ತಿದೆ. – ಆ ಚಿತ್ರ ಮಾತ್ರ ಇಂದಿಗೂ ಕಾಡುವ ಸಾಮರ್ಥ್ಯವನ್ನು ಪಡೆದಂತಿದೆ. ಒಂದು ಕಥೆಯನ್ನು ಕಟ್ಟುತ್ತಿದ್ದೇನೆಯೇ ? ಹೀಗೆ ಆತಂಕವೂ ಇದೆ.

ಅದು ದಿಕ್ಕು ದಿವಾಣವಿಲ್ಲದ ನಮ್ಮ ಸರ್ಕಾರವು ಘೋಷಿಸಿದ ಪರಿಹಾರದಲ್ಲಿಯೂ ಲೆಕ್ಕಕ್ಕೆ ಬಾರದ ಅನಾಥರು, ಇರಬಹುದೆಂದಾಗ ದಿಗಿಲಾಯಿತು ! ಆಗ ಸತ್ತವರ ಸಂಖ್ಯೆ ಇರಲಿ, ಹೇಗೋ ಉಳಿದವರು, ಸುಮಾರು ಆರು ತಿಂಗಳನಂತರವೂ ಭೋಪಾಲಿನ ರೈಲ್ವೆಸ್ಟೇಷನ್ ಬಳಿ ಕಾಡು ಬಯಲಿನಲ್ಲಿ ಜೀವ ಹಿಡಿದಿದ್ದ ಸುಮಾರು ನೂರು ಮಂದಿ! ನಾನು ಭೋಪಾಲಕ್ಕೆ ಹೋಗಿದ್ದಾಗ ಪರಿಚಯ ಮಾಡಿಕೊಂಡು ಹಾಳು ಕೊಂಪೆಯಂತಿದ್ದ ಆ ಫ್ಯಾಕ್ಟರಿಯ ಸ್ಮಶಾನಮೌನವನ್ನು ನೋಡಿದ ಕಾರಣ, ಒಳಗೊಳಗೇ ಕವರಿಕೊಳ್ಳುತ್ತಿದ್ದ ಸಾಲುಸಾಲು ಸ್ಮಶಾನ ಯಾತ್ರೆ ಹಿಡಿದ ಕೆಲವರನ್ನು ಯಾರೂ ವಾರಸುದಾರರು ಬರದೆ, ಸಾಮೂಹಿಕವಾಗಿ ಸಮಾಧಿ ಮಾಡಿದ ನಮ್ಮ ಸರ್ಕಾರದ ಸಮಯಪ್ರಜ್ಞೆಗೆ ಈಗಲೂ ಮೆಚ್ಚುಗೆ ವ್ಯಕ್ತಪಡಿಸಬಹುದೇ ಹೇಗೆ, ಎಂಬ ಜಿಜ್ಞಾಸೆ ಕೂಡ ಎಷ್ಟು ಬಗೆಯಲ್ಲಿ ಹೀನಾಯವಾದೀತು ? ಇದಕ್ಕೆ ಯಾರು ಉತ್ತರ ಕೊಡಬಹುದು ? ಆ ಕುರುಡು (ಮೆಳ್ಳಗಣ್ಣಿನಂತೆ) ದುರುಗುಟ್ಟಿನೋಡುವ ಶಿಶುವಿನ ಚಿತ್ರ, ಅದರ ವಾರಸುದಾರ ನಾನೇ ಆಗಿದ್ದರೆ ?... ಎಂಥ ಸುಳ್ಳು ಚಿಂತನೆಯಲ್ಲಿ ನಾನು ಸ್ನಾನ ಮಾಡುತ್ತಿದ್ದೇನೆ ! ಎನ್ನಿಸಿತಷ್ಟೆ.

ಈಗಲೂ ನಮ್ಮ ಸರಕಾರ(ಗಳು) ಪರಿಹಾರದ ವಿಷಯದಲ್ಲಿ ಜಾಗರೂಕತೆ ವಹಿಸುತ್ತಿವೆ! ಎಂದರೆ ? ಅಂಥ ಅನಾಹುತಕ್ಕೆ ಕಾರಣರಾದವರಲ್ಲಿ ಮತ್ತೊಂದು ದೇಶವೂ ಹೊಣೆಹೊತ್ತಿದೆಯಲ್ಲ ಎನ್ನಿಸಿ, ಅದನ್ನು ದ್ವೇಷಿಸಬೇಕಾದೀತು, ಎಂದು ನನಗೆ ಹೊಳೆದಾಗ ಮಾನವತೆಗೆ ಕೂಡ ಈಗ ಬೆಲೆಯಿಲ್ಲದಂತಾಗಿದೆ, ನನ್ನ ಉತ್ಪತ್ತಿಯಲ್ಲಿ ಕೊಂಚವಾದರೂ ಕೊಡಬಹುದಲ್ಲಾ ಎನ್ನಿಸಿತು. ಅಷ್ಟೇ; ಆದರೆ ನಾನೂ ಕೂಡ ಈ ಸಮಾಜದಲ್ಲಿ, ಈ ದೇಶದಲ್ಲಿ 'ಒಬ್ಬ ಸಂತ್ರಸ್ತ' ಎನ್ನಿಸಿಬಿಟ್ಟಿತು. ಅದಕ್ಕಾಗಿ ಆ ಕೂಸಿನ ಚಿತ್ರವನ್ನು ಛಾಪಾ ಹಾಕಿಸಿ 'ಸಂತ್ರಸ್ತ ನಿಧಿ'ಯೊಂದನ್ನು ಸ್ಥಾಪಿಸಬಹುದಲ್ಲಾ, ಎಂದು ಹೊಳೆದದ್ದು, ಗಾಬರಿಯನ್ನುಂಟುಮಾಡಿಬಿಟ್ಟಿತು. ಏಕೆಂದರೆ ನಮ್ಮ ಮಂದಿ ಸಂತ್ರಸ್ತ ನಿಧಿಯನ್ನೇ ಸ್ವಂತಕ್ಕೆ ಬಳಸಿಕೊಳ್ಳುತ್ತಿದ್ದಾರೆ. ಕೊಟ್ಟವನು ಕೋಡಂಗಿ ಈಸಿಕೊಂಡವ ಈರಭದ್ರ – ಎಂಬ ಗಾದೆಯು ಈಗ ಅರ್ಥವಾಗುತ್ತಿದೆ.

ಇದು ಒಂದು ಸಣ್ಣಕತೆಯಾಗಬಹುದೆಂಬ ಕೆಟ್ಟ ನಂಬಿಕೆಯಿಂದ ಇಷ್ಟು ಬರೆದು ಮುಗಿಸುತ್ತಿದ್ದೇನೆ. ಆದರೆ ಭೋಪಾಲದ ಅನಾಥರಲ್ಲಿ ಒಂದು ಕೂಸು ಕೇವಲ ಚಿತ್ರವಾಗಿ, ದಾಖಲಾಗಿ ಇರುವುದಕ್ಕೆ, ಪರಿಹಾರವೆಂದರೆ ಕೇವಲ ಒಂದು ನಮಸ್ಕಾರ, ಅಷ್ಟೆ! ಆ ನೆನಪಿಗೂ ಅಷ್ಟೆ!

**ಕ. ವೆಂ. ರಾಜಗೋಪಾಲ**
೩೯, 'ಸಹನ ಮಂದಿರ', ೨ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ,
ಅಶ್ವತ್ಥನಗರ, ಬೆಂಗಳೂರು - ೫೬೦ ೦೯೪

**'ಕ್ವಾಲಿಟಿ ಕೌನ್ಸಿಲ್ ಆಫ್ ಇಂಡಿಯಾ' (QCI)** ಎಂಬುದು ರಾಷ್ಟ್ರಮಟ್ಟದ ಸ್ವಾಯತ್ತ ಸಂಸ್ಥೆ. ಇದರ ಉದ್ದೇಶ ನಮ್ಮ ನಾಡಿನ ಉತ್ಪಾದನೆಯ ಮತ್ತು ಸೇವಾಕ್ಷೇತ್ರಗಳಲ್ಲಿ ಎಲ್ಲ ಹಂತದಲ್ಲೂ ಗುಣಮಟ್ಟವನ್ನು ಕಾಪಾಡುವಂತೆ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸುವುದು. ಈ ಸಂಸ್ಥೆಯ ಸ್ಥಾಪನೆಯಲ್ಲಿ ಭಾರತ ಸರ್ಕಾರ ಮತ್ತು ಖಾಸಗಿ ಕೈಗಾರಿಕಾ ಕ್ಷೇತ್ರಗಳು ಸರಿಸಮಾನವಾಗಿ ಪಾಲು ಪಡೆದಿವೆ. ಅಂತೆಯೆ ಈ ಎರಡೂ ಕ್ಷೇತ್ರಗಳು ಇದರ ಉಸ್ತುವಾರಿ ಸಮಿತಿಯನ್ನು ಕೂಡಿ ನೇಮಕಾತಿ ಮಾಡುತ್ತವೆ. ಹಾಗೂ ಈ ಸಮಿತಿ ಸೂಚಿಸುವ ಹೆಸರುಗಳಲ್ಲಿ ಒಬ್ಬರನ್ನು ಪ್ರಧಾನಿಯವರು ಸಂಸ್ಥೆಯ ಗೌರವಾಧ್ಯಕ್ಷರಾಗಿ ಆರಿಸುತ್ತಾರೆ. ಕೇಂದ್ರ ಸಂಪುಟದ ಠರಾವಿನ ರೀತ್ಯ ಈ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಇದರ **ಮುಖ್ಯ ಕಾರ್ಯ ನಿರ್ವಾಹಕರು, ಮಹಾಕಾರ್ಯದರ್ಶಿ.** ಈ ಸ್ಥಾನದಲ್ಲಿ ಸಂಸ್ಥೆಯ ಪ್ರಾರಂಭದಿಂದ ಮುಂದುವರಿದಿರುವ **ಶ್ರೀ ಗಿರಿಧರ್ ಜ್ಞಾನಿಯವರು** ಇತ್ತೀಚೆಗೆ ಬೆಂಗಳೂರಿಗೆ ಭೇಟಿ ಇತ್ತ ಸಮಯದಲ್ಲಿ 'ಹೊಸತು' ಪತ್ರಿಕೆಯ ಸಹ ಸಂಪಾದಕ **ಕೆ. ಎಸ್. ಪಾರ್ಥಸಾರಥಿಯವರು** ಅವರನ್ನು ಸಂದರ್ಶಿಸಿದರು.

**ಡಾ|| ಟಿ. ವೆಂಕಟೇಶ್, ನಿರ್ದೇಶಕರು, ನ್ಯಾಷನಲ್ ರೆಫರಲ್ ಸೆಂಟರ್ ಫಾರ್ ಲೆಡ್ ಪಾಯಿಸನಿಂಗ್ ಇನ್** ಇಂಡಿಯ ಅವರು ಉಪಸ್ಥಿತರಿದ್ದರು.

ಈ ಸಂದರ್ಶನದ ವರದಿಯನ್ನು
ಶ್ರೀ ಪಾರ್ಥಸಾರಥಿಯವರು ಸಾದರಪಡಿಸಿದ್ದಾರೆ.

# ಉತ್ತಮ ಗುಣಮಟ್ಟದ ಸರಕು ಬಳಕೆದಾರನ ಹಕ್ಕು

- ಗಿರಿಧರ್ ಜ್ಞಾನಿ



**ಹೊಸತು**: ಇಂದು ಸುಮಾರು ಎಲ್ಲ ಸಾರ್ವಜನಿಕ ಕ್ಷೇತ್ರಗಳಲ್ಲಿ, ಕೆಲವು ಉನ್ನತಮಟ್ಟದ ಖಾಸಗೀ ಘಟಕಗಳಲ್ಲಿ ಗುಣಮಟ್ಟಕ್ಕೆ ಸಂಬಂಧಪಟ್ಟಂಥ ಇಲಾಖೆಗಳು ಇವೆ. ಹಾಗೆಯೇ ಭಾರತೀಯ ಪ್ರಮಾಣ ಸಂಸ್ಥೆ (ಇಂಡಿಯನ್ ಸ್ಟಾಂಡರ್ಡ್ಸ್ ಆರ್ಗನೈಸೇಷನ್) ತನ್ನದೇ ಪ್ರಮಾಣವನ್ನು ನೀಡುತ್ತಿದೆ. ಅಂತರರಾಷ್ಟ್ರೀಯ ಗುಣಮಟ್ಟವೆಂಬ ಹೆಸರಿನಲ್ಲಿ, ಜಾಗತೀಕರಣದ ಬೆನ್ನಿಗೆ ಐಎಸ್‌ಓ ಪ್ರಮಾಣೀಕರಣವೂ ಹರಡಿದೆ. ಹೀಗಿರುವಾಗ ತಮ್ಮ ಸಂಸ್ಥೆಗೆ ಅವಕಾಶ ಎಲ್ಲಿಯದು ?

**ಶ್ರೀ ಗಿರಿಧರ್ ಜ್ಞಾನಿ** : ನೀವೇ ಗುರುತಿಸುವಂತೆ ಹಲವಾರು ಸಂಸ್ಥೆಗಳು, ಹಲವಾರು ಪ್ರಮಾಣೀಕರಣ ಮಾದರಿಗಳು ಹರಡಿ ಗೊಂದಲ ಉಂಟಾಗಿರುವುದು ಒಂದು ವಾಸ್ತವ. ಜಾಗತೀಕರಣದ ಹಿನ್ನೆಲೆಯಲ್ಲಿ ಅಂತರರಾಷ್ಟ್ರೀಯ ವ್ಯಾಪಾರ ವಹಿವಾಟು ಅಪಾರವಾಗಿ ವೃದ್ಧಿಸುವಾಗ, ಭಾರತೀಯ ಪ್ರಮಾಣವೆಂಬುದೊಂದಿದೆಯೇ, ಅದನ್ನು ಅಂತರ ರಾಷ್ಟ್ರೀಯವಾಗಿ ಗುರುತಿಸಿ ಗೌರವಿಸಲಾಗುತ್ತದೆಯೇ ಎಂಬುದು ಬಹುಮುಖ್ಯ ವಿಷಯ ವಾಗುತ್ತದೆ. ನೀವು ಗುರುತಿಸುವ ಹಲವಾರು ಸಂಸ್ಥೆಗಳು ತಮ್ಮ ಕೆಲಸವನ್ನು ನಿರ್ವಹಿಸುತ್ತಲೆ ಅವೆಲ್ಲಕ್ಕೂ ಒಂದು ಕೇಂದ್ರೀಕೃತ ಗುಣಮಟ್ಟ ಮಾನ್ಯತೆಯನ್ನು ನೀಡಲು, ಹಾಗೂ ಇವೆಲ್ಲಕ್ಕೂ ನಮ್ಮ ಸಂಸ್ಥೆಯ ಮೂಲಕ ಅಂತರರಾಷ್ಟ್ರೀಯ ಗೌರವವನ್ನು ಒದಗಿಸಿಕೊಡುವ ಜವಾಬ್ದಾರಿಯನ್ನು ಕ್ಯೂಸಿಐ ಹೊಂದಿರುವುದೆ ಅದರ ವಿಶಿಷ್ಟತೆ.

**ಹೊಸತು** : ಬೇರೆಯವರು ಮಾಡುವ ಕೆಲಸವನ್ನೇ ನೀವೂ ಮಾಡುವುದು ವ್ಯರ್ಥ ಅಲ್ಲವೆ ?

**ಗಿರಿಧರ್ ಜ್ಞಾನಿ**: ನಾವು ಗುಣಮಟ್ಟಕ್ಕೆ ಸಂಬಂಧಪಟ್ಟ ಪ್ರಮಾಣಗಳನ್ನು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಪರಿಷ್ಕರಿಸಿ ಸ್ಥಾಪಿಸುವುದು, ಮತ್ತು ಕೈಗಾರಿಕಾ ಮತ್ತು ಸೇವಾಕ್ಷೇತ್ರಗಳ ಘಟಕಗಳು ಅವನ್ನು ಒಪ್ಪಿಕೊಂಡು ಅನುಸರಿಸುವಂತೆ ಪ್ರೇರೇಪಿಸುವುದು ಇದಷ್ಟನ್ನೆ ಮಾಡುವುದು. ಹಾಗೂ ಕ್ಯೂಸಿಐ ಅಂತರರಾಷ್ಟ್ರೀಯ ಮತ್ತು ಹಲವಾರು ರಾಷ್ಟ್ರೀಯ ಗುಣ ಮಾಪಕ ಸಂಸ್ಥೆಗಳೊಡನೆ ಪರಸ್ಪರ ಗೌರವಿಸುವ ಒಪ್ಪಂದಗಳನ್ನು ಮಾಡಿಕೊಂಡಿದೆ. ಅವರಲ್ಲಿರುವ ತಾಂತ್ರಿಕ ಪರಿಣತಿಯನ್ನು ಅವಶ್ಯವಿದ್ದಂತೆ ನಮ್ಮವರಿಗೆ ಒದಗಿಸುತ್ತೇವೆ. ಹಾಗೆಯೇ ಹಿಂದುಳಿದ ರಾಷ್ಟ್ರಗಳಿಗೆ ನಾವೂ ಈ ಸಂಬಂಧ ತಾಂತ್ರಿಕ ನೆರವನ್ನು ನೀಡುತ್ತೇವೆ. ಈ ಮೂಲಕ ಕ್ಯೂಸಿಐ ಎಂಬುದು ಅಂತರರಾಷ್ಟ್ರೀಯವಾಗಿ ಮನ್ನಣೆ ಪಡೆದು ನಮ್ಮ ಸರಕು ಸಾಮಗ್ರಿಗಳು, ಸೇವೆಗಳು ಅಂತರರಾಷ್ಟ್ರೀಯ ಗುಣಮಟ್ಟದ್ದೆಂಬ ಖಾತರಿ ಪಡೆದು,

ಅವುಗಳ ಮಾರಾಟ ಸುಗಮವಾಗುತ್ತದೆ. ಹಾಗೆಯೇ ದೇಶದೊಳಕ್ಕೆ ಬರುವ ಸಾಮಗ್ರಿಗಳ ಸೇವೆಯ ಮಟ್ಟವನ್ನು ನಾವು ಗುರುತಿಸಿ ಒಳಬಿಡುವಂತಾಗುತ್ತದೆ. ಗುಣಮಟ್ಟವೆಂಬುದು ಇಂದು ಒಂದು ಅಂತರರಾಷ್ಟ್ರೀಯ ಚಳುವಳಿ ಮತ್ತು ನಮ್ಮದು ಅದರ ಭಾಗವಾಗಿ ರಾಷ್ಟ್ರೀಯ ಚಳುವಳಿಯೂ ಹೌದು. ಹಾಗೆಯೇ ಅಂತರರಾಷ್ಟ್ರೀಯ ವ್ಯಾಪಾರ ಮಾತ್ರ ವಲ್ಲದೆ, ನಮ್ಮ ಜನತೆಗೆ ಆಂತರಿಕವಾಗಿ ಅಂತರರಾಷ್ಟ್ರೀಯ ಗುಣಮಟ್ಟದ ಉತ್ಪಾದಿತ ಸರಕು ಸೇವೆಗಳು ದೊರೆಯುತ್ತವೆ. ಈ ಹಿಂದೆ ಫಾರಿನ್ ವಸ್ತುಗಳಿಗೆ ಮಾರುಹೋಗುತ್ತಿದ್ದ ನಮ್ಮ ಬಳಕೆದಾರ ಅದನ್ನು ಕೈಬಿಡುವಂತಾಗುತ್ತದೆ. ಭಾರತದ ಸರಕುಗಳಿಗೆ ಒಂದು ಬ್ರಾಂಡ್ - ಮೇಡ್ ಇನ್ ಇಂಡಿಯಾ - ಮನ್ನಣೆ ದೊರೆಯುತ್ತದೆ.

ಈಗಾಗಲೇ ನೂರಾರು ಗುಣಮಟ್ಟ ಸಂಶೋಧಕ ಮತ್ತು ಪ್ರಮಾಣೀಕರಣ ಸಂಸ್ಥೆಗಳಿವೆ. ಇವೆಲ್ಲವೂ ಈ ಕ್ಯೂಸಿಐ ನಿರ್ಧರಿಸುವ ಗುಣಮಟ್ಟ ನೀತಿಯನ್ನು ಸ್ವೀಕರಿಸಿವೆ. ಒಂದೊಂದು ಔದ್ಯೋಗಿಕ ಕ್ಷೇತ್ರಕ್ಕೂ ತನ್ನದೆ ಆದ ವಿಶೇಷ ತಂತ್ರಜ್ಞಾನ ಪರಿಣತರ ಮತ್ತು ಬಳಕೆದಾರರ ವಸ್ತುಗಳ ಗುಣಮಟ್ಟ ಪ್ರಮಾಣೀಕರಣ ಸಂಸ್ಥೆಗಳೂ ಇವೆ. ಅವುಗಳಲ್ಲಿ ಕ್ಯೂಸಿಐ ಕೂಡ ತನ್ನ ಸದಸ್ಯತ್ವವನ್ನು ಹೊಂದಿದೆ. ಆ ಸಂಸ್ಥೆಗಳನ್ನು ಕ್ಯೂಸಿಐ ಗುರುತಿಸಿ, ರಾಷ್ಟ್ರೀಯ ಮನ್ನಣೆ ನೀಡುತ್ತದೆ.

ಎಲ್ಲ ಕ್ಷೇತ್ರಗಳಲ್ಲೂ ಈಗ ಗುಣಮಟ್ಟ ಪರೀಕ್ಷಿಸಿ, ಮನ್ನಣೆಗೆ ಅಗತ್ಯವಾದ ಮಾಹಿತಿಗಳನ್ನು ನೀಡಬಲ್ಲ ನಿಪುಣರ ಅಗತ್ಯವಿದೆ. ನಮ್ಮ ಸಂಸ್ಥೆ ಅಂಥವರಿಗೆ ತರಬೇತಿ ನೀಡಿ, ಅಂಗೀಕೃತ ಪರೀಕ್ಷಕರನ್ನಾಗಿ ಮಾಡುತ್ತದೆ. ಈ ಪರೀಕ್ಷಕರೆಂಬ ಉದ್ಯೋಗ ಸಂಖ್ಯೆ ಅಪಾರವಾಗಿ ಬೆಳೆಯುತ್ತಿದೆ.

ಒಮ್ಮೆ ನೀಡಿದ ಪ್ರಮಾಣ ಪತ್ರವನ್ನು ಹಿಂತೆಗೆದುಕೊಳ್ಳುವ ಅಧಿಕಾರ, ಕಾಲಕಾಲಕ್ಕೆ ಪುನಃ ಪುನಃ ಮರುಪರಿಶೀಲನೆ ಮಾಡುವ ಅಧಿಕಾರ, ಸಾರ್ವಜನಿಕರು ಗುಣಮಟ್ಟ ಕುರಿತು ಮಾಡುವ ಪುಕಾರುಗಳ ವಿಚಾರಣೆ ಹೀಗೆ ನಮ್ಮ ಸಂಸ್ಥೆಗೆ ಹಲವು ಕರ್ತವ್ಯಗಳೂ, ಹೊಣೆಗಾರಿಕೆಯೂ ಇದೆ.

**ಹೊಸತು :** ನಿಮ್ಮ ಇತ್ತೀಚಿನ ಕೆಲವು ಪ್ರಯತ್ನಗಳನ್ನು ತಿಳಿಸಿಕೊಡುವಿರಾ ?

**ಗಿರಿಧರ್ ಜ್ಞಾನಿ :** ತುಂಬ ಇತ್ತೀಚಿನ ಸಂಗತಿ ಎಂದರೆ ದೆಹಲಿಯಲ್ಲಿ ಕಾಮನ್‌ವೆಲ್ತ್ ಕ್ರೀಡಾಕೂಟ ನಡೆಯಲಿದೆ. ಆ ಸಂದರ್ಭ ಹೆಚ್ಚು ಸಂಖ್ಯೆಯಲ್ಲಿ ಅಂತರರಾಷ್ಟ್ರೀಯ ಪ್ರವಾಸಿಗಳು ಬರುವ ನಿರೀಕ್ಷೆ ಇದೆ. ಬರುವವರೆಲ್ಲಾ ಪಂಚತಾರಾ ಹೋಟೆಲಿಗೆ ಹೋಗಲಾರರು. ತೀರ ಕಡಿಮೆ ಖರ್ಚಿನಲ್ಲಿ ಊಟ ತಿಂಡಿ ನಿರ್ವಹಿಸಬೇಕಾದರೆ ರಸ್ತೆ ಬದಿಯ ದಾಬಾ ಅಂಗಡಿಗಳಲ್ಲೂ ಊಟ ಮಾಡಬಹುದು. ಆದರೆ ಸಾಮಾನ್ಯವಾಗಿ ಆತಂಕವೆಂದರೆ ಇಲ್ಲಿ ಆರೋಗ್ಯಕರ ನೈರ್ಮಲ್ಯ, ಸೇವಾ ರೀತಿ ಇವು ಅಷ್ಟು ಉತ್ತಮವಲ್ಲ ಎಂಬುದು. ಈ ವಿಷಯವನ್ನು ಈ ಕ್ಷೇತ್ರದ ಉದ್ಯಮಿಗಳ ಜತೆ ಚರ್ಚಿಸಿದೆವು. ಅವರಲ್ಲಿ ಬಹುಪಾಲು ಮಂದಿ ಕ್ಯೂಸಿಐ ನಿರ್ಧರಿಸುವ ಸರಳ ಗುಣಮಟ್ಟದ ಸೂತ್ರವನ್ನು ಅಂಗೀಕರಿಸಿ, ಅದರಂತೆ ತಮ್ಮ ಜಾಗವನ್ನು ಸೇವೆಯನ್ನು ಉತ್ತಮಪಡಿಸಿಕೊಳ್ಳಲು ಮುಂದಾಗಿದ್ದಾರೆ. ಅವರಿಗಾಗಿ ಒಂದು ಪ್ರಮಾಣವನ್ನು ತಯಾರಿಸಲಾಗಿದೆ. ನಮ್ಮಿಂದ ತರಬೇತಿ ಪಡೆದ ಇನ್‌ಸ್ಪೆಕ್ಟರ್‌ಗಳು ಪರೀಕ್ಷಿಸಿ ಪ್ರಮಾಣ ಪತ್ರ ನೀಡಬಹುದೆಂದು ಶಿಫಾರಸು ಮಾಡುತ್ತಾರೆ.

ಈಗಾಗಲೆ ದೆಹಲಿಯ ಸಿಹಿತಿಂಡಿಗೆ ಹೆಸರಾಂತ ಚಾಂದನಿ ಚೌಕ್ ಅಂಗಡಿಗಳು ಇಂತಹ ಪ್ರಮಾಣ ಪತ್ರಗಳನ್ನು ಪಡೆದು ತಮ್ಮ ನೈರ್ಮಲ್ಯ ಮತ್ತು ಸೇವಾ ಮಟ್ಟವನ್ನು ಹೆಚ್ಚಿಸಿಕೊಂಡಿವೆ. ದೇಶಾದ್ಯಂತ ಇಂಥದೊಂದು ಚಳುವಳಿ ಆದರೆ ಈ ಕ್ಷೇತ್ರದಲ್ಲಿ ವ್ಯಾಪಾರ, ಉದ್ಯೋಗ ಅಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ. ಪ್ರವಾಸೀ ಕ್ಷೇತ್ರ – ಆಂತರಿಕ ಹಾಗೂ ಅಂತರರಾಷ್ಟ್ರೀಯ – ಎರಡಕ್ಕೂ ಇದೊಂದು ಕೊಡುಗೆ ಆಗಬಲ್ಲುದು.

ದೇಶದ ಎಲ್ಲ ಸರ್ಕಾರಿ ಆಸ್ಪತ್ರೆಗಳೂ, ಅವರ ವೈದ್ಯಕೀಯ ಪರೀಕ್ಷಾಲಯಗಳೂ ಗುಣಮಟ್ಟ ಪತ್ರ ಪಡೆಯಬೇಕೆಂಬ ಚಳುವಳಿ ಆರಂಭವಾಗಿದೆ. ಗುಜರಾತ್, ಕೇರಳ, ಮಧ್ಯಪ್ರದೇಶ, ಆಂಧ್ರಪ್ರದೇಶ, ತಮಿಳುನಾಡುಗಳ ಸರ್ಕಾರ ಇದಕ್ಕೆ ಮುಂದಾಗಿವೆ. ಕೇಂದ್ರ ಸರ್ಕಾರದ ಎಲ್ಲ ಆಸ್ಪತ್ರೆಗಳೂ, ಸಿಜಿಹೆಚ್‌ಎಸ್ ಮುಂತಾದುವು ಸರ್ಕಾರದ ಆದೇಶದಂತೆ ಇಂಥ ಪ್ರಮಾಣ ಪತ್ರ ಪಡೆಯಲು ಸಜ್ಜುಗೊಳ್ಳುತ್ತಿವೆ. ಒಮ್ಮೆ ಸರ್ಕಾರಿ ಕ್ಷೇತ್ರದ ಘಟಕಗಳು ಹೀಗೆ ಪ್ರಮಾಣೀಕೃತವಾದ ಮೇಲೆ, ಖಾಸಗಿ ಕ್ಷೇತ್ರದ ಆಸ್ಪತ್ರೆಗಳನ್ನು ಒತ್ತಾಯಿಸುವುದು, ಇದಕ್ಕೆ ತಕ್ಕ ಕಾನೂನು ಮಾಡುವುದು ಸುಲಭವಾಗುತ್ತದೆ. ಈಗಾಗಲೆ ರಕ್ತಪರೀಕ್ಷೆ ಮುಂತಾದುವನ್ನು ಮಾಡುವ ಕ್ಲಿನಿಕಲ್ ಲ್ಯಾಬೊರೆಟರಿಗಳಿಗೆ ಕ್ಯೂಸಿಐನಿಂದ ಪ್ರಮಾಣೀಕರಣ ಪಡೆಯಲು ಒತ್ತಾಯಿಸಿ, ಇನ್ನು ಎರಡು ವರ್ಷಗಳಲ್ಲಿ ಇದು ಕಾನೂನು ಆಗುತ್ತದೆ. ವೈದ್ಯಕೀಯ ಸೇವೆಯಲ್ಲಿ ಇದೊಂದು ಮಹತ್ತರ ಪರಿಣಾಮಕಾರಿಯಾದುದು. ನಮ್ಮ ಜನಕ್ಕೆ ಇದರಿಂದ ನಂಬಲರ್ಹವಾದ ಸೇವೆ ದೊರೆಯುತ್ತದೆ. ಈಗಾಗಲೆ ಅಂತರರಾಷ್ಟ್ರೀಯವಾಗಿ ರೋಗಿಗಳು ನಮ್ಮ ನಾಡಿನ ಆಸ್ಪತ್ರೆ ಗಳಿಗೆ ಚಿಕಿತ್ಸೆಗೆ ಬರುತ್ತಿದ್ದು, ವೈದ್ಯಕೀಯ ಪ್ರವಾಸವೆಂಬುದು ಒಂದು ಬೃಹದುದ್ಯಮವಾಗು ವುದಕ್ಕೆ, ಈ ಗುಣಮಟ್ಟದ ಚಳುವಳಿಯ ಕೊಡುಗೆ ದೊಡ್ಡದು. ಈಗಾಗಲೆ ತಮಿಳುನಾಡು, ಮಧ್ಯಪ್ರದೇಶ, ಆಂಧ್ರಪ್ರದೇಶ, ಮಹಾರಾಷ್ಟ್ರ ಸರ್ಕಾರಗಳು ತಮ್ಮ ಸರ್ಕಾರೀ ಆಸ್ಪತ್ರೆಗಳ ಗುಣಮಟ್ಟವನ್ನು ಕ್ಯೂಸಿಐ ಪ್ರಮಾಣೀಕೃತ ಮಾಡಿಸಿಕೊಳ್ಳಲು ಮುಂದಾಗಿವೆ.


ಸಂದರ್ಶಕ ಪಾರ್ಥಸಾರಥಿ ಗಿರಿಧರ್ ಜ್ಞಾನಿಯವರೊಂದಿಗೆ

ಸೀಸದ ನಂಜು ತಡೆಯಲು, ಹಾಗೆಯೇ ಇನ್ನಿತರ ಭಾರಲೋಹದ ನಂಜು ತಡೆಯಲು, ಇದಕ್ಕೆ ಸಂಬಂಧಪಟ್ಟ ಬ್ಯಾಟರಿ ತಯಾರಿ ಮುಂತಾದ ಕ್ಷೇತ್ರಗಳಲ್ಲಿ ಕ್ಯೂಸಿಐ ಪ್ರಮಾಣ ಪತ್ರ ಪಡೆಯಲು ಸರ್ಕಾರದ ಆಜ್ಞೆ ಆಗಿದೆ. ಹಾಗೆಯೆ ಬರುವ ವರ್ಷದಿಂದ ದೇಶಾದ್ಯಂತ ಸೀಸ ಸೇರಿಸಿದ ಪೆಯಿಂಟ್‌ಗಳನ್ನು ತಯಾರಿಸುವುದನ್ನು ನಿಲ್ಲಿಸುವ ಚಿಂತನೆ ಇದೆ. ಸೀಸವನ್ನು ಎಲ್ಲೆಲ್ಲಿ ಬಳಸುವರೋ ಅಲ್ಲೆಲ್ಲಾ ಈ ಪ್ರಮಾಣೀಕರಣ ಕಡ್ಡಾಯವಾಗುತ್ತದೆ.

ಹೈಸ್ಕೂಲ್‌ವರೆಗಿನ ಖಾಸಗಿ ಶಿಕ್ಷಣ ಸಂಸ್ಥೆಗಳು ಭರದಿಂದ ಬೆಳೆಯುತ್ತಿದ್ದು, ಅವುಗಳಲ್ಲಿ ಮೂಲಭೂತ ಅನುಕೂಲಗಳನ್ನು ಸೇರಿದಂತೆ ವಿಪರೀತ ಕೊರತೆ ಇದೆ. ಈ ಸಂಸ್ಥೆ ಹೇಗಿರ ಬೇಕೆಂಬ ಪ್ರಮಾಣವನ್ನು ನಾವು ಈಗ ನಿರ್ಧರಿಸಿದ್ದೇವೆ. ಇದರನ್ವಯ ಸರ್ಕಾರ ಎಲ್ಲ ಸಿಬಿಎಸ್ ಸ್ಕೂಲುಗಳನ್ನು ಈ ಪ್ರಮಾಣ ಪರೀಕ್ಷೆಗೆ ಒಳಪಡಿಸಲು ಮುಂದಾಗಿದೆ. ಖಾಸಗಿ ಕ್ಷೇತ್ರದ ಸಿಬಿಎಸ್ ಶಾಲೆಗಳಿಗೆ ಕ್ಯೂಸಿಐ ಪ್ರಮಾಣವನ್ನು ಅನುಸರಿಸಲು ಒಂದಿಷ್ಟು ಕಾಲಾವಕಾಶ ನೀಡ ಲಾಗಿದೆ. ದೇಶವಿದೇಶಗಳಿಂದ ವಿದ್ಯಾರ್ಥಿಗಳು ನಮ್ಮ ಶಾಲೆಗಳಿಗೆ ಬರುತ್ತಿದ್ದು ಇದೊಂದು ದೊಡ್ಡ ಉದ್ಯಮವಾಗುತ್ತಿದ್ದಂತೆಯೇ ಈ ಕ್ಷೇತ್ರದ ಗುಣಮಟ್ಟ ಕಾಯ್ದುಕೊಳ್ಳುವುದು ಜರೂರಾದ ಕೆಲಸವಾಗಿದ್ದು ಕ್ಯೂಸಿಐ ಸಂಪೂರ್ಣವಾಗಿ ಇದರಲ್ಲಿ ತೊಡಗಿಕೊಂಡಿದೆ. ಈಗಾಗಲೆ ತಮಿಳುನಾಡು, ಮಧ್ಯಪ್ರದೇಶ, ಗುಜರಾತ್ ಮತ್ತು ಕೇರಳ ಸರ್ಕಾರಗಳು ಕ್ಯೂಸಿಐನ ಪ್ರಮಾಣವನ್ನು ಅಂಗೀಕರಿಸಿ, ಪ್ರಮಾಣೀಕರಣದ ಕೆಲಸ ಭರದಿಂದ ಸಾಗುತ್ತಿದೆ. ಶಾಲೆಯ ಅಥವಾ ಆಸ್ಪತ್ರೆಯ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸುವುದು, ಅಲ್ಲಿಯ ನರ್ಸ್ ಮುಂತಾದವರಿಗೆ ಅಗತ್ಯಬಿದ್ದರೆ ಹೆಚ್ಚಿನ ತರಬೇತಿ, ಅನೇಕ ಹೊಸ ಹೊಸ ಉಪಕರಣಗಳು ಇವೆಲ್ಲಾ ಪ್ರಮಾಣೀಕರಣದ ಮಟ್ಟಕ್ಕೆ ಏರಲು ಬೇಕಾಗುತ್ತವೆ. ಹಣ ಬೇಕಾಗುತ್ತದೆ. ಈ ಸರ್ಕಾರಗಳು ಇದಕ್ಕೆ ತಯಾರಾಗಿರುವುದು ಸಂತೋಷ.

**ಹೊಸತು :** ಕೊನೆಯದಾಗಿ ಒಂದು ಪ್ರಶ್ನೆ. ಖಾದ್ಯತೈಲಗಳಲ್ಲಿ ನಮ್ಮಲ್ಲಿ ೫ ಪಿಪಿಎಂ ಸೀಸದ ಶೇಷವನ್ನು ಗುಣಮಟ್ಟವಾಗಿ ನಿರ್ಧರಿಸಲಾಗಿದೆ. ಅದೇ ಅಮೆರಿಕಾದಲ್ಲಿ ಅದು ನಿಶ್ಶೇಷವಾಗಿರಬೇಕು ಎಂದು ಕೇಳಿದ್ದೇವೆ. ಅಮೆರಿಕಾದ ಖಾದ್ಯತೈಲ ಕಂಪನಿಗಳು ಭಾರತಕ್ಕೆ ಮಾರುವ ತೈಲಗಳಲ್ಲಿ ೫ ಪಿಪಿಎಂ ಅನ್ನೇ ಉಳಿಸಿಕೊಂಡಿವೆಯಂತೆ. ಇದೆಂಥ ನ್ಯಾಯ ? ಈ ಎಣ್ಣೆಯನ್ನು ಬಳಸುವ ಮನುಷ್ಯರು ಒಬ್ಬರೇ ತಾನೆ ?

**ಗಿರಿಧರ್ ಜ್ಞಾನಿ :** ನೀವು ಹೇಳುವುದು ಸರಿ. ಜನ ವಿವಿಧ ದೇಶಗಳವರಿರಬಹುದು, ಸಂಸ್ಕೃತಿಯವರಿರಬಹುದು. ಆದರೆ ಊಟದ ಗುಣಮಟ್ಟ ಮನುಷ್ಯರಿಗೆಲ್ಲಾ ಒಂದೇ ಇರಬೇಕು. ಎಲ್ಲರೂ ಅಂತರರಾಷ್ಟ್ರೀಯವಾಗಿ ಈ ವಿಷಯ ಒಪ್ಪಂದಕ್ಕೆ ಬಂದರೆ ಆಗ ಇದನ್ನು ಒತ್ತಾಯಿಸಲು, ಶಾಸನ ಮಾಡಲು ಸಾಧ್ಯ. ಕ್ಯೂಸಿಐ ಅಂಥ ಗುರಿಯನ್ನು ಹೊಂದಿದೆ. ನಾವು ನೀಡುವ ಮಾನ್ಯತಾ ಪತ್ರ ಅಂದರೆ ಅದು ಈ ಸರಕು, ಅದರ ಉತ್ಪಾದನಾ ಪ್ರಕ್ರಿಯೆ, ಸಂರಚನೆ, ವಿಶ್ವಾಸಾರ್ಹತೆ ಇವನ್ನೆಲ್ಲಾ ಗುರುತಿಸಿ, ಮನ್ನಿಸಿದೆ ಎಂದು ಅರ್ಥ. ಈ ಕುರಿತು ಕ್ಯೂಸಿಐ ಜನರಲ್ಲಿ ತಿಳಿವು ತುಂಬಲು ಹಲವು ರೀತಿಯ ಪ್ರಚಾರ, ಪ್ರಕಟಣೆ ಮುಂತಾದವು ಗಳಲ್ಲೂ ತೊಡಗಿದೆ. ಜನತೆಯ ಪ್ರಜ್ಞೆಯ ಮಟ್ಟ ಹೆಚ್ಚಿದರೆ ಆಗ ವ್ಯಾಪಾರ ವಾಣಿಜ್ಯ ಅವರ ಆಣತಿಯಂತೆ ನಡೆಯಬೇಕಾಗುತ್ತದೆ. ಇದಕ್ಕೆ ನಾವು ಜನತೆಗೆ ಶಕ್ತಿ ನೀಡಬೇಕು.

**ಕೆ. ಎಸ್. ಪಾರ್ಥಸಾರಥಿ**
೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು-೫೬೨ ೧೫೭

ಹಲ್ಕು ಬಂದು ಹೆಂಡ್ತಿಗೆ ಹೇಳ್ದ, ''ಸಹನ ಬಂದಿದಾನೆ. ಎಷ್ಟು ದುಡ್ಡಿದ್ಯೋ ಅಷ್ಟನ್ನ ಅವ್ನಿಗೆ ಕೊಟ್ಬಿಡ್ತೀನಿ. ಹೇಗಾದ್ರೂ ಅವ್ನ ಕೈಯಿಂದ ಬಿಡಿಸ್ಕೊಂಡ್ರೆ ಸಾಕು.''

ಕಸ ಗುಡಿಸ್ತಿದ್ದ ಮುನ್ನಿ ಹಿಂತಿರ್ಗಿ ಹೇಳಿದ್ಲು: ''ಇರೋದೇ ಮೂರು ರುಪಾಯಿ. ಅದ್ನೂ ಕೊಟ್ಬಿಟ್ರೆ ಕಂಬ್ಳಿ ಎಲ್ಲಿಂದ ಬರತ್ತೆ? ಪುಷ್ಯ - ಮಾಘದ ರಾತ್ರಿ ಹೊಲ್ದಲ್ಲಿ ಕಳ್ಯೋದಾದ್ರೂ ಹೇಗೆ? ಫಸಲು ಬಂದಾಗ ದುಡ್ಡು ಕೊಡ್ತೀವಿ, ಈಗಿಲ್ಲಾಂತ ಹೇಳ್ಬಿಡು ಅವ್ನಿಗೆ.''

ಒಂದು ಕ್ಷಣ ಹಲ್ಕು ಅನಿಶ್ಚಿತತೆಯಿಂದ ಪರದಾಡಿದ. ಪುಷ್ಯ ಬಂದ್ಬಿಟ್ಟಿದೆ. ಕಂಬ್ಳಿ ಇಲ್ದೆ ರಾತ್ರಿ ಹೊಲಕ್ಕೆ ಹೋಗೋದು ಸಾಧ್ಯಾನೇ ಇಲ್ಲ. ಆದ್ರೆ ಸಹನಾ ಒಪ್ಪಲ್ಲ. ಬೆದರಿಸ್ತಾನೆ, ಬೈತಾನೆ. ಚಳಿಯಿಂದ ಸತ್ರೂ ಸರಿ, ತಲೆ ಮೇಲಿನ ಭಾರವಂತೂ ಇಳಿಯತ್ತೆ ಎಂದು ಯೋಚಿಸ್ತಾ ಹೆಂಡ್ತಿ ಬಳಿ ಬಂದು ಅವ್ಳನ್ನ ಪುಸಲಾಯಿಸ್ತಾ ''ಕೊಟ್ಬಿಡು, ಅವ್ನಿಂದ ಬಿಡಿಸ್ಕೊಂಡ್ರೆ ಸಾಕು, ಕಂಬ್ಳಿಗಾಗಿ ಬೇರೇನಾದ್ರೂ ಉಪಾಯ ಹುಡ್ಕೋಣ'' ಅಂದ.

ಮುನ್ನಿ ಅವ್ನಿಂದ ದೂರ ಸರ್ದು ಕಣ್ಣು ತಿರುಗಿಸ್ತಾ ಹೇಳಿದ್ಲು, ''ಎರಡ್ನೇ ಉಪಾಯ ಹುಡುಕಿದ ಹಾಗೇ. ಏನು ಉಪಾಯ ಮಾಡ್ತಿ ಹೇಳು, ಸ್ವಲ್ಪ ಕೇಳೋಣ. ಯಾರಾದ್ರೂ ಬಿಟ್ಟಿ ಕೊಡ್ತಾರೇನು ಕಂಬ್ಳೀನಾ ? ಬಾಕಿ ಇರೋ ಸಾಲಾನಾ ತೀರ್ಸೋಕೇ ಆಗ್ತಿಲ್ಲ, ನಾ ಹೇಳೋದು ಕೇಳು. ನೀನು ಹೊಲ ಮಾಡೋದ್ಯಾಕೆ ಬಿಟ್ಬಿಡ್ಬಾರ್ದು? ಸಾಯ್ತಾ ಬೀಳ್ತಾ ಕೆಲ್ಸ ಮಾಡೋದು. ಬೆಳೆ ಬಂದ್ರೆ ಎಲ್ಲಾ ಕೊಟ್ಟು ಬಾಕಿ ತೀರ್ಸೋದು. ಅಲ್ಲಿಗೆ ಮುಗೀತು. ಬಾಕಿ ತೀರ್ಸೋಕೇ ನಾವು ಹುಟ್ಟಿರೋದು. ಹೊಟ್ಟೆಪಾಡಿಗೆ ಕೂಲಿ ಮಾಡೋದು. ಅಂಥ ಹೊಲ ಹಾಳಾಗ್ಲಿ. ನಾ ರೂಪಾಯಿ ಕೊಡಲ್ಲಾ... ಕೊಡಲ್ಲಾ.''

ಹಲ್ಕು ಉದಾಸೀನನಾಗಿ ಹೇಳಿದ, ''ಹಾಗಾದ್ರೆ ನಾನು ಬಯ್ಸಿಕೊಳ್ಳೇನು ?''

ಮುನ್ನಿ ತಡವರಿಸ್ತ ಹೇಳಿದ್ಲು, ''ಯಾಕೆ ಬಯ್ತಾನೆ ? ಅವ್ನದೇನು ದರ್ಬಾರು ?'' ಆದ್ರೆ ಅಷ್ಟು ಹೇಳೋದ್ರಲ್ಲೆ ಗಂಟಿಕ್ಕಿದ ಅವ್ಳ ಹುಬ್ಬುಗಳು ಸಡಿಲಾಗಿ, ಹಲ್ಕುವಿನ ಮಾತಿನ ಸತ್ಯ ಒಂದು ಭೀಷಣ ಸತ್ಯದಂತೆ ಅವಳನ್ನ ದುರ್ಗುಟ್ಟಿ ನೋಡಿತು.

ನೆಲುವಿನ ಮೇಲಿಟ್ಟ ರೂಪಾಯಿ ತಂದು ಹಲ್ಕುವಿನ ಕೈಗಿಟ್ಟು ಹೇಳಿದ್ಲು ಮುನ್ನಿ: ''ನೀನು ಈಗಿಂದ್ಲೇ ಹೊಲ ಮಾಡೋದು ಬಿಟ್ಬಿಡು. ಕೂಲಿ ಮಾಡಿದ್ರೆ ಊಟಕ್ಕೊಂದು ಕೊಟ್ಟಿನಾದ್ರೂ ಸಿಗತ್ತೆ. ಯಾರ ಹಂಗೂ ಇರಲ್ವಲ್ಲಾ ?''

ಹಲ್ಕು ತನ್ನ ಹೃದಯಾನೇ ತೆಗೆದುಕೊಡೋಕೆ ಹೋಗ್ತಿರೋ ಹಾಗೆ ರೂಪಾಯಿ ಹಿಡ್ದು ಹೊರಟ. ತನ್ನ ಕೂಲಿಯ ಒಂದೊಂದು ಕಾಸೂ ಉಳ್ಸಿ, ಕಂಬ್ಳಿಗಾಗಿ ಮೂರು ರೂಪಾಯಿ



# ಪುಷ್ಯದ ರಾತ್ರಿಯಲ್ಲಿ

ಕೂಡಿಟ್ಟಿದ್ದ. ಅವೆಲ್ಲಾ ಇಂದು ಖರ್ಚಾಗಿ ಹೋಗ್ತಿದೆ. ಒಂದೊಂದು ಹೆಜ್ಜೆಗೂ ತನ್ನ ದೀನತೆಯ ಭಾರದಡಿ ಅವನ ತಲೆ ಕುಸಿದುಹೋಗ್ತಿತ್ತು.

* * *

ಪುಷ್ಯದ ಕತ್ತಲ ರಾತ್ರಿ. ಆಕಾಶದ ನಕ್ಷತ್ರಗಳು ಚಳಿಯಿಂದ ನಡುಗೋ ಹಾಗೆ ಕಾಣ್ತಿದ್ವು. ಹಲ್ಕು ತನ್ನ ಹೊಲದಂಚಿನ ಗರಿಗಳ ಛಾವಣಿ ಕೆಳಗಿನ ಬಿದಿರು ಮಂಚದ ಮೇಲೆ, ತನ್ನ ಹಳೆಯ ಚಾದರ ಹೊದ್ದು ನಡುಗ್ತಿದ್ದ. ಅವ್ನ ಸಂಗಾತಿ ನಾಯಿ ಜಬರಾ ಹೊಟ್ಟೆಯ ಬಳಿ ಮೂತಿ ಹಾಕಿ, ಮಂಚದ ಕೆಳ್ಗೆ ಚಳಿಯಿಂದ ಕುಂಯ್ಗುಡ್ತಿತ್ತು. ಇಬ್ರಲ್ಲಿ ಒಬ್ರಿಗೂ ನಿದ್ರೆ ಇಲ್ಲ.

ಹಲ್ಕು ಮಂಡಿಗಳನ್ನ ಕೊರಳಿಗೆ ಆತುಕೊಳ್ತಾ ಹೇಳ್ದ, ''ಯಾಕೋ ಜಬರಾ, ಮನೇಲಿ ಬಿದ್ದಿರೂಂದ್ರೆ ಇಲ್ಲೇನು ಮಾಡೋಕೆ ಬಂದೆ ? ಚಳೀಲಿ ಒದ್ದಾಡು. ನಾನೇನು ಮಾಡ್ಲಿ? ಇಲ್ಲೇನು ನಾನು ಹಲ್ವ, ಪೂರಿ ತಿಂತಿನೀಂತಾ ಮುಂದ್ಮುಂದೆ ಓಡೋಡಿ ಬಂದ್ಯಾ ? ಈಗ ಕೂಗು.''

ಜಬರಾ ಮಲ್ಗಿದಲ್ಲಿಂದ್ಲೇ ಬಾಲ ಆಡಿಸಿ ಕುಂಯ್ಗುಡೋದನ್ನ ಜೋರು ಮಾಡ್ತ ಒಮ್ಮೆ ಆಕಳ್ಸಿ ತೆಪ್ಪಗಾಯ್ತು. ಅದ್ರ ಶ್ವಾನ ಬುದ್ಧಿಗೆ ತನ್ನೊಡೆಯನಿಗೆ ತನ್ನ ಕುಂಯ್ಗುಡುವಿಕೆಯಿಂದ ನಿದ್ದೆ ಬರ್ತಿಲ್ಲಾಂತ ಅರ್ಥವಾಗಿರ್ಬೇಕು.

ಥಂಡಿ ಹಿಡಿದ ಜಬರನ ಬೆನ್ನು ನೀವುತ್ತ ಹಲ್ಕು ಹೇಳ್ದ, ''ನಾಳೆಯಿಂದ ನಂಜೊತೆ ಬರ್ಬೇಡ. ಥಂಡಿ ಹಿಡಿದ್ಬಿಡತ್ತೆ. ಗಾಳಿ ಅದೆಲ್ಲಿಂದ ಈ ಹಿಮ ತಗೊಂಡು ಬರ್ತಿದ್ಯೋ! ಎದ್ದು ಒಂದು ಚಿಲುಮೇನಾದ್ರೂ ಸೇದೋಣ. ಹೇಗಾದ್ರೂ ರಾತ್ರೀ ಅಂತೂ ಕಳೀಬೇಕಲ್ಲಾ. ಈಗಾಗ್ಲೇ ಎಂಟು ಸಲ ಹುಕ್ಕ ಸೇದಿದ್ದಾಯ್ತು. ಹೊಲ ಮಾಡೋದ್ರ ಮಜಾ ಇದು. ಕೆಲವು ಅದೃಷ್ಟವಂತ್ರು ಹೀಗೂ ಇರ್ತಾರೆ. ಚಳಿ ಅವ್ರ ಹತ್ರ ಹೋದ್ರೂ ಅವ್ರ ಶಾಖಕ್ಕೇ ಹೆದ್ರಿ ಓಡ್ಹೋಗತ್ತೆ. ದಪ್ಪದಪ್ಪ ಹಾಸಿಗೆ, ರಜಾಯಿ-ಕಂಬ್ಳಿ, ಶಕ್ತೀನೂ ಇದ್ರೆ ಚಳಿ ಸರ್ದು ಹೋಗತ್ತೆ. ಅದೃಷ್ಟವಂತ್ರು. ಕೂಲಿ ಮಾಡೋದು ನಾವು; ಮಜಾ ಮಾಡೋದು ಮತ್ತೊಬ್ರು.''

ಹಲ್ಕು ಎದ್ದ. ತಗ್ಗಿನಿಂದ ಸ್ವಲ್ಪ ಬೆಂಕಿ ತೆಗ್ದು ಚಿಲುಮೆಗೆ ತುಂಬಿದ. ಜಬರಾ ಕೂಡ ಎದ್ದು ಕೂತಿತು. ಹಲ್ಕು ಚಿಲುಮೆ ಸೇದುತ್ತಾ ಹೇಳಿದ, ''ಚಿಲುಮೆ ಸೇದ್ತೀಯ ? ಚಳಿ ಎಲ್ಲಾ ಹೋಗತ್ತೆ. ಮನಸ್ಸು ಸ್ವಲ್ಪ ಉಲ್ಲಾಸಗೊಳ್ಳತ್ತೆ.''

ಜಬರಾ ಪ್ರೀತಿಯಿಂದ ಅವ್ನ ಮುಖದತ್ತ ಹೊಳ್ಯೋ ಕಣ್ಣುಗ್ಳಿಂದ ನೋಡ್ತು. ''ಇವತ್ತು ಶೀತದಿಂದ ಒದ್ದಾಡು. ನಾಳೆಯಿಂದ ನಾನಿಲ್ಲಿ ಒಣಹುಲ್ಲು ಹಾಕ್ತೀನಿ. ಅದ್ರಲ್ಲಿ ನುಸುಳ್ಕೊಂಡು ಕೂತ್ಕೋ ಆಗ ಚಳಿಯಾಗಲ್ಲ.''

ಜಬರಾ ತನ್ನ ಪಾದವೆತ್ತಿ ಅವನ ತೊಡೆಯ ಮೇಲಿಟ್ಟು ತನ್ನ ಮುಖವನ್ನು ಹಲ್ಕುವಿನ ಮುಖದ ಬಳಿ ತಂದಿತು. ಹಲ್ಕುವಿಗೆ ಅದ್ರ ಬಿಸಿಯುಸಿರು ತಾಗಿತು. ಚಿಲುಮೆ ಸೇದಿ ಏನು ಬೇಕಾದ್ರೂ ಆಗ್ಲಿ, ಇನ್ನು ಮಲಗ್ತೀನೀಂತ ನಿಶ್ಚಯ ಮಾಡಿ ಹಲ್ಕು ಮಲಗ್ದ. ಆದ್ರೆ ಒಂದೇ ಕ್ಷಣದಲ್ಲಿ ಅವನೆದೇಲಿ ನಡ್ಕ ಶುರುವಾಯ್ತು. ಒಮ್ಮೆ ಈ ಮಗ್ಗಲು ಮತ್ತೊಮ್ಮೆ ಆ ಮಗ್ಗಲಾಗಿ ಮಲಗ್ದ. ಆದ್ರೆ ಚಳಿ ಮಾತ್ರ ಪಿಶಾಚಿಯಂತೆ ಅವ್ನೆದೆಯನ್ನು ಅಪ್ಪಿತ್ತು. ಯಾವ ರೀತೀಲೂ ಚಳಿ ತಡೆಯದಾದಾಗ, ಅವ್ನ

ಹಿಂದಿ ಮೂಲ : ಮುನ್ಷಿ ಪ್ರೇಮ್‌ಚಂದ್

ಜಬರಾನನ್ನ ಮೆಲ್ಲಗೆತ್ತಿ ತನ್ನ ತೊಡೆಯಮೇಲೆ ಮಲಗಿಸ್ಕೊಂಡು ಅದ್ರ ತಲೆ ತಟ್ಟತೊಡಗಿದ. ನಾಯಿಯ ಮೈಯಿಂದ ಅದೆಂಥಾ ದುರ್ಗಂಧ. ಆದ್ರೂ ಅದನ್ನು ತೊಡೆಗೆ ತಬ್ಬಿ ಅನುಭವಿಸ್ತಿದ್ದ ಸುಖ ಅನೇಕ ತಿಂಗ್ಳಿಂದ ಅವನ್ಗೆ ಸಿಕ್ಕಿರ್ಲಿಲ್ಲ. ಜಬರಾ ಬಹುಶಃ ಸ್ವರ್ಗ ಇಲ್ಲೇ ಇದೇಂತ ತಿಳ್ಕೊಳ್ತು. ಹಲ್ಕುವಿನ ಪವಿತ್ರ ಆತ್ಮದಲ್ಲಿ ಆ ನಾಯಿಯ ಬಗ್ಗೆ ತಿರಸ್ಕಾರದ ಗಂಧವೂ ಇರ್ಲಿಲ್ಲ. ತನ್ನೊಬ್ಬ ಮಿತ್ರ ಅಥ್ವಾ ಸೋದರನನ್ನ ಕೂಡ ಅವ್ನು ಇಷ್ಟು ತತ್ಪರತೆಯಿಂದ ತಬ್ಬಿಕೊಳ್ತಿದ್ನೋ ಇಲ್ವೋ. ಹಲ್ಕು ತನ್ನನ್ನಿಂದು ಈ ಸ್ಥಿತಿಗೆ ತಲುಪಿಸಿದ ದೀನತೆಯಿಂದಲೂ ಘಾಸಿಗೊಂಡಿರ್ಲಿಲ್ಲ. ಈ ವಿಚಿತ್ರ ಸ್ನೇಹದ ಒಂದೊಂದು ಅಣುವೂ ಪ್ರಕಾಶಮಾನವಾಗಿ ಹೊಳೀತಾ ಅವನ ಆತ್ಮದ ಎಲ್ಲ ದ್ವಾರಗಳನ್ನೂ ತೆರೆದುಬಿಟ್ಟಿತ್ತು.

ಇದ್ದಕ್ಕಿದ್ದಂತೆ ಜಬರಾ ಯಾವುದೋ ಪ್ರಾಣಿಯ ಸದ್ದಾಲಿಸಿತು. ಈ ವಿಶೇಷ ಆತ್ಮೀಯತೆ ಮೂಡಿಸಿದ ಚೈತನ್ಯ ಶೀತದ ಗಾಳಿಯನ್ನು ತುಚ್ಛವಾಗಿಸಿತ್ತು. ಗಡಬಡಿಸಿ ಎದ್ದು ಛಾವಣಿಯ ಹೊರಗೆ ಬಂದು ಬೊಗಳತೊಡಗಿತು. ಹಲ್ಕು ಅನೇಕ ಬಾರಿ ಅದನ್ನು ಪುಸಲಾಯಿಸಿ ಕರೆದ. ಆದರದು ಅವ್ನ ಹತ್ರ ಬರ್ದೆ, ಹೊಲದ ನಾಕೂ ಕಡೆ ಓಡುತ್ತಾ ಬೊಗಳತೊಡಗಿತು. ಒಂದು ಕ್ಷಣ ಅವ್ನ ಬಳಿ ಬಂದ್ರೂ ಮತ್ತೆ ಕೂಡಲೇ ಓಡುತ್ತಿತ್ತು. ಕರ್ತವ್ಯ ಅದ್ರ ಹೃದಯದಲ್ಲಿ ಪುಟಿದೇಳ್ತಿತ್ತು.

ಮತ್ತೊಂದು ಗಂಟೆ ಕಳೀತು. ರಾತ್ರಿ ಶೀತವನ್ನ ಇನ್ನೂ ತೀಕ್ಷ್ಣಗೊಳಿಸ್ತಿತ್ತು. ಹಲ್ಕು ಎದ್ದು ಕುಳಿತ. ಮಂಡಿಗಳೆರಡನ್ನೂ ಎದೆಗೆ ಸೇರ್ಸಿ, ತಲೇನ ಅದ್ರೊಳ್ಗೆ ಹುದುಗಿಸ್ದ. ಆದ್ರೂ ಥಂಡಿ ಕಡಿಮೆಯಾಗ್ಲಿಲ್ಲ. ರಕ್ತವೆಲ್ಲಾ ಹೆಪ್ಪುಗಟ್ಟಿತ್ತೇನೋ, ಧಮನಿಗಳಲ್ಲಿ ರಕ್ತದ ಜಾಗದಲ್ಲಿ ಹಿಮ ಹರೀತಿದ್ವೇನೋ ಅನ್ನಿಸ್ತಿತ್ತು. ಇನ್ನೂ ರಾತ್ರಿ ಎಷ್ಟು ಬಾಕಿ ಇದೆ ಎಂದು ಆಕಾಶದತ್ತ ನೋಡ್ದ. ಸಪ್ತರ್ಷಿಮಂಡಲ ಆಕಾಶ್ದಲ್ಲಿನ್ನೂ ಅರ್ಧ ಭಾಗವೂ ಮೇಲೇರಿಲ್ಲ. ಮೇಲೇರಿದ್ರೆ ಆಗ ಬೆಳಗಾಗತ್ತೆ. ಈಗಿನ್ನೂ ಪ್ರಹರಕ್ಕೂ ಹೆಚ್ಚು ರಾತ್ರಿ ಉಳ್ದಿದೆ.

ಹಲ್ಕುವಿನ ಹೊಲ್ದಿಂದ ತುಸು ಅಂತರದಲ್ಲಿ ಮಾವಿನ ತೋಟವಿತ್ತು. ಎಲೆ ಒಣಗುವ ಕಾಲ ಪ್ರಾರಂಭವಾಗಿತ್ತು. ತೋಟದಲ್ಲಿ ಎಲೆಗಳ ರಾಶಿ. ಎಲೆಗಳ್ನ ಗುಡ್ಡೆ ಮಾಡಿ ಉರ್ಸಿ ಚೆನ್ನಾಗಿ ಕಾಯಿಸ್ಕೋಬೇಕು. ರಾತ್ರಿ ಎಲೆ ಗುಡ್ಡೆ ಮಾಡೋದು ಯಾರಾದ್ರೂ ನೋಡಿದ್ರೆ ಯಾವ್ದೋ ಭೂತಾನೋ ಅಥ್ವಾ ಯಾವ್ದೋ ಪ್ರಾಣಿ ಅಡ್ಗಿ ಕೂತಿದ್ಯೋ ಅಂತಾ ತಿಳ್ಕೋತಾರೆ. ಆದ್ರೀಗ ಕೂತಿರೋಕೆ ಆಗ್ತಾ ಇಲ್ಲ.

ಹಲ್ಕು ಹತ್ತಿರದ ತೊಗರಿಯ ಹೊಲ್ದಿಂದ ಹಲವು ಗಿಡಗಳ್ನ ಕಿತ್ತು, ಕಟ್ಟಿ ದೊಂದಿಮಾಡಿ ತೋಟದತ್ತ ಹೊರಟ. ಅವ್ನು ಬರೋದನ್ನ ಕಂಡ ಜಬರಾ ಅವ್ನತ್ತ ಬಂದು ಬಾಲ ಆಡಿಸತೊಡಗಿತು.

''ಇನ್ನು ತಡ್ಯೋಕಾಗಲ್ಲ  ಜಬರಾ. ನಡೀ, ತೋಟ್ದಲ್ಲಿ ಎಲೆ ರಾಶಿ ಮಾಡಿ ಕಾಯಿಸ್ಕೊಳ್ಳೋಣ. ಬಿಸುಪಾದಾಗ ಮತ್ತೆ ಬಂದು ಮಲ್ಗೋಣ. ಇನ್ನೂ ರಾತ್ರಿ ಸಾಕಷ್ಟಿದೆ.'' ಜಬರಾ ಕುಂಯ್ಗುಡುತ್ತ ಸಮ್ಮತಿ ಸೂಚಿಸಿ ತೋಟದತ್ತ ಮುಂದೆ ಮುಂದೆ ಓಡಿತು.

ತೋಟದಲ್ಲೆಲ್ಲಾ ಹರಡಿದ ಕತ್ತಲಲ್ಲಿ ನಿರ್ದಯವಾದ ಗಾಳಿ ಎಲೆಗಳ್ನ ತುಳೀತಾ ಹೋಗ್ತಿತ್ತು. ಮರಗಳಿಂದ ಟಪಟಪನೆ ಬೀಳುವ ಹಿಮದ ಹನಿಗಳು. ಇದ್ದಕ್ಕಿದ್ದಂತೆ ಗಾಳಿಯ ಅಲೆ ಮೆಹಂದಿಯ ಹೂಗಳ ಪರಿಮಳ ಹೊತ್ತು ತಂದಿತು. ಎಷ್ಟೊಳ್ಳೆ ಸುಗಂಧ ಬಂತು. ''ನಿನ್ನ ಮೂಗಿಗೂ ಬಂತೇನೋ ಜಬರೂ ?'' ಎಂದ ಹಲ್ಕು. ನೆಲದಲ್ಲಿ ಬಿದ್ದ ಮೂಳೆಯ ತುಂಡೊಂದನ್ನು ಕಂಡ ನಾಯಿ ಅದನ್ನು ಜಗಿಯತೊಡಗಿತು.

ಹಲ್ಕು ಬೆಂಕೀನ ನೆಲದ ಮೇಲಿಟ್ಟು ಎಲೆಗಳ್ನ ಗುಡ್ಡೆಮಾಡತೊಡಗ್ದ ಸ್ವಲ್ಪ ಹೊತ್ತಿಗೇ ಎಲೆಗಳ ಒಂದು ರಾಶಿಯಾಯ್ತು. ಕೈ ಸೆಡೆತುಹೋಗುತ್ತಿತ್ತು. ಬರಿಗಾಲು ಕರಗಿಹೋಗುವಂತೆನಿಸುತ್ತಿದೆ. ಅವ್ನು ಎಲೆಗಳ ಬೆಟ್ಟವೊಟ್ಟುತ್ತಿದ್ದ. ಇದೇ ಬೆಂಕಿ ಅವನ ಶೀತವನ್ನು ಸುಟ್ಟು ಭಸ್ಮ ಮಾಡುತ್ತದೆ.

ಸ್ವಲ್ಪ ಹೊತ್ತಿಗೆ ಪ್ರಜ್ವಲಿಸಿದ ಬೆಂಕಿಯ ಜ್ವಾಲೆ ಮೇಲಿನ ವೃಕ್ಷಗಳ ಎಲೆಯನ್ನು ತಾಗಿ ತಾಗಿ ಓಡತೊಡಗಿತು. ಆ ಅಸ್ಥಿರ ಪ್ರಕಾಶದಲ್ಲಿ ತೋಟದ ವೃಕ್ಷಗಳು ಗಾಢಾಂಧಕಾರವನ್ನು ತಮ್ಮ ತಲೆಯಮೇಲೆ ಹೊತ್ತಿವೆಯೋ ಎನಿಸುತ್ತಿತ್ತು. ಅಂಧಕಾರದ ಅನಂತ ಸಾಗರದಲ್ಲಿ ಈ ಪ್ರಕಾಶ ಅಲುಗಾಡುವ ನೌಕೆಯಂತೆ ಕಾಣುತ್ತಿತ್ತು.

ಹಲ್ಕು ಬೆಂಕಿಯ ಮುಂದೆ ಕುಳಿತು ಕಾಯಿಸಿಕೊಳ್ಳುತ್ತಿದ್ದ. ಕ್ಷಣವೊಂದರಲ್ಲಿ ತನ್ನ ಚಾದರವನ್ನು ಬಗಲಿಗಿಟ್ಟು ಎರಡೂ ಕಾಲುಗಳನ್ನು ಚಾಚಿ, ನಿನ್ನ ಮನಬಂದಂತೆ ಮಾಡು ಎಂದು ಚಳಿಗೆ ಸವಾಲೊಡ್ಡುವಂತೆ ಮಲಗಿದ. ಚಳಿಯ ಅಸೀಮ ಶಕ್ತಿಯ ಮೇಲೆ ವಿಜಯ ಸಾರಿದ ಗರ್ವವನ್ನು ತನ್ನ ಹೃದಯದಲ್ಲಿ ಮುಚ್ಚಿಡಲು ಸಾಧ್ಯವಾಗದಾಯ್ತು ಅವನಿಗೆ.

''ಈಗ ಚಳಿಯಾಗ್ತಿಲ್ಲೇನು ಜಬರಾ ?'' ಎಂದ. ಈಗೇನು ಚಳಿ ಎನ್ನುವಂತೆ ಜಬರಾ ಕುಂಯ್ಗುಟ್ಟಿತು. ಮೊದ್ಲೇ ಈ ಉಪಾಯ ಹೊಳೀಲಿಲ್ಲ. ಇಲ್ದಿದ್ರೆ ಇಷ್ಟೊಂದು ಥಂಡಿ ಏಕಾಗ್ತಿತ್ತು ? ಜಬರಾ ಬಾಲ ಆಡಿಸಿತು.

''ಸರಿ ಬಾ. ಈ ಬೆಂಕಿಯ ರಾಶೀನ ಹಾರಿ ದಾಟೋಣ. ನೋಡೋಣ ಯಾರು ಹಾರ್ತಾರೆ ? ಆಕಸ್ಮಾತ್ ಪೆಟ್ಟಾದ್ರೂ ನಾನು ಔಷಧಿ ಹಾಕಲ್ಲ.'' ಜಬರಾ ಆ ಬೆಂಕಿ ರಾಶಿಯತ್ತ ಕಾತರವಾದ ಕಣ್ಣುಗಳಿಂದ ನೋಡ್ತು.

''ಮುನ್ನಿಯ ಬಳಿ ಹೇಳ್ಬೇಡ, ಜಗಳ ಮಾಡ್ತಾಳೆ'', ಎನ್ನುತ್ತಾ ನೆಗೆದು ಬೆಂಕಿಯ ರಾಶಿಯ ಮೇಲಿಂದ ಸಲೀಸಾಗಿ ದಾಟಿ ಬಂದ. ಕಾಲಿಗಷ್ಟು ಜ್ವಾಲೆ ತಾಗಿತು. ಅದೇನಂಥ ದೊಡ್ಡ ವಿಷಯವಲ್ಲ. ಜಬರಾ ಬೆಂಕಿಯ ಸುತ್ತ ಸುತ್ತಿ ಅವನತ್ತ ಒಂದು ನಿಂತಿತು.

''ನಡಿ, ನಡಿ, ಇದು ಸುಡಲ್ಲ. ಮೇಲಿಂದ ಹಾರಿ ಬಾ.'' ನಾಯಿ ಮತ್ತೆ ಹಾರಿ ಬೆಂಕಿ ರಾಶಿಯ ಈ ಬದಿಗೆ ಬಂತು.

ಎಲೆಗಳು ಉರಿದಿದ್ದು, ತೋಟದಲ್ಲಿ ಮತ್ತೆ ಕತ್ತಲಾವರಿಸಿತು. ಬೂದಿಯ ಕೆಳಗೆ ಚೂರುಪಾರು ಬೆಂಕಿಯುಳಿದಿದ್ದು, ಗಾಳಿ ಬೀಸಿದ ಕೂಡಲೇ ಸ್ವಲ್ಪ ಕಿಡಿಕಾರಿ, ಕ್ಷಣವೊಂದರಲ್ಲೇ ಮಸುಕಾಗುತ್ತಿತ್ತು.

ಹಲ್ಕು ಚಾದರ ಹೊದ್ದು ಬಿಸಿ ಬೂದಿಯ ಬಳಿ ಕುಳಿತು ಹಾಡೊಂದನ್ನು ಗುಣುಗುಣಿಸ ತೊಡಗಿದ. ಅವನ ಶರೀರದಲ್ಲಿ ಶಾಖ ಹುಟ್ಟಿತ್ತು. ಆದರೆ ಶೀತ ಹೆಚ್ಚಿದಂತೆಲ್ಲಾ ಆಲಸ್ಯ ಅವನನ್ನು ಅದುಮುತ್ತಿತ್ತು. ಜಬರಾ ಜೋರಾಗಿ ಬೊಗಳುತ್ತ ಹೊಲದತ್ತ ಓಡಿತು. ಪ್ರಾಣಿಗಳ ಹಿಂಡೊಂದು ತನ್ನ ಹೊಲಕ್ಕೆ ನುಗ್ಗಿರುವ ಅನುಭವ. ಬಹುಶಃ ದನಗಳ ಹಿಂಡಿರಬೇಕು. ಅವು ಓಡುವ ಸದ್ದು ಸ್ಪಷ್ಟವಾಗಿ ಕಿವಿಗೆ ಕೇಳುತ್ತಿದೆ. ತನ್ನ ಹೊಲದಲ್ಲಿ ಅವು ಮೇಯುವ, ಚರಚರನೆ ಅಗಿವ ಸದ್ದು ಮತ್ತೆ ಕೇಳಿಸ್ತೇನು ?

ಇಲ್ಲ, ಜಬರ ಇರುವಾಗ ಯಾವ ಪ್ರಾಣಿಯೂ ಹೊಲಕ್ಕೆ ಬರಲು ಸಾಧ್ಯವಿಲ್ಲ. ಜಗಿದೇ ಹಾಕೀತು. ನಂಗೆ ಭ್ರಮೆಯಾಗ್ತಿದೆ. ಹಾ, ನಂಗೀಗ ಏನೂ ಕೇಳ್ತಿಲ್ವಲ್ಲಾ ? ನಾನೆಷ್ಟು ಮೋಸ ಹೋದೆ ಎಂದು ಮನದಲ್ಲೇ ಅಂದುಕೊಂಡ. ''ಜಬರಾ, ಜಬರಾ'' ಹಲ್ಕು ಜೋರಾಗಿ ಕೂಗಿದ.

ಜಬರಾ ಅವನ ಬಳಿ ಬರದೆ ಜೋರಾಗಿ ಬೊಗಳುತ್ತಿತ್ತು. ಮತ್ತೆ ಹೊಲ ಮೇಯುವ ಸದ್ದು. ಈಗವ್ನು ತನಗೆ ತಾನು ಮೋಸ ಹೋಗಲು ಸಾಧ್ಯವಿಲ್ಲ. ತನ್ನ ಜಾಗದಿಂದೀಗ ಅಲ್ಲಾಡುವುದು ಅವನಿಗೆ ವಿಷ ಸಮಾನವಾಗಿತ್ತು. ಎಂಥ ಉಪದ್ರವ ? ಈ ಕೊರೆತದಲ್ಲಿ ಹೊಲಕ್ಕೆ ಹೋಗುವುದು, ಪ್ರಾಣಿಗಳ ಹಿಂದೆ ಓಡುವುದು ಅರ್ಥವಿಲ್ಲದ್ದೆನಿಸಿ ಮಲಗೇ ಇದ್ದ. ತನ್ನ ಜಾಗದಿಂದಲ್ಲಾಡದೇ ಜೋರಾಗಿ ಕೂಗಿದ. ಹೋ… ಹೋ… ಹೋ…!!

ಜಬರಾ ಬೊಗಳಿತು. ಪ್ರಾಣಿಗಳು ಹೊಲ ಮೇಯುತ್ತಿದ್ದವು. ಫಸಲು ಬೆಳೆದು ನಿಂತಿತ್ತು. ಎಷ್ಟೊಳ್ಳೆ ಬೆಳೆ ! ಆದ್ರೆ ಈ ದುಷ್ಟ ಪ್ರಾಣಿಗಳು ಅದನ್ನು ಸರ್ವನಾಶ ಮಾಡ್ತಿವೆ.

ಹಲ್ಕು ದೃಢ ನಿರ್ಧಾರ ಮಾಡಿ, ಎದ್ದು ೨-೩ ಹೆಜ್ಜೆ ಮುಂದಿಟ್ಟ. ಆದ್ರೆ ಇದ್ದಕ್ಕಿದ್ದಂತೆ ಚೇಳಿನ ಕೊಂಡಿ ಕುಟುಕುವಂತೆ ಚುಚ್ಚುವ ಥಂಡಿಗಾಳಿಯೊಮ್ಮೆ ಬೀಸಿತು. ಅವ್ನು ಆರ್ತಿದ್ದ ಬೆಂಕಿ ಬಳಿ ಕೂತು ಬೂದಿಯನ್ನು ಕೆದಕಿ ತನ್ನ ನಡುಗುವ ದೇಹವನ್ನು ಬಿಸಿ ಮಾಡಿಕೊಳ್ಳತೊಡಗಿದ.

ಜಬರಾ ತನ್ನ ಗಂಟಲು ಹರಿದುಕೊಳ್ಳುತ್ತಿತ್ತು. ಹಸುಗಳು ನಿರಾಳವಾಗಿ ಹೊಲ ಮೇಯ್ದು ಖಾಲಿ ಮಾಡ್ತಿದ್ವು. ಹಲ್ಕು ಬಿಸಿ ಬೂದಿಯ ಪಕ್ಕ ಶಾಂತವಾಗಿ ಕೂತಿದ್ದ. ಅಕರ್ಮಣ್ಯತೆ ಹಗ್ಗದಂತೆ ಅವ್ನನ್ನ ನಾಲ್ಕು ಕಡೆಗಳಿಂದ ಬಿಗ್ದಿತ್ತು. ಅದೇ ಬೂದಿಯ ಪಕ್ಕದ ಬಿಸಿ ನೆಲದ ಮೇಲೆ ಚಾದರ ಹೊದ್ದು ಮಲಗಿಬಿಟ್ಟ.

ಬೆಳಗ್ಗೆ ಎಚ್ಚರವಾದಾಗ ನಾಲ್ಕು ಕಡೆಯೂ ಬಿಸಿಲು ಹಬ್ಬಿತ್ತು. ''ಇವತ್ತೇನು ಇಲ್ಲೇ ಇರ್ತೀಯಾ ?'' ಅಂತಿದ್ಲು ಮುನ್ನಿ. ''ನೀನು ಇಲ್ಬಂದು ಮಲಗ್ಬಿಟ್ರೆ. ಆ ಕಡೆ ಹೊಲವೆಲ್ಲಾ ಸರ್ವನಾಶವಾಯ್ತು.''

''ನೀನು ಹೊಲದಿಂದ ಬರ್ತಿದೀಯೇನು ?'' ಏಳ್ತಾ ಕೇಳಿದ ಹಲ್ಕು.

''ಹೌದು, ಇಡೀ ಹೊಲದ ಸರ್ವನಾಶವಾಯ್ತು. ಹೀಗೂ ಯಾರಾದ್ರೂ ಮಲಗ್ತಾರೇನು ? ನೀನಿಲ್ಲಿ ಗುಡಿಸ್ಲು ಹಾಕ್ಕೊಂಡು ಏನು ಪ್ರಯೋಜನ ಆಯ್ತು ?''

ಹಲ್ಕು ನೆವ ಹೇಳ್ದ. ''ನಾನು ಸಾಯ್ತಾ ಸಾಯ್ತಾ ಬದುಕ್ದೆ. ನಿಂಗೆ ನಿನ್ನ ಹೊಲ್ದ ಯೋಚ್ನೆ. ನಾನೆಂಥ ಹೊಟ್ಟೆನೋವು ಅನುಭವಿಸ್ದೆ ಅಂತ ನಂಗೇ ಗೊತ್ತು.''

ಇಬ್ರೂ ಪುನಃ ಹೊಲದ ದಂಡೆಗೆ ಬಂದ್ರು. ಇಡೀ ಹೊಲ ತುಳಿಯಲ್ಪಟ್ಟಿದೆ. ಜಬರಾ ಗುಡಿಸಲ ಕೆಳಗೆ ನಿರ್ಜೀವವಾದಂತೆ ಅಂಗಾತವಾಗಿ ಮಲ್ಗಿದೆ. ಇಬ್ರೂ ಹೊಲದ ಸ್ಥಿತಿ ನೋಡ್ತಿದ್ರು. ಮುನ್ನಿಯ ಮುಖದ ಮೇಲೆ ಉದಾಸೀನ ಹರ್ಡಿತ್ತು. ಆದ್ರೆ ಹಲ್ಕು ಪ್ರಸನ್ನನಾಗಿದ್ದ.

''ಈಗ ಕೂಲಿ ಮಾಡಿ ಹೊಟ್ಟೆ ಹೊರೆಯಬೇಕು'' ಚಿಂತಿತಳಾಗಿ ಮುನ್ನಿ ಅಂದಳು. ''ಸದ್ಯ ರಾತ್ರಿಯ ಈ ಥಂಡಿ ಕೊರೆತದಲ್ಲಿ ಈ ಹೊಲದಲ್ಲಂತೂ ಮಲಗಬೇಕಾಗಿಲ್ವಲ್ಲಾ !'' ಹಲ್ಕು ಖುಷಿಯಿಂದ ಹೇಳ್ದ !

---

ಹಿಂದಿ ಮೂಲ : ಮುನ್ಷಿ ಪ್ರೇಮ್‌ಚಂದ್
ಕನ್ನಡಕ್ಕೆ : ಟಿ. ಎಸ್. ಲಲಿತ
ನಂ. ೭೦೨, ೧ನೇ ಮಹಡಿ, ೧೭ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯



# ಒಂದಿಷ್ಟು ಅರ್ಥಶಾಸ್ತ್ರ: ಬೆಲೆ, ಮೌಲ್ಯ, ದುಡಿಮೆ, ಸೃಜನಶೀಲತೆ ಮುಂತಾಗಿ

'ಸರಕು' ಎಂದರೆ ಹಣವಿನಿಮಯದ ಮೂಲಕ ಮಾರುಕಟ್ಟೆಯಲ್ಲಿ ಸಿಗುವಂಥವು. – ಅಕ್ಕಿ, ಯಂತ್ರ, ಟೆಲಿಫೋನ್ ಸೇವೆ, ಟ್ಯೂಷನ್ ಶಿಕ್ಷಣ, ಕಾರ್ಮಿಕನ ಶ್ರಮ, ವೈದ್ಯಕೀಯ ಸೇವೆ, ಷೇರು, ಇವೆಲ್ಲ ಬಂಡವಾಳ ವ್ಯವಸ್ಥೆಯಲ್ಲಿ ಸರಕುಗಳೇ. ನಮಗೆ ಬೇಕಾದಷ್ಟು ಸರಕುಗಳನ್ನು ಉತ್ಪಾದಿಸಿ ಸರಬರಾಜು ಮಾಡುವುದು ಅಂಥ ಕಷ್ಟದ ಕೆಲಸವೇ ? ಹೇಗೂ ಮಾರಾಟ ಹೆಚ್ಚಿಸಿದಷ್ಟೂ ಉತ್ಪಾದಕನ ಲಾಭವೂ ಹೆಚ್ಚುವುದಿಲ್ಲವೆ ? ಸರಕು ಉತ್ಪಾದಿಸಲು ಅಗತ್ಯವಾದಷ್ಟು ಮೂಲ ವಸ್ತುಗಳು, ಕೆಲಸ ತಿಳಿದ ಸಾಕಷ್ಟು ಕಾರ್ಮಿಕರು ಎರಡೂ ಲಭ್ಯವಿದೆ ಎಂದುಕೊಂಡಾಗಲೂ ಸರಕುಗಳ ಅಭಾವ ಏಕೆ ತಲೆದೋರುತ್ತದೆ ? ಅಭಾವ ಅಂದರೆ ಏನಾಗುತ್ತದೆ ? ಪೂರೈಕೆ ಬೇಡಿಕೆಗಿಂತ ಕಡಿಮೆ, ಆದ್ದರಿಂದ ಇಂದಿನ ವ್ಯವಸ್ಥೆಯಲ್ಲಿ ಅದರ ಬೆಲೆ ಏರಲೇಬೇಕಲ್ಲ! ಏರುವುದಕ್ಕೆ ಅವರು ನೀಡುವ ಕಾರಣ : ಹಾಗೆ ಬೆಲೆ ಏರಿಸಿದಾಗ ಯಾರಿಗೆ ಅಗತ್ಯದ ಆದ್ಯತೆ ಇದೆಯೋ ಅವರು ಮಾತ್ರ ಕೊಳ್ಳುತ್ತಾರೆ. ಅಂಥ ಅಗತ್ಯವಿಲ್ಲದವರು, ಸದ್ಯಕ್ಕೆ ಅದನ್ನು ಕೊಳ್ಳುವುದನ್ನೆ ನಿಲ್ಲಿಸುತ್ತಾರೆ. ಮುಂದೆ ಬೇಡಿಕೆ ನಿಜಕ್ಕೂ ಹೆಚ್ಚಿದ್ದಾಗ ಉತ್ಪಾದನೆ ಹೆಚ್ಚಿಸಿ ಕೊರತೆಯನ್ನು ನೀಗಿಸಿಕೊಳ್ಳಬಹುದು ಎನ್ನುತ್ತದೆ ಈ ವ್ಯವಸ್ಥೆ. ''ನಾನು ಬೆಲೆ ಏರಿಸಲಿಲ್ಲ, ಬೆಲೆ ಏರುವುದು ಕೊರತೆಯಿರುವ ಸರಕಿಗಾಗಿ ಕೊಳ್ಳುವವರ ನಡುವಿನ ಪೈಪೋಟಿ ಕಾರಣ'' ಎನ್ನುತ್ತಾನೆ ವರ್ತಕ ! ಅದು ನಿಜವಾದರೆ ಮೊದಲು ಯಾರು ಕೇಳುವರೋ ಅವರಿಗೆ ಕೊಟ್ಟುಬಿಡುವುದು ತಾನೆ ?

ಬೇಡಿಕೆಗಳ ಏರುಪೇರು ಹಲವಾರು ಕಾರಣಗಳಿಂದ : ಮದುವೆ ಕಾಲ, ತೆಂಗಿನಕಾಯಿಗೆ ಬೇಡಿಕೆಯೂ ಜಾಸ್ತಿ, ಬೆಲೆಯೂ ಜಾಸ್ತಿ. ಮದುವೆ, ಶುಭಕಾರ್ಯಗಳಿಲ್ಲದ ಶೂನ್ಯಮಾಸದಲ್ಲಿ ಬೇಡಿಕೆಯಲ್ಲಿ ಕುಸಿತ, ಬೆಲೆಯಲ್ಲಿ ಕುಸಿತ. ಹೀಗೆ ಋತುಮಾನವನ್ನು ಅವಲಂಬಿಸಿದ ಕಾರಣಗಳು. ಅದೇ ವಸ್ತುವಿಗೆ ಹೊಸ ಉಪಯೋಗಗಳನ್ನು ಕಂಡುಕೊಂಡು, ಅದಕ್ಕೆ ತಕ್ಕಷ್ಟು ಉತ್ಪಾದನೆಯನ್ನು ಹೆಚ್ಚಿಸುವ ಮೊದಲೇ ಬೇಡಿಕೆ ಹೆಚ್ಚಿ, ಸ್ವಲ್ಪಕಾಲ ಬೆಲೆ ಏರಿಕೆ ಆಗಬಹುದು. ಮತ್ತೊಂದು ಬಂಡವಳಿಗನ ವೈಯಕ್ತಿಕ ತೀರ್ಮಾನ : ಉತ್ಪಾದಿಸುವ ಖರ್ಚು ಹೆಚ್ಚಿ, ಲಾಭ ಕಡಿಮೆಯಾಗುತ್ತಿದ್ದರೆ, ಉತ್ಪಾದನೆ ಕಡಿದು, ಅಭಾವ ಉಂಟುಮಾಡಿ, ಬೆಲೆ ಏರಿಸಬಹುದು; ಯಾವುದೇ ಕಾರಣಕ್ಕೂ ಲಾಭದಲ್ಲಿ ಕಡಿತವನ್ನು ಉದ್ದಿಮೆ ಸ್ವಾಗತಿಸುವುದಿಲ್ಲ. ಉತ್ಪಾದನಾ ವೆಚ್ಚವನ್ನು ಹೇಗೆ ಕಡಿಮೆ ಮಾಡುವುದು, ತನ್ಮೂಲಕ ಲಾಭ ಹೆಚ್ಚಿಸಿಕೊಳ್ಳಬಹುದು ಎಂಬ ಎಣಿಕೆ ಹೊಸ ಹೊಸ ಉತ್ಪಾದನಾ ಮಾರ್ಗಕ್ಕೆ, ತಂತ್ರದ ಅನ್ವೇಷಣೆಗೆ ಒತ್ತಾಯ ತರುತ್ತದೆ. ಟೆಲಿಫೋನ್ ಸೇವೆಯೆಂಬ ಸರಕಿನಲ್ಲಿ ಕಳೆದ ಎರಡು ದಶಕಗಳಲ್ಲಿ ಇಂಥ ಬೆಳವಣಿಗೆ ಅಚ್ಚರಿ ಹುಟ್ಟಿಸಿದೆ : ನಲವತ್ತು ಅಂಕಣ ಕಟ್ಟಡದಲ್ಲಿ ಯಾವುದೇ ಕ್ಷಣದಲ್ಲೂ ೧೫೦ ಜನ ಕೆಲಸದಲ್ಲಿ ತೊಡಗಿ, ೧೦,೦೦೦ ಟೆಲಿಫೋನ್‌ಗಳನ್ನು ನಡೆಸುತ್ತಿದ್ದ ಕಡೆ, ಈಗ ನಾಲ್ಕು ಅಂಕಣದಲ್ಲಿ ೪೦,೦೦೦ ಟೆಲಿಫೋನ್‌ಗಳನ್ನು ಕೆಲವೇ ಜನ, ಆ ಕಟ್ಟಡದ ಬಾಗಿಲಿಗೆ ಬೀಗ ಹಾಕಿ, ಎಲ್ಲೋ ಕುಳಿತು ನಡೆಸುವಂತಾಗಿದೆ. ಇಲ್ಲಿ ಕೆಲಸಗಾರರ ಸಂಬಳದ ಲೆಕ್ಕ ನೋಡಿದರೆ, ವೈಯಕ್ತಿಕ ಸಂಬಳ ಅವರ ಹಿಂದಿನದಕ್ಕಿಂತ ಹೆಚ್ಚಾದರೂ, ಒಟ್ಟಾರೆ, ಉಳಿತಾಯವಾಯ್ತು. ಆದರೆ ಹೊಸ ತಂತ್ರಜ್ಞಾನದ ಅನ್ವೇಷಣೆಗೆ ಬಳಸಿದ ಬಂಡವಾಳದ ಮೊತ್ತ ಅಪಾರವಾಗಿ ಹೆಚ್ಚಿತು. ಒಂದು ಸರಕಿನ ತಯಾರಿಯಲ್ಲಿ ತೊಡಗಿಸುವ ಬಂಡವಾಳ ಹೀಗೆ ಎರಡು ಬಗೆಯದು : ಒಂದು ನಿಗದಿತವೆನ್ನಬಹುದಾದ ಮೆಷಿನರಿ-ಯಂತ್ರ ತಂತ್ರಗಳಿಗೆ ಬಳಸಿದ್ದು. ಇನ್ನೊಂದು ಹೆಚ್ಚು ಕಡಿಮೆಯಾಗುವ ಕೂಲಿಯದು; ಫಿಕ್ಸೆಡ್ ಕ್ಯಾಪಿಟಲ್ ಮತ್ತೆ ವೇರಿಯಬಲ್ ಕ್ಯಾಪಿಟಲ್. ಈ ರೀತಿಯ ಹೂಡಿಕೆಯ ಮಾರ್ಗದಲ್ಲಿ ಲಾಭದ ದರ ಯಾವಾಗಲೂ ಏರುತ್ತಲೇ ಇರುವುದಿಲ್ಲ, ಅದು ಒಂದು ಹಂತವನ್ನು ತಲಪಿದ ಮೇಲೆ ಹೇಗೆ ಇಳಿಯಲಾರಂಭಿಸುತ್ತದೆ ಎಂದು ಕಾರ್ಲ್ ಮಾರ್ಕ್ಸ್ ಸಮರ್ಪಕವಾಗಿ ವಾದಿಸಿದ್ದಾನೆ. ಇದನ್ನು ವಿವರಿಸಲು ಗಣಿತದ ಅನೇಕ ಸಮೀಕರಣಗಳನ್ನು ಬಳಸುತ್ತಾನೆ.

ಅರ್ಥಶಾಸ್ತ್ರವನ್ನೂ ಸೇರಿಸಿ ಸಾಮಾಜಿಕ ಶಾಸ್ತ್ರಗಳ ಬಗ್ಗೆ ಮಾತನಾಡುವಾಗ ಮೇಲೆ ಹೇಳಿದಂಥ ವಿಷಯಗಳನ್ನು ಗಣಿತದ ಕರಾರುವಾಕ್ಕು ಮಾತುಗಳು ಎಂದು ಗ್ರಹಿಸಬಾರದು. ಅವೆಲ್ಲಾ ಏಳುಬೀಳುಗಳ ದಿಶಾಸೂಚಕಗಳು - ಟೆಂಡೆನ್ಸಿ ಎನ್ನುವುದು – ಬಹುವಾಗಿ ಸರಿ. ಮೇಲಿನ ಚರ್ಚೆಯಲ್ಲಿ ನಾವು ಗ್ರಹಿಸಬೇಕಾದದ್ದು ಇಷ್ಟು: ಬಂಡವಾಳ ವ್ಯವಸ್ಥೆಯ ಉತ್ಪಾದನಾ ಪ್ರಕ್ರಿಯೆಯಲ್ಲಿ ನಿರಂತರ ಲಾಭದ ಏರಿಕೆ ಎಂಬುದಿಲ್ಲ. ಅದರ ಅಂತರ್ಗತ ಕಾರಣಗಳಿಂದಾಗಿ, ಎಂದೆಂದೂ ಅರ್ಥವ್ಯವಸ್ಥೆ, ಆರ್ಥಿಕ ಬೆಳವಣಿಗೆ, ಅದರ ದರ ವಿಸ್ತಾರವಾಗುತ್ತಾ, ಹೆಚ್ಚುತ್ತಾ, ಹಿಗ್ಗುತ್ತಾ ಹೋಗುತ್ತಲೇ ಇರಲಾರದಂತೆ ತಡೆಯುವ ಅಡಚಣೆಗಳನ್ನು ಒಳಗೊಂಡಿದೆ. ಅದರ ಪರಿಣಾಮವಾಗಿ ಲಾಭದ ದರ ಕಡಿಮೆಯಾಗುತ್ತಾ ಹೋಗುತ್ತದೆ. ಇದು ಆ ವ್ಯವಸ್ಥೆಗೆ ಸಹಜವಾದ ಗುಣ. ಆದರೆ ಬಂಡವಳಿಗ/ ವರ್ತಕ ಈ ಸಹಜ ಬೆಳವಣಿಗೆ ತನ್ನದೇ ತರ್ಕದಂತೆ ಮುಂದುವರಿಯಲು ಬಿಡದೆ, ಹೆಚ್ಚುಹೆಚ್ಚು ಲಾಭಗಳಿಸುವುದನ್ನೇ ಪ್ರಥಮ ಆದ್ಯತೆ ಮಾಡಿಕೊಂಡು, ಉತ್ಪಾದಿಸುವ ಸರಕಿನ ಕೃತಕ ಅಭಾವವನ್ನು ಸೃಷ್ಟಿಸುತ್ತಾ, ಅದರಿಂದ ಸಾಧಾರಣ ಉಪಭೋಕ್ತೃಗಳ ಮೇಲೆ, ಜನಸಾಮಾನ್ಯರ ಮೇಲೆ ಆಗುವ ಕೆಟ್ಟ ಪರಿಣಾಮಕ್ಕೆ ತಾನು ಹೊಣೆ ಅಲ್ಲವೆಂಬುವಂತೆ ವರ್ತಿಸುತ್ತಾನೆ. ಪ್ರತಿಯೊಬ್ಬ ಉತ್ಪಾದಕ/ವರ್ತಕನೂ ಇನ್ನಿತರ

ಕೆ. ಎಸ್. ಪಾರ್ಥಸಾರಥಿ

ಉತ್ಪಾದಕ/ವರ್ತಕರನ್ನು ತನ್ನ ಪ್ರತಿಸ್ಪರ್ಧಿ, ಶತ್ರು, ತನ್ನದೇ ವೈಯಕ್ತಿಕ ಲಾಭಕ್ಕೆ ಧಕ್ಕೆ ತರುವವರು ಎಂಬಂತೆ ಗಮನಿಸುತ್ತಾನೆ. ಮುಂದುವರಿದು ಬಂಡವಾಳ ವ್ಯವಸ್ಥೆ ಜಂಭಕೊಚ್ಚಿಕೊಳ್ಳುವ ಮುಕ್ತ ಮಾರುಕಟ್ಟೆ ಎಂಬ ದಂತಕತೆಯು ನಾಡಿಯಾದ ಮುಕ್ತ ಸ್ಪರ್ಧಾತ್ಮಕತೆಯಲ್ಲಿ, ಅದರ 'ಮುಕ್ತ' ಭಾಗವನ್ನು ಕೆಡವಲು ಪ್ರಯತ್ನಿಸುತ್ತಾನೆ. ಪರಿಣಾಮದಲ್ಲಿ ಪ್ರತಿಸ್ಪರ್ಧಿಗಳು ಸೋತು, ಏಕಸ್ವಾಮ್ಯಗಳು ಹುಟ್ಟಿಕೊಳ್ಳುತ್ತವೆ. ಏಕಸ್ವಾಮ್ಯಗಳ ಆಡಳಿತದಲ್ಲಿ, ಒಟ್ಟು ಉತ್ಪಾದನೆ, ಅಗತ್ಯಕ್ಕೆ ಹೋಲಿಸಿದಾಗ, ಕಡಿಮೆ ಇರುತ್ತದೆ ಎಂಬುದಕ್ಕೆ ಇದೇ ಕಾರಣ. ಯಾವ ಹಂತದಲ್ಲಿ ಲಾಭದ ದರ ಇಳಿಯಲು ಆರಂಭವಾಗುತ್ತದೋ ಅಲ್ಲಿಗೆ ಉತ್ಪಾದನೆಯ ಮತ್ತಷ್ಟು ವಿಕಾಸವನ್ನೇ ನಿಲ್ಲಿಸುತ್ತಾನೆ. ಆ ತೀರ್ಮಾನ ಸಮಾಜದ ಅಗತ್ಯವನ್ನು ಗಮನಿಸುವುದಿಲ್ಲ. ಕಡಿಮೆ ಉತ್ಪಾದನೆ ಅಂದರೆ ಕಡಿಮೆ ಉದ್ಯೋಗ, ಕಡಿಮೆ ನೌಕರಿ. ಸಂಪೂರ್ಣ ಉದ್ಯೋಗ, ಅಗತ್ಯವಾದಷ್ಟು ಉತ್ಪಾದನೆ ಬಂಡವಾಳ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲ ಎನ್ನುವುದಕ್ಕೆ ಇದೇ ಕಾರಣ. ಹಾಗೂ ಅನೇಕ ರೀತಿಯ ಅನಿವಾರ್ಯವಲ್ಲದ ಆರ್ಥಿಕ ನಷ್ಟಗಳೂ ಇದೇ ಕಾರಣದಿಂದ ಉಂಟಾಗುತ್ತವೆ. ಇದು ಮಾರುಕಟ್ಟೆಯ ಅನಾಯಕತೆ, ಅರಾಜಕತೆ ಎನಿಸಿಕೊಳ್ಳುತ್ತದೆ. ಇದಕ್ಕೆ ವಿರುದ್ಧವಾಗಿ, ವ್ಯವಸ್ಥಿತ ಮಾರುಕಟ್ಟೆ ನಿರ್ಮಿಸಿ, ಉತ್ಪಾದನೆಯ ಗುರಿಯನ್ನು ಯೋಜನಾಬದ್ಧ ಅರ್ಥ ನೀತಿಯಿಂದ ಸಾಧಿಸಿ, ಇಡೀ ಮಾನವ ಸಮುದಾಯದ ಕ್ಷೇಮವನ್ನು ಸಾಧಿಸಬಹುದು ಎಂಬುದೆ ಮಾರ್ಕ್ಸ್‌ವಾದದ ಕೇಂದ್ರ ವಿಷಯ. ವೈಯಕ್ತಿಕ ಲಾಭಕ್ಕೆ ವಿರುದ್ಧವಾದ ಸಾಮಾಜಿಕ ಲಾಭದ ಮಾರ್ಗ ಅದು.

ಬಂಡವಾಳ ವ್ಯವಸ್ಥೆ ಹೇಗೆ ಪದೇಪದೇ ಬಿಕ್ಕಟ್ಟಿಗೆ ತುತ್ತಾಗುತ್ತದೆ ಎಂದು ಕಳೆದ ಶತಮಾನದ ಉದ್ದಕ್ಕೂ, ಹಾಗೂ ಕಳೆದ ವರ್ಷವಷ್ಟೆ ಜಾಗತಿಕವಾಗಿ ಆವರಿಸಿದ ಆರ್ಥಿಕ ಕುಸಿತ ತೋರಿಸುತ್ತದೆ. ಇದೇಕೆ ಹೀಗೆ ಎಂದು ತಿಳಿಯಲು ಪ್ರಯತ್ನಿಸಬಹುದು. ಮಾಲಿಕ ಲಾಭ ಹೆಚ್ಚಿಸಿಕೊಳ್ಳಲು ಕಡಿಮೆ ಕೂಲಿ ಕೊಡಬಹುದು ಅಥವಾ ಕಡಿಮೆ ಕೆಲಸಗಾರರಿಂದ ಹೆಚ್ಚು ದುಡಿಮೆ ಮಾಡಿಸಬಹುದು. ಇವೆರಡೂ ಒಂದೇ ವಿಷಯ. ಇನ್ನೊಂದು ಹಾದಿ ಎಂದರೆ ನಿಗದಿತ ಬಂಡವಾಳದ ಹೆಚ್ಚಳ – ಹೊಸ ಯಂತ್ರೋಪಕರಣ ಮುಂತಾದುವು – ಇದರ ವೆಚ್ಚವನ್ನು ಹೆಚ್ಚಿಸುತ್ತ, ತಲಾ ಕಾರ್ಮಿಕನ ಉತ್ಪಾದಕತೆಯನ್ನು ಹೆಚ್ಚಿಸಿಕೊಳ್ಳಬಹುದು. ಕೆಲಸದ ವೇಳೆಯನ್ನು ಅದೇ ಸಂಬಳಕ್ಕೆ ಹಿಗ್ಗಿಸಬಹುದು. ಓವರ್‌ಟೈಂ ಗೊತ್ತಲ್ಲ - ವಾಸ್ತವದಲ್ಲಿ ಅದರ ದರ ಹೊಸ ಕಾರ್ಮಿಕನ ಖರ್ಚಿಗಿಂತ ಕಡಿಮೆಯದು, ಇರುವ ಕಾರ್ಮಿಕನನ್ನು ಹೆಚ್ಚು ಶೋಷಿಸುವ ಸ್ವರೂಪದ್ದು. ಬಂಡವಾಳ ವ್ಯವಸ್ಥೆಯ ಅರ್ಥಶಾಸ್ತ್ರದ ಪ್ರಕಾರ ಕೂಲಿಯೂ, ಬೆಲೆಯೂ ಮುಕ್ತ ಮಾರುಕಟ್ಟೆಯಲ್ಲಿ ನಿರ್ಧಾರಿತವಾಗುತ್ತದೆ, ಮಾಲೀಕನಿಂದ ನಿರ್ಧರಿಸಲು ಆಗುವುದಿಲ್ಲ ಎನ್ನುತ್ತಾರೆ ಅವರು. ಆದರೆ ಇದು ವಾಸ್ತವಕ್ಕೆ ದೂರ. ಮಾರುಕಟ್ಟೆಯಲ್ಲಿ ಎಷ್ಟು ಉದ್ಯೋಗವಿದೆಯೋ ಅದಕ್ಕಿಂತ ಹೆಚ್ಚು ಸಂಖ್ಯೆಯ ನಿರುದ್ಯೋಗಿಗಳು ಇರುವುದೇ ಇದಕ್ಕೆ ಕಾರಣ. ಹೆಚ್ಚು ಜನಸಂಖ್ಯೆಯಿರುವ ಕಡೆ, ಕೂಲಿಕಾರನಿಗೆ ತನ್ನ ಕೂಲಿ ಇಷ್ಟೇ ಬೇಕು ಎಂದು ಒತ್ತಾಯಿಸಲು ಆಗುವುದೇ ಇಲ್ಲ. ಅವನನ್ನು ಕೆಲಸದಿಂದ ತೆಗೆದು, ಹೊಸಬನನ್ನು ಕಡಿಮೆ ಕೂಲಿಗೆ ತೆಗೆದುಕೊಳ್ಳಬಹುದು. ವಿದೇಶೀ ವ್ಯಾಪಾರದ ಮಾರ್ಗದಿಂದ ಸುಲಭ ಬೆಲೆಯ ಕಚ್ಚಾವಸ್ತು ತರಿಸಿ

## ಹುಚ್ಚನಾಗುವ ಮುನ್ನ

ಹುಚ್ಚನಾಗುವ ಮುನ್ನ ನಾನೊಂದು ಕವಿತೆ ಬರೆದೆ
ಕವಿತೆ ಬರೆಯುವಾಗ ಪ್ರೇಯಸಿಯೊಬ್ಬಳ ಬಯಸಿದೆ
ಬಯಸಿ ನೆನಸಿ ಪ್ರೇಯಸಿಯ ರೂಪರಾಶಿ ನೋಡಿದೆ
ರೂಪರಾಶಿಗೆ ಮನ ಸೋತುಹೋಗಿ ಮೂಕನಾದೆ...

ಹುಚ್ಚನಾಗುವ ಮುನ್ನ ನಾನೊಂದು ಬರೆದೆ ಕವಿತೆ
ಕವಿತೆ ಬರೆಯುವಾಗ ನೆನಪಿಸಿಕೊಂಡೆ ಬಾಳಗೀತೆ
ಬಾಳ ಸಂಗಾತಿ ನೆನೆಯುತ್ತಾ ಕೈ ತಪ್ಪಿತೋ ಕವಿತೆ
ಪ್ರೇಮ ಧ್ಯಾನದೊಳಗೆ ಕವಿತೆ ಬರೆಯುವುದನ್ನ ಮರೆತೆ...

ಹುಚ್ಚನಾಗುವ ಮುನ್ನ ನಾನೊಂದು ಕವಿತೆ ಬರೆದೆ
ಕವಿತೆ ಬರೆದಾಗ ಅದಕ್ಕೊಂದು ಪ್ರಾಸವಿಲ್ಲ
ಕವಿತೆ ಗೀಚುವಾಗ ಯಾವುದೇ ತ್ರಾಸವಿಲ್ಲ
ತ್ರಾಸ-ಪ್ರಾಸವಿಲ್ಲದ ಕವಿತೆ ಕಾವ್ಯವಾಗುವುದಿಲ್ಲ...

ಹುಚ್ಚನಾಗುವ ಮುನ್ನ ನಾನೊಂದು ಕವಿತೆ ಬರೆದೆ
ಕವಿತೆ ರಚಿಸುವಾಗ ಇಲ್ಲದೇ ಹೋಯಿತು ಛಂದಸ್ಸು
ಕವಿತೆ ರಾಚುವಾಗ ನನಗಿಲ್ಲದೇ ಹೋಯಿತು ಮನಸ್ಸು
ಛಂದಸ್ಸು ಇಲ್ಲದ ಕಾವ್ಯಕ್ಕೆ ಇಲ್ಲವೋ ಆಯುಸ್ಸು...

ಹುಚ್ಚನಾಗುವ ಮುನ್ನ ನಾನೊಂದು ಕವಿತೆ ಬರೆದೆ
ನಾ ಬರೆದ ಕವಿತೆಯೆಲ್ಲಾ ಆಗತಾನೇ ಬರೀ ಜೊಳ್ಳು
ದಿನ-ವರ್ಷ ಕಳೆದಂತೆ ಆಗುವುದೆಲ್ಲಾ ಗಟ್ಟಿ ಮುಳ್ಳು
ನಾ ಗೀಚಿದ್ದು ಬರೆದಿದ್ದು ಆಗುವುದೋ ಒಮ್ಮೊಮ್ಮೆ ಸುಳ್ಳು

ಹುಚ್ಚನಾಗುವ ಮುನ್ನ ನಾನೊಂದು ಕವಿತೆ ಬರೆದೆ
ನನ್ನ ಕವಿತೆಯೊಳಗಿದೆ ಸಂಗಾತಿ ಸಂಪಿಗೆ ವಾಸನೆ
ಕಾವ್ಯದೊಳಗಡಗಿದೆ ಮಡದಿ ಮಲ್ಲಿಗೆಯ ಗಮ್ಮನೆ
ಗಮ್ಮೆನ್ನದೆ ಕವನಗಳು ಕವಿತೆಯಾಗುವುದಿಲ್ಲ ಸುಮ್ಮನೆ...



**ಹಣಬೆ ನಾ. ಪಾಪೇಗೌಡ**
ಶ್ರೀ ದೇವರಾಜ್ ಅರಸ್ ಮೆಡಿಕಲ್ ಕಾಲೇಜು, ಟಮಕ, ಕೋಲಾರ - ೫೬೩ ೧೦೧

ಕೊಂಡರೂ ಲಾಭದ ದರವನ್ನು ಉಳಿಸಿಕೊಳ್ಳಬಹುದು ಅಥವಾ ಹೆಚ್ಚಿಸಿಕೊಳ್ಳಬಹುದು ಎನ್ನುವ ಮಾತು ಭಾಗಶಃ ನಿಜ. ವಲಸೆ ಕಾರ್ಮಿಕರು ಸ್ಥಳೀಯರಿಗಿಂತ ಕಡಿಮೆ ಕೂಲಿಗೆ ಕೆಲಸ ಮಾಡುತ್ತಾರೆ. ಹೀಗೆ ಲಾಭ ಹೆಚ್ಚಿಸಿಕೊಳ್ಳಲು ಹಲವು ಹಾದಿಗಳು.

ಮೇಲೆ ಹೇಳಿದ ಗಣಿತದ ಸಮೀಕರಣವನ್ನು ಒಂದಿಷ್ಟು ಗಮನಿಸಿ :

ಲಾ = ಲಾಭದ ದರ ಎನ್ನಿ, ಹೆ = ಹೆಚ್ಚುವರಿ ಮೌಲ್ಯವೆನ್ನಿ, ಬ = ಕೂಲಿಯನ್ನು ಹೊರತುಪಡಿಸಿದ ಮಿಕ್ಕೆಲ್ಲ ಬಂಡವಾಳ ಎನ್ನಿ. ಆಗ ಇವುಗಳ ಸಂಬಂಧವನ್ನು ಮೇಲೆ ಚರ್ಚಿಸಿದೆಲ್ಲ ವಿಷಯಗಳನ್ನು ಪ್ರತಿನಿಧಿಸುವಂತೆ,

ಲಾ = ಹೆ (೧ – ಬ) ಎಂದು ಬರೆಯಬಹುದು. ಇಲ್ಲಿ '೧' ಎನ್ನುವುದು ಒಟ್ಟಾರೆ ಬಂಡವಾಳ, 'ಬ' ಅದರ ಒಂದು ಭಾಗವಷ್ಟೆ.

ಹೆ: ಹೆಚ್ಚುವರಿ ಮೌಲ್ಯದ ದರವನ್ನು ಸರ್‌ಪ್ಲಸ್ ವ್ಯಾಲ್ಯುವನ್ನು, ಒಂದು ಸ್ತಿಮಿತವಾದ, ಕಾನ್‌ಸ್ಟೆಂಟ್ ಎಂದು ಕೊಂಡರೆ, ಆಗ (ಲಾ) ಲಾಭದ ದರ ಹೆಚ್ಚಬೇಕಾದರೆ (ಬ) ಬಂಡವಾಳವನ್ನು ಹೆಚ್ಚಿಸುತ್ತಾ ಹೋಗಿ, ಕೂಲಿಯನ್ನು ಕಡಿಮೆ ಮಾಡುತ್ತಾ ಹೋಗುವುದು ಮಾರ್ಗ ಎಂದು ಕಾಣುತ್ತದೆ. ಆದರೆ ಇದು ನಿರಂತರ ಸಾಧ್ಯವಿಲ್ಲ. (೧ – ಬ) ದಲ್ಲಿ 'ಬ' - ೦.೫ ಆಗಿಬಿಟ್ಟರೆ, ಅಲ್ಲಿಂದ ಮುಂದೆ ಲಾಭ ಕುಗ್ಗುತ್ತಾ ಹೋಗುವುದೇ ಬಂಡವಾಳ ವ್ಯವಸ್ಥೆಯಲ್ಲೇ ಅಂತರ್ಗತವಾದ, ಒಂದು ಹಂತದ ನಂತರ ಲಾಭದ ದರವನ್ನು ಕುಗ್ಗಿಸುವ ಪ್ರವೃತ್ತಿ ಎಂಬುದನ್ನು ತೋರಿಸಿ ಕೊಡುತ್ತದೆ. ಈಗ ಹೆಚ್ಚುವರಿ ಮೌಲ್ಯ ಎಂದರೆ ಏನದು ಎಂದು ತಿಳಿದರೆ ಚರ್ಚೆಯ ತಿರುವು ಸ್ಪಷ್ಟವಾಗುತ್ತದೆ. ಲಾಭದ ದರ ಕುಗ್ಗಿದಾಗಲೂ ಉದ್ಯಮ ಮುಂದುವರಿಸಲು ಇರುವ ಆಕರ್ಷಣೆ ಏನು ? ಮಾರುಕಟ್ಟೆಯ ವ್ಯವಹಾರವನ್ನು ಸಂಕ್ಷಿಪ್ತವಾಗಿ ಹೀಗೆ ಸಮೀಕರಿಸಬಹುದು : ಸರಕು-ಹಣ-ಸರಕು. ಎಂದರೆ ಸರಕು ಮಾರಿ ಹಣ ಸಂಪಾದಿಸಿ, ಹಣ ಕೊಟ್ಟು ಸರಕು ಕೊಂಡು, ಹೀಗೆ ನಿರಂತರ ಸರಪಳಿ. ಜೆ.ಬಿ.ಸೇ ಎನ್ನುವ ಅರ್ಥಶಾಸ್ತ್ರಜ್ಞ ಹೀಗೆ ಹೇಳಿದ : ನಿಗದಿತ ಪ್ರಮಾಣದ ಸರಕನ್ನು ಹಣಕ್ಕೆ ಮಾರಿ, ಅಷ್ಟೇ ಪ್ರಮಾಣದ ಮತ್ತೊಂದು ಸರಕನ್ನು ಕೊಳ್ಳುವ ಬಂಡವಾಳ ವ್ಯವಸ್ಥೆಯಲ್ಲಿ ಎಲ್ಲೂ ಹೆಚ್ಚುವರಿ ಉತ್ಪಾದನೆಯ ಮತ್ತಿನ್ನಿತರ ಸಂಬಂಧಪಟ್ಟ ಬಿಕ್ಕಟ್ಟುಗಳಿಗೆ ಕಾರಣವೇ ಇಲ್ಲ ಎಂದ. ಮೇಲ್ನೋಟಕ್ಕೆ ಅದು ಸರಿ ಅನ್ನಿಸುತ್ತೆ ಅಲ್ಲವೆ ? ಆದರೆ ವಾಸ್ತವಾಂಶವೆಂದರೆ ಶತಮಾನದಿಂದಲೂ ಈ ವ್ಯವಸ್ಥೆ ಬೇಡಿಕೆಗೆ ಹೋಲಿಸಿದರೆ ಹೆಚ್ಚು ಉತ್ಪಾದನೆ, ತತ್ಪರಿಣಾಮವಾದ ನಿರುದ್ಯೋಗದಿಂದ ಬೇಡಿಕೆಯ ಕುಸಿತ, ಮುಂದುವರಿದು ಮಾರುಕಟ್ಟೆಯ ವ್ಯಾಪಕ ಕುಸಿತ, ಮತ್ತಷ್ಟು ನಿರುದ್ಯೋಗ, ಅದರ ಪರಿಣಾಮವಾಗಿ ಸಾಮಾಜಿಕ ಏರುಪೇರುಗಳನ್ನು ಪದೇಪದೇ ಸೃಷ್ಟಿಸುತ್ತಲೆ ಬಂದಿದೆ. ಇದಕ್ಕೆ ವಿವರಣೆ ಬೇಕು ಹಾಗೂ ಅದನ್ನು ಸರಿಪಡಿಸುವ ಪರಿಹಾರ ಬೇಕು. ಕೈಗಾರಿಕಾ ಕ್ರಾಂತಿಯ ತಾರುಣ್ಯದಿಂದಲೂ ಸೇಂಟ್ ಸೈಮನ್ ಅಂಥ ಚಿಂತಕರು ಪರಿಹಾರ ಹುಡುಕುತ್ತಲೇ ಬಂದಿದ್ದಾರೆ.

ಕೂಲಿಯ ಬೆಲೆ ಕಡಿಮೆ ಇರುವಾಗ, ಕಚ್ಚಾವಸ್ತುಗಳ ಬೆಲೆ ಕಡಿಮೆ ಇರುವಾಗ, ಅಗತ್ಯಕ್ಕೆ ಮೀರಿ ಉತ್ಪಾದಿಸಿ, ಸರಕು ಶೇಖರಿಸಿ, ನಂತರ ಉತ್ಪಾದನೆಯನ್ನು ಸ್ಥಗಿತಗೊಳಿಸಿ, ಕಡಿಮೆ ಮಾಡಿ, ಕಾರ್ಮಿಕರ ಸಂಖ್ಯೆ ಕಡಿಮೆ ಮಾಡಿ ಯಾ ವಜಾ ಮಾಡಿ, ಬೇಡಿಕೆ ಬಂದಾಗ ಲಾಭ ಹೆಚ್ಚಿಸಿಕೊಳ್ಳೋಣವೆಂದರೆ ಹೂಡಿದ ಬಂಡವಾಳದ ಬಡ್ಡಿ ಏರುತ್ತಾ ಹೋಗುತ್ತದೆ ಹಾಗೂ ನಿರುದ್ಯೋಗದಿಂದಾಗಿ, ಸರಕುಗಳಿಗೆ ಬೇಡಿಕೆ ಕುಸಿಯುತ್ತಾ ಹೋಗುತ್ತದೆ. ಪರ್ಚೇಸಿಂಗ್ ಪವರ್ - ಕೊಳ್ಳುವ ಸಾಮರ್ಥ್ಯ ಕುಗ್ಗುವುದರಿಂದ. ಏಕಸ್ವಾಮ್ಯ ಮಾರ್ಗದಲ್ಲಿ, ಪೈಪೋಟಿ ಸತ್ತಾಗ, ಉತ್ಪಾದನಾ ಪ್ರಮಾಣ ಕಡಿಮೆಯಾಗಿ, ನಿರುದ್ಯೋಗ ಮತ್ತಷ್ಟು ಹೆಚ್ಚುವಾಗ, ನಿರುದ್ಯೋಗಿಗಳು ಕಡಿಮೆ ಕೂಲಿಗೂ ಕೆಲಸ ಮಾಡಲು ಮುಂದಾಗುತ್ತಾರೆ. ಮಾರುಕಟ್ಟೆಯಲ್ಲಿ ಬೇಡಿಕೆ ಎಷ್ಟಾಗ ಬಹುದೆಂದು ಅಂದಾಜು ಮಾಡಲಾಗದೆ, ಬೇಡಿಕೆಗೆ ಮೀರಿ ಹೆಚ್ಚು ಸರಕುಗಳ ಉತ್ಪಾದನೆಯಾಗಿ, ಮತ್ತಷ್ಟು ನಿರುದ್ಯೋಗ, ಬೆಲೆಗಳಲ್ಲಿ ಕುಸಿತ ಉಂಟಾಗುತ್ತದೆ. ಒಟ್ಟಾರೆ ನಿರಂತರ ಲಾಭದ ದರವನ್ನು ಹೆಚ್ಚಿಸಿಕೊಳ್ಳುತ್ತಾ



ಹೋಗುವುದು ಈ ವ್ಯವಸ್ಥೆಯಲ್ಲಿ ಸಾಧ್ಯವಾಗುವುದಿಲ್ಲ. ಗಮನಿಸಿ, ನಾವು ಮಾತನಾಡುತಿರುವುದು ಲಾಭದ ದರ, ಒಟ್ಟಾರೆ ಲಾಭ ಅಲ್ಲ. ಹೀಗಾಗಿ ಉದ್ಯಮದಲ್ಲಿ ಮುಂದು ವರಿಯಲು ಬಂಡವಾಳಿಗನಿಗೆ ಮತ್ತಾವುದೋ ಆಕರ್ಷಣೆ ಇರಬೇಕು. ಅದು ಮಿಗುತಾಯ ಮೌಲ್ಯಕ್ಕೆ ಸಂಬಂಧ ಪಟ್ಟಿದ್ದು. ಅರ್ಥವ್ಯವಸ್ಥೆಯಲ್ಲಿ ಬಿಕ್ಕಟ್ಟಿದ್ದರೂ, ಅವನ ಲಾಭಕ್ಕೆ ಏಟುಬೀಳದ ಮಾರ್ಗ ಒಂದು ಇರಬಹುದು.

ಒಮ್ಮೆ ನಾನು ಸಿಟ್ಜರ್‌ಲೆಂಡ್‌ನಲ್ಲಿ ಪ್ರವಾಸ ಮಾಡುವಾಗ ನಮ್ಮೂರ ಯುವಕನೊಡನೆ ಅವನ ಚೀನಿ ಯುವ ಗೆಳೆಯ ನೊಂದಿಗೆ ಭೇಟಿಯಾಯಿತು. ಅವರು ಆಗಷ್ಟೆ ಸ್ವೀಡನ್ನಿಗೆ ಹೋಗಿ, ತಮ್ಮ ಕೆಲಸ ಮುಗಿಸಿ, ಕಂಪನಿ ಖರ್ಚಿನಲ್ಲಿ ರಜೆ ಮತ್ತು ಪ್ರವಾಸ ಮಾಡುತ್ತಿದ್ದರು. ಇಲ್ಲಿ ಎಲ್ ಅಂಡ್ ಟಿ ಕಂಪನಿಯಲ್ಲಿ ಐಟಿಯ ಸಾಫ್ಟ್‌ವೇರ್ ಕೆಲಸ ಅವರದ್ದು. ಎಲ್ ಅಂಡ್ ಟಿ ಕಂಪನಿ ೨ ಮಿಲಿಯನ್ ಡಾಲರ್ ಪಡೆದು ಸ್ವೀಡನ್ ಕಂಪನಿಗೆ ಕೆಲವು ಸಾಫ್ಟ್‌ವೇರ್ ತಂತ್ರ ಮಾಡಿ ಕೊಟ್ಟಿತ್ತು. ಅಂದರೆ ಸುಮಾರು ೧೦ ಕೋಟಿ ರೂಪಾಯಿ ಅನ್ನಿ. ಈ ಹುಡುಗರನ್ನು ಸೇರಿ, ಐವರ ತಂಡಕ್ಕೆ ಸುಮಾರು ಆರು ತಿಂಗಳಲ್ಲಿ ೧೫-೨೦ ಲಕ್ಷ ಸಂಬಳ ಕೊಟ್ಟಿದ್ದರು. ಮತ್ತೊಂದು ಕೆಲಸ ಸಿದ್ಧವಾಗುವ ಮುಂಚೆ, ನುರಿತ ಈ ಹುಡುಗರನ್ನು ಪ್ರತಿಸ್ಪರ್ಧಿ ಕಂಪನಿ ಹೆಚ್ಚು ಸಂಬಳ ನೀಡಿ ಸೆಳೆದುಕೊಳ್ಳದಿರಲೆಂದು, ಕಂಪನಿಯದೆ ಖರ್ಚಿನಲ್ಲಿ ಈ ಪ್ರವಾಸಕ್ಕೆ ಹಚ್ಚಿದ್ದರು. ಸ್ವೀಡನ್ನಿನ ಕಂಪನಿ ಈ ತಂತ್ರದಿಂದ ಏನು ಮಾಡುತ್ತದೆ ಎಂದು ಕೇಳಿದೆ. ಅವರು ಅಂತರರಾಷ್ಟ್ರೀಯ ವಾಗಿ ಅದನ್ನು ಸುಮಾರು ೧೦೦ ಮಿಲಿಯನ್ ಡಾಲರಿ ನಷ್ಟು ಮಾರಾಟ ಮಾಡಬಹುದು ಎಂದರು. ಅದು ಅಂಥ ಒಳ್ಳೆಯ ಸರಕಾದರೆ, ನಮ್ಮ ನಾಡಿನಲ್ಲೆ ಬಳಸಿರಲ್ಲಾ ಎಂದರೆ, ಅದು ಮುಂದುವರಿದ ತಂತ್ರಜ್ಞಾನ, ನಮ್ಮಲ್ಲಿ ಇನ್ನೂ ನಾವು ಸಿದ್ಧರಿಲ್ಲ ಎಂದರು. ಇಲ್ಲಿ ಸರಕಿನ ಮೂಲ ಬೆಲೆಗೆ (ಅಂದರೆ ತಯಾರಿಯ ಖರ್ಚು+ಲಾಭ) ಸಂಬಂಧ ಇಲ್ಲದಷ್ಟು ಮೌಲ್ಯಯುತವಾದುದು ಈ ಸಂಶೋಧನೆಯ ಸರಕು. ಅಲ್ಲಿ ಮಾರುಕಟ್ಟೆಯ ಬೆಲೆಯ ಕಲ್ಪನೆಗೆ ಮೀರಿದ ಹೆಚ್ಚುವರಿ ಮೌಲ್ಯ ಅಡಕವಾಗಿದೆ. ಅದನ್ನು ಎರಡೂ ಕಂಪನಿಗಳು ತಮ್ಮದಾಗಿಸಿಕೊಳ್ಳುತ್ತವೆ. ಮೂಲ ಬಂಡವಾಳದ ಬಡ್ಡಿ, ಕಾರ್ಮಿಕನ ಕೂಲಿ, ಬೋನಸ್, ಮಾಲಿಕನ ಸಂಬಳ ಮುಂತಾದ ಎಲ್ಲ ಖರ್ಚುಗಳೂ ಕಳೆದೂ, ಹೊಸದೋ ಎಂಬ, ಗಂಟು ಸಿಗುತ್ತದೆ. ಅದು ಎಲ್ಲ ಖರ್ಚು ಕಳೆದ ಮೇಲೂ ಮಿಕ್ಕ ಮೌಲ್ಯದ ರೂಪಾಯಿ ರೂಪ. ಕೂಲಿಗೆ ಅಂದರೆ ಈ ಸಾಫ್ಟ್‌ವೇರ್ ಇಂಜನಿಯರಿಗೆ ಸಾಕಷ್ಟು ಸಂಬಳ ಕೊಟ್ಟಿದ್ದಾರೆ. ಅವರು ಪುನಃ ತಮ್ಮ ತಾಂತ್ರಿಕ ಶ್ರಮ ಸಾಮರ್ಥ್ಯ ವನ್ನು ಕುದುರಿಸಿಕೊಂಡು ಅದೇ ಕೆಲಸಕ್ಕೆ ಹಿಂದಿರುಗುವಷ್ಟು ಆಕರ್ಷಕವಾಗಿದೆ. ಆದರೆ ಹೆಚ್ಚುವರಿ ಮೌಲ್ಯವನ್ನು ಅವರೊಡನೆ ಹಂಚಿಕೊಳ್ಳುವುದಿಲ್ಲ. ಬೋನಸ್, ರಜೆ, ಪ್ರವಾಸ ಖರ್ಚು ಎಲ್ಲವನ್ನು ಒಟ್ಟಾರೆ ಖರ್ಚಿನಲ್ಲಿ ತೆಗೆದು ಆಗಿರುತ್ತದೆ. ಕಾರ್ಮಿಕನಿಗೆ ಎಷ್ಟು ಸಂಬಳ ಕೊಡಬೇಕೆಂದರೆ, ಅವನು ಅದನ್ನು ಬಳಸಿ, ಬದುಕುಳಿದು, ತನ್ನ ಕೂಲಿ ಸಾಮರ್ಥ್ಯವನ್ನು ಉಳಿಸಿಕೊಂಡು, ಬೆಳೆಸಿಕೊಂಡು ಹಿಂದಿರುಗಿ ಕೆಲಸಕ್ಕೆ ಬರುವಷ್ಟು. ಒಂದು ವೇಳೆ ಹತ್ತು ಕೋಟಿಯನ್ನು ಅವನೊಡನೆ ಹಂಚಿಕೊಂಡರೆ ಅವನು ಕೂಲಿಯಾಗುವುದನ್ನು ಬಿಟ್ಟು, ಯಜಮಾನನಾಗಬಯಸಿದರೆ ಏನು ಮಾಡುವುದು ? ಈ ಪರಿಸ್ಥಿತಿ ಸಾಧಾರಣ ಕೆಲಸಗಳಲ್ಲಿ ಇನ್ನೂ ಸ್ಪಷ್ಟವಾಗಿ ಅನುಭವ ವಾಗುತ್ತದೆ. ಇದನ್ನು ವರ್ಣಿಸುವ ಗಣಿತದ ಸಮೀಕರಣ ಗಳೂ ಇವೆ. ಈ ಹೆಚ್ಚುವರಿ ಮೌಲ್ಯದ ಲೆಕ್ಕ ಮಾಡುತ್ತವೆ ಆ ಸಮೀಕರಣಗಳು. ಇವನ್ನು ಮುಂದೊಮ್ಮೆ ಚರ್ಚಿಸೋಣ.

ಒಂದು ನಿಗದಿತ ಪ್ರಮಾಣದ ಹಾಲು ಲಭ್ಯವಿದೆ. ಬೇಡಿಕೆ ಹಲವರದು. ಹಾಲು ಕುಡಿಯುವ ಕಂದಮ್ಮನಿಗೂ ಬೇಕು; ಶ್ರೀಮಂತನ ಸಿಹಿ ತಿಂಡಿಗೂ ಬೇಕು. ಯಾರು ಈ ಸರಕಿಗೆ ಹೆಚ್ಚು ಬೆಲೆ ಕೊಡುವರೋ ಅವರಿಗೆ ಮಾರಾಟವಾಗುತ್ತದೆ ಇಂದಿನ ವ್ಯವಸ್ಥೆಯಲ್ಲಿ. ಕೊರತೆಯಿರುವ ವಸ್ತುಗಳನ್ನು ಮಾರುಕಟ್ಟೆಯ ಬೆಲೆ ಪ್ರಕ್ರಿಯೆ, ಅಗತ್ಯದ ಆದ್ಯತೆಯನ್ನು ಗುರುತಿಸಿ ಅಲ್ಲಿಗೆ ತಲಪಿಸುತ್ತದೆ ಎನ್ನುತ್ತದೆ ಬೂರ್ಷ್ವಾ ಅರ್ಥಶಾಸ್ತ್ರ. ಅದು ಆ ಅಪರೂಪದ ಸರಕಿನ ಸಮರ್ಥ ಬಳಕೆ! ಎಷ್ಟು ಬೆಲೆಯನ್ನಾದರೂ ಕೊಡಬಲ್ಲ ಶ್ರೀಮಂತನ ಸಿಹಿತಿಂಡಿಗೆ ಆದ್ಯತೆಯೇ, ಕಂದಮ್ಮನ ಅಗತ್ಯ ಆದ್ಯತೆಯೇ ? ಕಂದಮ್ಮನದೆಂದು ಆದ್ಯತೆಯನ್ನು ಹೀಗೆ ನಿರ್ಧರಿಸಿದರೆ ಬೆಲೆಯ ಪಾತ್ರ ಗೌಣವಾಗಿ, ಆಗಲೂ ಸಾಧಾರಣ ಲಾಭದಲ್ಲಿ ಕಂದಮ್ಮಗಳಿಗೆ ಹಾಲು ಪೂರೈಸಬಹುದು. ಈ ಮಾರ್ಗ ಒಂದು ಪರ್ಯಾಯ ವ್ಯವಸ್ಥೆಯ ಕನಸು. ಹಾಲಿನ ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳುವುದು ಸಾಧ್ಯ. ಆದರೆ ಪ್ರಕೃತಿ ಸಂಪತ್ತುಗಳು ಮಿತಿಯಾದವು. ಅದರಲ್ಲೂ ನೀರಿನಂಥವು. ಅವುಗಳನ್ನು ಹೀಗೆ ಮಾರುಕಟ್ಟೆಯ ಸರಕು ಎಂದರೆ, ನಾಗರಿಕತೆಯ ಗತಿ ಏನು ? ಕೆ. ಪಿ. ಎಸ್. ಮೆನನ್ ಒಮ್ಮೆ ಹೇಳಿದ ಮಾತು : ಅಂದಿನ ಸೋವಿಯತ್ ರಷ್ಯಾದ ತಾಷ್ಕೆಂಟ್‌ನಲ್ಲಿ ಕಾಫಿ ಕುಡಿಯಲು ಹೋದಾಗ ಅವರ ಮುಂದೆ ಕಾಫಿಯ ಡಿಕಾಕ್ಷನ್ ಮತ್ತು ಸಕ್ಕರೆ ಇಡಲಾಯ್ತು. ಮೆನನ್ ಹಾಲು ಕೇಳಿದರು. ಹೋಟೆಲ್‌ನವನಿಗೆ ಆಶ್ಚರ್ಯವಾಯ್ತು. ಹಾಲೇಕೆ, ಎಂದು ಕೇಳಿದ. ಕಾಫಿಗೆ ಅದನ್ನು ಸೇರಿಸಿ ಕುಡಿಯುತ್ತೇವೆ ನಮ್ಮೂರಿನಲ್ಲಿ, ಎಂದರು ಮೆನನ್. ಆತ ಕೇಳಿದ : "ಹೀಗೆ ಹಾಲನ್ನು ದುರ್ವ್ಯಯ ಮಾಡಿದರೆ ನಿಮ್ಮ ಕಂದಮ್ಮಗಳಿಗೆ ನೀವು ಏನು ಕುಡಿಸುತ್ತೀರಿ ?" ಇದು ಕೊರತೆಯಿರುವ ವಸ್ತುವಿನ ಮೌಲ್ಯದ ವಿಷಯ, ಬೆಲೆಯಲ್ಲ. ಹಾಲನ್ನು ಹೆಚ್ಚು ಉತ್ಪಾದಿಸಿ, ಕೊರತೆಯನ್ನು ನೀಗಿಸುವವರೆಗೆ, ಅದರ ಬಳಕೆಯ ಆದ್ಯತೆ ಸಾಮಾಜಿಕವಾಗಿ ತೀರ್ಮಾನವಾಗಬೇಕು, ಮಾರುಕಟ್ಟೆಯಲ್ಲಲ್ಲ. ಇದು ಪ್ರಜಾಪ್ರಭುತ್ವ ತತ್ವದ ಸೆಲೆಯಾದರೂ, ಅಪ್ಪಟ ಬಂಡವಾಳ ವ್ಯವಸ್ಥೆ ಅದು ಸರಿಯಲ್ಲ ಅನ್ನುತ್ತದೆ. ಹೆಚ್ಚು ಬೆಲೆ, ಅರ್ಥಾತ್ ಹೆಚ್ಚು ಲಾಭ ನೀಡಿದರೆ ಮತ್ತಷ್ಟು ಉತ್ಪಾದಿಸುತ್ತೇವೆ ಎನ್ನಬೇಕೋ, ಅಗತ್ಯಕ್ಕೆ ತಕ್ಕಂತೆ ಉತ್ಪಾದಿಸುತ್ತೇವೆ ಎನ್ನಬೇಕೋ ಎಂಬುದು ಪ್ರಶ್ನೆ. ಹೆಚ್ಚು ಲಾಭ ಅಂದರೆ ಎಷ್ಟು ಹೆಚ್ಚು ಎಂದು ಯಾರು ಹೇಗೆ ನಿರ್ಧರಿಸಬೇಕು ?

ಕಾರ್ಮಿಕರು ಕೆಲಸದ ವೇಳೆ ಇಷ್ಟೇ ಇರಬೇಕೆಂದು ಹೋರಾಡುತ್ತಲೇ ಬಂದಿದ್ದಾರೆ. ಮೇ ದಿನಾಚರಣೆಯ ಹಿಂದಿನ ಆಶಯ ಇದೇ ವಿಷಯದ್ದು. ಎಂಟು ಗಂಟೆ ಕೆಲಸ ಎಂಬುದು ಶತಮಾನಗಳ ಹೋರಾಟದ ಫಲ. ಸೋವಿಯತ್ ರಷ್ಯಾ ಇದನ್ನು ಆರು ಗಂಟೆಗೆ ಇಳಿಸಲು ಪ್ರಯತ್ನಿಸಿತ್ತು. ಫ್ರಾನ್ಸ್ ಇದನ್ನು ವಾರಕ್ಕೆ ೪೨ ಗಂಟೆಗೆ ಇಳಿಸಿದೆ. ಕೆಲಸದ ವೇಳೆ ಕಡಿಮೆ ಮಾಡಿದಾಗ, ನಿರುದ್ಯೋಗಿಗಳಿಗೆ ಕೆಲಸ ಸಿಗುವ ಸಾಧ್ಯತೆ ಹೆಚ್ಚುತ್ತದೆ. ಆದರೆ ಮಾಲಿಕನಿಗೆ ಇದು ನಷ್ಟ. ಕಾರ್ಮಿಕನಿಗೆ ಬದುಕುಳಿಯಲು ಬೇಕಾದಷ್ಟು ಸಂಬಳ ನೀಡಲೆ ಬೇಕು. ಆದರೆ ಆರು ಗಂಟೆ ಕೆಲಸ ಮಾಡಿದರೆ ಉತ್ಪಾದನೆ ಕಡಿಮೆಯಾಗುತ್ತದೆ. ಅಷ್ಟೆ ಕೂಲಿಗೆ ಇನ್ನು ಒಂದೆರಡು ಗಂಟೆ ಮಾಡಿಸಿದರೆ, ಆ ಎರಡು ಗಂಟೆಯ ಉತ್ಪಾದನೆ ನಿವ್ವಳ ಹೆಚ್ಚುವರಿಯಾಗಿ ಮಾಲಿಕನಿಗೆ ದಕ್ಕುತ್ತದೆಯಲ್ಲ? ಆ ಹೆಚ್ಚುವರಿ ಶ್ರಮ ಎಷ್ಟು ಎನ್ನುವುದು ಹೆಚ್ಚುವರಿ ಮೌಲ್ಯದ ದರವನ್ನು ನಿರ್ಧರಿಸುತ್ತದೆ. ಮೇಲಿನ ಸಮೀಕರಣದಲ್ಲಿ 'ಹ' ಎನ್ನುವುದು ಅದು. ಕಾರ್ಮಿಕ ಬದುಕುಳಿಯಲು ಮಾಡುವ ಶ್ರಮ + ಅದಕ್ಕೂ ಮಿಕ್ಕು ಮಾಡುವ ಶ್ರಮ = ಒಟ್ಟು ಉತ್ಪಾದನೆಯ ಮೌಲ್ಯ. ಮೊದಲನೆಯ ಭಾಗದಲ್ಲಿ ಅದು ೬+೨, ೫+೩, ೪+೪ ಹೀಗೆಲ್ಲಾ ಆಗಬಹುದು ೮ ಗಂಟೆಗಳ ಶ್ರಮದಲ್ಲಿ. ಅದರನ್ವಯ ಹೆಚ್ಚುವರಿಯ ದರ ನಿಗದಿಯಾಗುತ್ತದೆ. ೨/೮, ೩/೮, ೪/೮ ಮುಂತಾಗಿ.

ಈ ಹೆಚ್ಚುವರಿ ಮೌಲ್ಯ ಕಾರ್ಮಿಕನಿಗೆ ದಕ್ಕಬೇಕು, ಅವನೇ ಸೃಷ್ಟಿಸಿದ್ದು ಎಂದು ಹೇಗೆ ಹೇಳುವುದು ? ಉತ್ಪಾದನೆಯಲ್ಲಿ ತೊಡಗುವ ಸಕ್ರಿಯತೆಯ ಭಾಗ ಕಾರ್ಮಿಕನದು, ಮನುಷ್ಯನದು. ಮೂಲ ವಸ್ತುಗಳು, ಯಂತ್ರಗಳು ಎಲ್ಲ ಜಡ. ಯಜಮಾನ ಸಂಘಟಿಸುತ್ತಾನೆಯೇ ವಿನಾ ಅವನೇ ಸೃಷ್ಟಿಸುವುದಿಲ್ಲ. ಹೀಗಾಗಿ ಉತ್ಪನ್ನವಾದ ವಸ್ತುವಿನಲ್ಲಿ, ಬೆಲೆಯಲ್ಲದೆ ಅಡಗಿರುವ ಹೆಚ್ಚುವರಿ ಮೌಲ್ಯ ಕಾರ್ಮಿಕನದೆ ಕೊಡುಗೆ. ಕಾರ್ಮಿಕ ಕೇವಲ ಒಂದು ಸರಕನ್ನು ಉತ್ಪಾದಿಸುವುದಿಲ್ಲ. ಒಂದು ಮೌಲಿಕ ವಸ್ತುವನ್ನು ಸೃಷ್ಟಿಸುತ್ತಾನೆ. ಉತ್ಪಾದನೆಯ ಶ್ರಮಕ್ಕೆ ಕೂಲಿ ಸಿಗುತ್ತೆ. ವಸ್ತುವಿನ ಮೌಲ್ಯಸೃಷ್ಟಿಗೆ ಅವನಿಗೆ ಏನೂ ದೊರೆಯುವುದಿಲ್ಲ. ಒಂದು ತುಂಡು ಕಲ್ಲು ಸರಕು. ಆದರೆ ಅದರಲ್ಲಿ ಕಡಿದ ಶಿಲ್ಪ ಮೌಲ್ಯಯುತವಾದುದು. ಅದು ಶ್ರಮಶಕ್ತಿಗೆ ಮೀರಿದ ಶ್ರಮಿಕನ ಸೃಜನಶೀಲತೆಗೆ ಸಂಬಂಧಿಸಿದ್ದು. ಅದಕ್ಕೇನು ಬೆಲೆ? ಅದರ ಮಾಲಿಕ ಯಾರು? ಮೈಸೂರಿನ ಸುಪ್ರಸಿದ್ಧ ಕಲಾವಸ್ತುಗಳ ಮಳಿಗೆಯ ಮಾಲಿಕರು, ಒಬ್ಬ ಬಡ ಕಳಾವಿದನಿಗೆ ಒಂದು ಕೃತಿಗೆ ೫೦೦೦ ರೂ. ಕೊಟ್ಟು ಕೆಲಸ ಮಾಡಿಸಿದರು. ಅವನಿಗೆ ಹೊಟ್ಟೆಪಾಡಾಯಿತು. ಆ ಕಲಾಕೃತಿಯನ್ನು ಮಾಲಿಕ ಇನ್ನೂ ಮಾರಿಲ್ಲ. ಪ್ರದರ್ಶನಗಳ ಮೂಲಕ ಅದರ ಮೌಲ್ಯ ಹೆಚ್ಚಿಸಿ, ಒಂದೊಂದು ಕೃತಿಗೂ ಲಕ್ಷಾಂತರ ರೂಪಾಯಿ ಬರುವ ಸಾಧ್ಯತೆ ಇದೆ. ಕಾರ್ಮಿಕ ತನ್ನ ಶ್ರಮಶಕ್ತಿಯನ್ನು ಕೂಲಿಗೆ ಮಾರಿಕೊಂಡು, ಒಂದು ಸರಕಾಗುತ್ತಾನೆ. ಆದರೆ ಮೌಲ್ಯ ಕೇವಲ ಸರಕಲ್ಲ. ಈ ಮೌಲ್ಯವನ್ನು ಮಾಲಿಕ ಕಸಿದುಕೊಂಡನೆ ? ಶೋಷಿಸಿದ ಎನ್ನುತ್ತಾನೆ ಮಾರ್ಕ್ಸ್. ಶೋಷಿಸುವುದು ಎಂದರೆ ಒಂದು ಇಷ್ಟೂ ಮಿಗದಂತೆ ಹಿಂಡಿ ತೆಗೆಯುವುದು ಎಂದು ಅರ್ಥ. ರಾಮ ಸಮುದ್ರವನ್ನು ಶೋಷಿಸಿಬಿಡುತ್ತೇನೆ ಎಂದು ಗದರಿಸಿದಾಗಿನ ಅರ್ಥ. ಮಾರ್ಕ್ಸ್‌ನ ಪರಿಭಾಷೆಯಲ್ಲಿ ಶೋಷಣೆಗೆ ವಿಶಿಷ್ಟ ಅರ್ಥವಿದೆ. ಅದು ಏನೋ ಕೆಟ್ಟದ್ದು ಎನ್ನುವ ಸೊಗಡು ಬರುವುದು ಈ ಪರಿಕಲ್ಪನೆಯನ್ನು ಸಮಾನತೆಯ ರಾಜಕೀಯ ಸಂಘಟನೆಗೆ ಬಳಸಿದಾಗ. ಮನುಷ್ಯ ಸಮಾಜಜೀವಿಯಾದ ಕಾಲದಿಂದಲೂ ಈ ಶೋಷಣೆ ಆಗುತ್ತಲೆ ಬಂದಿದೆ. ಅದು ಉತ್ಪಾದನೆಯ ವ್ಯವಸ್ಥೆಯ ಅನಿವಾರ್ಯತೆ. ಕಮ್ಯುನಿಸ್ಟ್ ಕ್ರಾಂತಿಯಾದ ಮೇಲೂ ಕಾರ್ಮಿಕನ ಈ ಹೆಚ್ಚುವರಿ ಮೌಲ್ಯವನ್ನು ಸಮಾಜದ ಪ್ರತಿನಿಧಿಯಾಗಿ ಪ್ರಭುತ್ವ ಶೇಖರಿಸಲೇ ಬೇಕು. ಅದು ಉತ್ಪಾದನೆಯ ವಿಕಾಸಕ್ಕೆ ಹೂಡುವ ಬಂಡವಾಳದ ಅಗತ್ಯ. ವರ್ಗ ಸಮಾಜ ಇರುವವರೆಗೆ ಈ ಶೋಷಣೆಯೂ ಇರುತ್ತದೆ. ಬಂಡವಾಳ ವ್ಯವಸ್ಥೆಯಲ್ಲೂ, ಅದರ ಹಿಂದಿನ ವ್ಯವಸ್ಥೆಗಳಲ್ಲೂ ಈ ಶೋಷಿತ ಮೌಲ್ಯಕ್ಕೆ ಮಾಲಿಕ ಅಧಿಕಾರಿಯಾಗುತ್ತಾನೆ. ಕಾರ್ಮಿಕ ಪ್ರಭುತ್ವದಲ್ಲಿ ಅದರ ಮಾಲಿಕತ್ವ ಪ್ರಭುತ್ವಮುಖೇನ ಸಾಮಾಜಿಕ ಮಾಲಿಕತ್ವದ್ದು. ಅದು ಮುಂದುವರಿದು ವರ್ಗರಹಿತ ಸಮಾಜವಾದಾಗಲಷ್ಟೆ ಈ ಶೋಷಣೆ ಅಗತ್ಯ ಕಳೆದುಕೊಂಡು ನಿಲ್ಲುತ್ತದೆ. ಲಾಭಕ್ಕಲ್ಲದೆ, ಅಗತ್ಯಕ್ಕಾಗಿ ಉತ್ಪಾದಿಸುವ ಸ್ವಯಂಸಂಪನ್ನ ಉತ್ಪಾದನಾ ವ್ಯವಸ್ಥೆ ಉಂಟಾಗಿರುತ್ತದೆ ಆಗ. ಸದ್ಯಕ್ಕೆ ನಾವಿರುವ ಬಂಡವಾಳ ವ್ಯವಸ್ಥೆಯಲ್ಲಿ ಈ ಮಿಗುತಾಯ/ನಿವ್ವಳ ಮೌಲ್ಯ ವ್ಯಕ್ತಿ ಶೇಖರಿಸಿಕೊಳ್ಳುವ ಬಂಡವಾಳ. ಇದನ್ನು ಶೋಷಣೆಯೆಂದು ಗುರುತಿಸಿ ಅದರ ವಿರುದ್ಧ ಹೋರಾಡುವುದೇ ಈ ಅನ್ಯಾಯದ ವ್ಯವಸ್ಥೆಯನ್ನು ಕೊನೆಗಾಣಿಸುವ, ಬದಲಾಯಿಸುವ, ಮಾರ್ಗ. ಬಂಡವಾಳದ ಅರ್ಥಶಾಸ್ತ್ರ ಈ ಹೆಚ್ಚುವರಿ ಮೌಲ್ಯವನ್ನು ತನ್ನ ಚರ್ಚೆಯಲ್ಲಿ ಗೌಣವಾಗಿಸಿತ್ತು. ಕಾರ್ಮಿಕನನ್ನು ಒಂದು ಸರಕು ಎಂದು ಹೇಳಿ, ಅವನನ್ನು ನಿಷ್ಕ್ರಿಯ ವಸ್ತುವಿನಂತೆ ವಿವರಿಸುತ್ತಿತ್ತು. ಇದನ್ನು ಬಹಿರಂಗಪಡಿಸಿದ್ದು ಸ್ವಲ್ಪಮಟ್ಟಿಗೆ ರಿಕಾರ್ಡೋ, ತದನಂತರ ಸ್ಪಷ್ಟವಾಗಿ ಮಾರ್ಕ್ಸ್‌ನ ಕ್ಯಾಪಿಟಲ್ ಗ್ರಂಥ. ಬಂಡವಳಿಗ ಕೇವಲ ಲಾಭದ ದರದಿಂದ ಬೆಳೆಯಲಾಗುವುದಿಲ್ಲ. ಅವನಿಗೆ ಮುಫತ್ತಾಗಿ ದೊರೆಯುವ ಈ ಹೆಚ್ಚುವರಿ ಮೌಲ್ಯವೆ ಉದ್ಯಮದ ಆಕರ್ಷಣೆ. ಹೆಚ್ಚುವರಿ ಮೌಲ್ಯದ ದರವನ್ನು ಹೆಚ್ಚಿಸಿಕೊಳ್ಳಲೂ ಅವನು ಹೆಣಗಾಡುತ್ತಾನೆ. ಲಾಭದ ದರ ಬಿದ್ದರೂ ಆಗ ಉತ್ಪಾದನೆಯನ್ನು ನಿಲ್ಲಿಸಬೇಕಾಗಿಲ್ಲ. ಹೆಚ್ಚುವರಿ ಮೌಲ್ಯವನ್ನು ದಕ್ಕಿಸಿಕೊಳ್ಳುವ ಅವಕಾಶ ಇಲ್ಲದಿದ್ದರೆ ಯಾರೂ ಉದ್ಯಮ ನಡೆಸುತ್ತಲೆ ಇರಲಿಲ್ಲ ಇಲ್ಲಿಯವರೆಗಿನ ವ್ಯವಸ್ಥೆಗಳಲ್ಲಿ!

**ಕೆ. ಎಸ್. ಪಾರ್ಥಸಾರಥಿ**
೨೪೭, 'ವನಸಿರಿ', ಟೆಲಿಕಾಂ ಬಡಾವಣೆ
ವಿದ್ಯಾನಗರ, ಬೆಟ್ಟಹಲಸೂರು ಅಂಚೆ
ಬೆಂಗಳೂರು-೫೬೨ ೧೫೭





# ಭವಿಷ್ಯತ್ತನ್ನು ಅರಿತಿದ್ದ ವ್ಯಕ್ತಿ



ಭಾರತ ಸ್ವತಂತ್ರವಾಗುವುದು ವಿಧಿಲಿಖಿತ ಮತ್ತು ಜಗತ್ತಿನ ಯಾವ ಶಕ್ತಿಗೂ ಅದನ್ನು ನಿರಾಕರಿಸಲು ಸಾಧ್ಯವಿಲ್ಲ ಎಂಬುದನ್ನು ಪ್ರಥಮ ಮಹಾಯುದ್ಧಕ್ಕೂ ಮೊದಲೇ ಅರಿತಿದ್ದೆ. ಮುಸ್ಲಿಮರ ಪಾತ್ರದ ಕುರಿತಾಗಿಯೂ ನನ್ನ ಮನಸ್ಸಿನಲ್ಲಿ ಸ್ಪಷ್ಟ ಕಲ್ಪನೆ ಇತ್ತು. ಮುಸ್ಲಿಮರು ತಮ್ಮ ದೇಶವಾಸಿಗಳ ಜೊತೆ ಹೆಜ್ಜೆಹಾಕಲು ಕಲಿಯುವರು ಮತ್ತು ಭಾರತೀಯರು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದಾಗ ಮುಸ್ಲಿಮರು ವೀಕ್ಷಕರಾಗಿದ್ದರೆಂದು ಹೇಳುವ ಅವಕಾಶವನ್ನು ಇತಿಹಾಸಕ್ಕೆ ಕೊಡಲಾರರೆಂಬುದೇ ನನ್ನ ಹೆಬ್ಬಯಕೆ. ಮುಸ್ಲಿಮರು ತೆರೆಗಳ ವಿರುದ್ಧ ಹೋರಾಡುವುದನ್ನು ಬಿಟ್ಟು ಸ್ವಾತಂತ್ರ್ಯ ಹೋರಾಟಗಾರರ ದೋಣಿಗಳು ಮುಳುಗುತ್ತಿರುವುದನ್ನು ದಡದಲ್ಲಿ ನಿಂತುಕೊಂಡು ಆನಂದಿಸುತ್ತಿದ್ದರೆಂದು ಯಾರೂ ಹೇಳದಿರಲಿ.

**ಸುರೇಶ್ ಭಟ್ ಬಾಕ್ರಬೈಲ್**

*(ಮೌಲಾನಾ ಅಬುಲ್ ಕಲಾಂ ಆಜ಼ಾದ್ ಅವರ ಸಂದರ್ಶನ : ಹಿಂದಿನ ಸಂಚಿಕೆಯಿಂದ ಮುಂದುವರಿದುದು.)*

**ಪ್ರಶ್ನೆ : ಆದರೆ ಮುಸ್ಲಿಮರು ತಮ್ಮ ಸಮುದಾಯದ ಅಸ್ಮಿತೆಯನ್ನು ಹೇಗೆ ಉಳಿಸಿಕೊಳ್ಳಬಹುದು ಮತ್ತು ಒಂದು ಮುಸ್ಲಿಂ ರಾಷ್ಟ್ರದ ಪ್ರಜೆಗಿರಬೇಕಾದ ಗುಣಗಳನ್ನು ಹೇಗೆ ಮೈಗೂಡಿಸಿಕೊಳ್ಳಬಹುದು ?**

**ಉತ್ತರ :** ಪೊಳ್ಳು ಶಬ್ದಗಳು ಮೂಲ ವಾಸ್ತವಾಂಶಗಳನ್ನು ಸುಳ್ಳಾಗಿಸಲಾರವು. ವಕ್ರ ಪ್ರಶ್ನೆಗಳಿಂದಲೂ ಉತ್ತರಗಳಲ್ಲಿ ನ್ಯೂನತೆ ಉಂಟಾಗದು. ಅದು ಚರ್ಚೆಯನ್ನು ವಕ್ರಗತಿಗೆ ಎಳೆದಂತೆ. ಸಮುದಾಯದ ಅಸ್ಮಿತೆ ಅಂದರೇನು ? ಬ್ರಿಟಿಷರ ಗುಲಾಮರಾಗಿದ್ದ ಕಾಲದಲ್ಲಿ ಸಮುದಾಯದ ಈ ಅಸ್ಮಿತೆ ಗಟ್ಟಿಯಾಗಿ ಉಳಿದಿತ್ತಾದರೆ ಮುಂದೆ ಮುಸ್ಲಿಮರು ಸಮಾನವಾಗಿ ಸಹಭಾಗಿಗಳಾಗಲಿರುವ ಸ್ವತಂತ್ರ ಭಾರತದ ವ್ಯವಹಾರಗಳಲ್ಲಿ ಅಸ್ಮಿತೆಗೆ ಅಪಾಯ ಬಂದೊದಗುವುದು ಹೇಗೆ? ಮುಸ್ಲಿಂ ರಾಷ್ಟ್ರದ ಯಾವ ಗುಣಗಳನ್ನು ಮೈಗೂಡಿಸಿಕೊಳ್ಳಲು ಬಯಸುತ್ತೀರಿ ? ನೈಜ ವಿವಾದ ಇರುವುದು ನಂಬಿಕೆ ಹಾಗೂ ಆರಾಧನೆಯ ಸ್ವಾತಂತ್ರ್ಯಗಳಲ್ಲಿ. ಅವುಗಳನ್ನು ಯಾರು ತಡೆಯಬಲ್ಲರು ! ಸ್ವಾತಂತ್ರ್ಯ ಸಿಗುವುದರಿಂದ ೯ ಕೋಟಿ ಮುಸ್ಲಿಮರೆಲ್ಲರೂ ತಮ್ಮ ಧಾರ್ಮಿಕ ಸ್ವಾತಂತ್ರ್ಯವನ್ನು ಅನುಭವಿಸಲು ನಿರ್ಬಂಧಕ್ಕೆ ಒಳಗಾಗುವಷ್ಟು ಅಸಹಾಯಕರಾಗುತ್ತಾರೆಯೇ ? ಈ ಧಾರ್ಮಿಕ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳಲು ಜಾಗತಿಕ ಶಕ್ತಿಯಾಗಿರುವ ಬ್ರಿಟಿಷರಿಂದಲೇ ಸಾಧ್ಯವಾಗಿಲ್ಲವೆಂದರೆ ಅದನ್ನು ನಿರಾಕರಿಸುವಂತಹ ಯಾವ ಮಾಂತ್ರಿಕತೆ ಅಥವಾ ಶಕ್ತಿ ಹಿಂದೂಗಳಲ್ಲಿದೆ ? ಈ ಪ್ರಶ್ನೆಗಳನ್ನು ಎತ್ತಿದವರು ಯಾರು ? ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ತಮ್ಮ ಸ್ವಂತ ಪರಂಪರೆಗಳನ್ನು ತ್ಯಜಿಸಿ ಈಗ ರಾಜಕೀಯ ಗಿಮಿಕ್ಕುಗಳ ಮುಖಾಂತರ ಧೂಳೆಬ್ಬಿಸುವವರು.

ಮುಸ್ಲಿಮರ ಇತಿಹಾಸ ಭಾರತೀಯ ಇತಿಹಾಸದ ಒಂದು ಪ್ರಮುಖ ಭಾಗವಾಗಿದೆ. ಮುಸ್ಲಿಂ ಅರಸರೆಲ್ಲ ಇಸ್ಲಾಮಿನ ತತ್ವಗಳಿಗಾಗಿ ಶ್ರಮಿಸಿದರೆಂದು ಯೋಚಿಸುತ್ತಿದ್ದೀರಾ ? ಅವರು ನಾಮಮಾತ್ರಕ್ಕೆ ಇಸ್ಲಾಂ ಜೊತೆ ಸಂಬಂಧ ಇಟ್ಟುಕೊಂಡಿದ್ದರು; ಇಸ್ಲಾಮಿನ ಬೋಧಕರಾಗಿರಲಿಲ್ಲ. ಭಾರತದ ಮುಸ್ಲಿಮರು ಕೃತಜ್ಞರಾಗಿರಬೇಕಾಗಿರುವುದು ಸೂಫಿಗಳಿಗೆ. ಮುಸ್ಲಿಂ ಅರಸರು ಅನೇಕ ಸೂಫಿ ಸಂತರನ್ನು ಕ್ರೂರವಾಗಿ ನಡೆಸಿಕೊಂಡಿದ್ದರು. ಹೆಚ್ಚಿನ ಅರಸರಿಂದ ಸೃಷ್ಟಿಯಾದ ಉಲೇಮಾಗಳ ದೊಡ್ಡದೊಂದು ವರ್ಗ ಇಸ್ಲಾಮೀ ಮೌಲ್ಯ ಮತ್ತು ಸಂಸ್ಕೃತಿಯ ಪ್ರಸಾರದ ಹಾದಿಗೆ ಅಡ್ಡಿಯಾಗಿ ಪರಿಣಮಿಸಿತ್ತು. ಮೂಲ ಪರಿಶುದ್ಧ ಇಸ್ಲಾಂಗೆ ಪ್ರಚಂಡ ಆಕರ್ಷಣೆಯಿತ್ತು. ಮೊದಲನೇ ಶತಮಾನದಲ್ಲಿ ಅದು ಹಿಜಾಜ಼್ ಮತ್ತು ಸುತ್ತಮುತ್ತಲಿನ ದೊಡ್ಡ ಸಂಖ್ಯೆಯ ಜನರ ಹೃದಯ ಹಾಗೂ ಮನಸ್ಸುಗಳನ್ನು ಗೆದ್ದುಕೊಂಡಿತ್ತು. ಆದರೆ ಭಾರತಕ್ಕೆ ಬಂದ ಇಸ್ಲಾಂ ಭಿನ್ನವಾಗಿತ್ತು. ಅದನ್ನು ತಂದವರು ಅರಬರಲ್ಲ. ಹೀಗಾಗಿ ಅದರಲ್ಲಿ ನೈಜ ಸತ್ವ ಇರಲಿಲ್ಲ. ಆದರೂ ಮುಸ್ಲಿಂ ಕಾಲಾವಧಿಯು ಭಾರತದ ಸಂಸ್ಕೃತಿ, ಸಂಗೀತ, ಕಲೆ, ವಾಸ್ತುಶಿಲ್ಪ ಮತ್ತು ಭಾಷೆಗಳ ಮೇಲೆ ಅದರದೇ ಆದ ಛಾಪು ಮೂಡಿಸಿರುವುದನ್ನು ಕಾಣಬಹುದು. ಭಾರತದ ಸಾಂಸ್ಕೃತಿಕ ಕೇಂದ್ರಗಳಾಗಿ ಇರುವ ದೆಹಲಿ ಮತ್ತು ಲಕ್ನೋ ಏನನ್ನು ಪ್ರತಿನಿಧಿಸುತ್ತವೆ ? ಅವುಗಳ ಅಂತರಾಳದಲ್ಲಿರುವ ಮುಸ್ಲಿಂ ಚೇತನವನ್ನು ಸ್ಪಷ್ಟವಾಗಿ ಗುರುತಿಸಬಹುದು.

ವಸ್ತುಸ್ಥಿತಿ ಹೀಗಿದ್ದರೂ ಸ್ವತಂತ್ರ ಭಾರತದಲ್ಲಿ ಗುಲಾಮರಂತೆ ಬಾಳಬೇಕಾಗುತ್ತದೆಂದು ಮುಸ್ಲಿಮರು ಭಾವಿಸುತ್ತಿದ್ದರೆ ನಾನು ಅವರ ನಂಬಿಕೆ ಮತ್ತು ಹೃದಯಗಳಿಗಾಗಿ ಮಾತ್ರ ಪ್ರಾರ್ಥಿಸಬಲ್ಲೆನಷ್ಟೆ. ಬದುಕುವ ಆಸಕ್ತಿ ಕಳಕೊಂಡ ಮನುಷ್ಯನಲ್ಲಿ ಅದನ್ನು ಮತ್ತೆ ಹುಟ್ಟಿಸಬಹುದು. ಆದರೆ ಅಂಜುಬುರುಕ ಹಾಗೂ ಧೈರ್ಯವಿಲ್ಲದ ವ್ಯಕ್ತಿಯನ್ನು ಧೈರ್ಯಶಾಲಿ ಹಾಗೂ ಕೆಚ್ಚೆದೆಯವನನ್ನಾಗಿ ಪರಿವರ್ತಿಸಲು ಸಾಧ್ಯವಿಲ್ಲ. ಮುಸ್ಲಿಂ ಸಮುದಾಯ ಹೇಡಿಯಾಗಿದೆ. ಅವರಿಗೆ ದೇವರ ಭಯವಿಲ್ಲ; ಆದರೆ ಮನುಷ್ಯರಿಗೆ ಹೆದರುತ್ತಾರೆ. ಅಸ್ತಿತ್ವಕ್ಕೆ ಅಪಾಯ ಬಂದೊದಗಿದೆಯೆಂಬ ಯೋಚನೆಯಲ್ಲಿ ಸದಾಕಾಲ ಮುಳುಗಿರುವಂತೆ ಮಾಡಿರುವುದೇ ಈ ಭ್ರಾಂತಿ.

ಈ ದೇಶವನ್ನು ಆಕ್ರಮಿಸಿಕೊಂಡ ಬ್ರಿಟಿಷರು ನಂತರ ತಮ್ಮ ಸರಕಾರದ ಮೂಲಕ ಮುಸ್ಲಿಮರ ವಿರುದ್ಧ ಸಾಕಷ್ಟು ಅತ್ಯಾಚಾರ ನಡೆಸಿದ್ದಾರೆ. ಆದರೂ ಮುಸ್ಲಿಮರು ಇನ್ನೂ ಬದುಕುಳಿದಿದ್ದಾರೆ. ಅಷ್ಟೇ ಅಲ್ಲ, ಅಸಾಮಾನ್ಯ ಬೆಳವಣಿಗೆ ಕಂಡಿದ್ದಾರೆ. ಮುಸ್ಲಿಂ ಸಾಂಸ್ಕೃತಿಕ ನಡೆನುಡಿ ಮತ್ತು ಮೌಲ್ಯಗಳಿಗೆ ಅದರದೇ ಆದ ಆಕರ್ಷಣೆಗಳಿವೆ. ಭಾರತದ ನೆರೆಹೊರೆಯ ಮೂರು ದಿಕ್ಕುಗಳಲ್ಲಿ ಮೂರು ದೊಡ್ಡ ಮುಸ್ಲಿಂ ರಾಷ್ಟ್ರಗಳಿವೆ. ಈ ದೇಶದ ಬಹುಸಂಖ್ಯಾತರಿಗೆ ಮುಸ್ಲಿಮರ ನಿರ್ಮೂಲನದಲ್ಲಿ ಏಕಾದರೂ ಆಸಕ್ತಿ ಇರಬೇಕು ? ಅದರಿಂದ ಅವರ ಸ್ವಹಿತಾಸಕ್ತಿಗೆ ಏನು ಲಾಭ ? ೯ ಕೋಟಿ ಜನರನ್ನು ಮುಗಿಸಿಬಿಡುವುದು ಅಷ್ಟೊಂದು ಸುಲಭದ ಕೆಲಸವೇ ? ವಾಸ್ತವದಲ್ಲಿ ಮುಸ್ಲಿಂ ಸಂಸ್ಕೃತಿಗೆ ಎಷ್ಟೊಂದು ಚುಂಬಕ ಶಕ್ತಿ ಇದೆಯೆಂದರೆ ಸ್ವತಂತ್ರ ಭಾರತದ ಅತಿ ದೊಡ್ಡ ಸಂಖ್ಯೆಯ ಜನ ಅದರ ಅನುಯಾಯಿಗಳಾದಲ್ಲಿ ನನಗೇನೂ ಆಶ್ಚರ್ಯವಾಗದು.

ವಿಶ್ವಕ್ಕೆ ಇಂದು ಶಾಶ್ವತ ಶಾಂತಿ ಮತ್ತು ಬದುಕಿನ ತತ್ವ ಬೇಕಾಗಿದೆ. ಹಿಂದೂಗಳು ಮಾರ್ಕ್ಸ್‌ವಾದದ ಬೆಂಬತ್ತುತ್ತಾ ಪಾಶ್ಚಿಮಾತ್ಯ ತತ್ವಶಾಸ್ತ್ರ ಹಾಗೂ ತಿಳಿವುಗಳ ಅಧ್ಯಯನ ನಡೆಸುತ್ತಿದ್ದರೆ ಅವರು ಇಸ್ಲಾಮನ್ನು ಉಪೇಕ್ಷಿಸುತ್ತಿಲ್ಲ. ಇಸ್ಲಾಮಿನ ತತ್ವಗಳ ಪ್ರಯೋಜನವನ್ನು ಸ್ವಾಗತಿಸುತ್ತಾರೆ.

ಯಥಾರ್ಥದಲ್ಲಿ ಅವರು ಇಸ್ಲಾಂ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದಾರೆ. ಇಸ್ಲಾಂ ಅಂದರೆ ಒಂದು ವಂಶಪಾರಂಪರಿಕ ಸಮುದಾಯದ ಸಂಕುಚಿತ ಸ್ವಾಭಿಮಾನ ಅಥವಾ ನಿರಂಕುಶ ಪ್ರಭುತ್ವ ಅಲ್ಲವೆಂದು ಒಪ್ಪುತ್ತಾರೆ. ಇಸ್ಲಾಂ ಅಂದರೆ ಮಾನವ ಸಮಾನತೆಯ ನೆಲೆಗಟ್ಟಿನಲ್ಲಿ ಶಾಂತಿ ಸ್ಥಾಪಿಸಬೇಕೆಂಬ ಸಾರ್ವತ್ರಿಕ ಕರೆ. ಇಸ್ಲಾಂ ಅಂದರೆ ತನ್ನನ್ನು ಆರಾಧಿಸಬೇಡಿ, ದೇವರನ್ನು ಪೂಜಿಸಿ ಎಂದ ಪ್ರವಾದಿಯ ಘೋಷಣೆ. ಇಸ್ಲಾಂ ಅಂದರೆ (೧)ಸಕಲ ವಿಧದ ಸಾಮಾಜಿಕ, ಆರ್ಥಿಕ ಶೋಷಣೆಗಳಿಂದ ಮುಕ್ತಿ; (೨)ದೈವಪ್ರಜ್ಞೆ, ಋಜುಮಾರ್ಗದ ಕ್ರಿಯೆ; ಮತ್ತು (೩)ಜ್ಞಾನ ಎಂಬ ಈ ಮೂಲ ತ್ರಿವಳಿ ತತ್ವಗಳ ಆಧಾರದಲ್ಲಿ ಸಮಾಜದ ಮರುನಿರ್ಮಾಣ.

ನಿಜವಾಗಿ ಮುಸ್ಲಿಮೇತರರರಲ್ಲಿ ಇಸ್ಲಾಮಿನ ಬಗ್ಗೆ ಪ್ರತಿಕೂಲ ನಿಲುವುಗಳು ಉಂಟಾಗಲು ಕಾರಣವೇ ನಾವು ಮುಸ್ಲಿಮರು ಮತ್ತು ನಮ್ಮ ತೀವ್ರಗಾಮಿ ನಡವಳಿಕೆಗಳು. ಇಸ್ಲಾಮಿನ ಪರಿಶುದ್ಧತೆಯನ್ನು ನಾವು ನಮ್ಮ ಸ್ವಾರ್ಥದ ಮಹತ್ವಾಕಾಂಕ್ಷೆಗಳಿಂದ ಹೊಲಸು ಮಾಡಿದೆವು. ಇಲ್ಲವಾದರೆ ಸತ್ಯಾನ್ವೇಷಣೆಯಲ್ಲಿರುವ ಅನೇಕ ಮಂದಿ ಇಸ್ಲಾಮಿನ ಅಪ್ಪುಗೆಯಲ್ಲಿ ಸಾಂತ್ವನ ಪಡೆಯುತ್ತಿದ್ದರು. ಪಾಕಿಸ್ತಾನಕ್ಕೂ ಇಸ್ಲಾಮಿಗೂ ಏನೇನೂ ಸಂಬಂಧವಿಲ್ಲ. ಅದು ಮುಸ್ಲಿಂ ಲೀಗ್‌ನ ಕೇವಲ ರಾಜಕೀಯ ಹಕ್ಕೊತ್ತಾಯವಾಗಿದ್ದು ಲೀಗ್ ಅದನ್ನೊಂದು ರಾಜಕೀಯ ಗುರಿ ಎಂಬುದಾಗಿ ಭಾರತೀಯ ಮುಸ್ಲಿಮರಿಗೆ ಬಿಂಬಿಸಿದೆ. ನನ್ನ ಅಭಿಪ್ರಾಯದಲ್ಲಿ ಅದು ಮುಸ್ಲಿಮರ ಸಮಸ್ಯೆಗಳಿಗೆ ಪರಿಹಾರವಲ್ಲ. ವಾಸ್ತವದಲ್ಲಿ ಅದು ಇನ್ನಷ್ಟು ಸಮಸ್ಯೆಗಳನ್ನು ಹುಟ್ಟುಹಾಕಲಿದೆ.

ಪೂಜ್ಯ ಪ್ರವಾದಿ ಹೇಳಿದ್ದಾರೆ, ''ಪರಮಾತ್ಮನು ನನಗಾಗಿ ಸಕಲ ವಿಶ್ವವನ್ನೇ ಒಂದು ಮಸೀದಿಯಾಗಿಸಿದ್ದಾನೆ.'' ಈಗ ಈ ಮಸೀದಿಯನ್ನು ಇಬ್ಭಾಗ ಮಾಡಲು ನನ್ನ ಬೆಂಬಲ ಕೇಳಬೇಡಿ. ಭಾರತದ ೯ ಕೋಟಿ ಮುಸ್ಲಿಮರು ದೇಶದ ವಿವಿಧೆಡೆ ಚದುರಿಹೋಗಿದ್ದ ಪಕ್ಷದಲ್ಲಿ ವಿಷಯ ಬೇರೆ. ಆಗ ಒಂದೆರಡು ಪ್ರದೇಶಗಳಲ್ಲಿ ಮುಸ್ಲಿಮರು ಬಹು ಸಂಖ್ಯಾತರಾಗುವ ರೀತಿಯಲ್ಲಿ ರಾಜ್ಯಗಳ ಪುನರ್ವಿಂಗಡಣೆ ಮಾಡುವಂತೆ ಕೇಳಿಕೊಂಡಿದ್ದರೆ ಅದನ್ನು ಅರ್ಥಮಾಡಿಕೊಳ್ಳಬಹುದು. ಆದರೆ ಇಂದಿನ ಪರಿಸ್ಥಿತಿ ಸಂಪೂರ್ಣ ಭಿನ್ನವಾಗಿದೆ. ಭಾರತದ ಗಡಿಗಳಲ್ಲಿರುವ ರಾಜ್ಯಗಳಲ್ಲೆಲ್ಲಾ ಮುಸ್ಲಿಮರೇ ಬಹುಸಂಖ್ಯಾತರಾಗಿದ್ದು ನೆರೆಹೊರೆಯ ದೇಶಗಳೆಲ್ಲವೂ ಮುಸ್ಲಿಂ ರಾಷ್ಟ್ರಗಳಾಗಿರುವಾಗ ಈ ಎಲ್ಲ ಜನರನ್ನು ನಿರ್ನಾಮಗೊಳಿಸಲು ಯಾರಿಂದ ಸಾಧ್ಯವಿದೆ ಹೇಳಿ.

ಪಾಕಿಸ್ತಾನಕ್ಕಾಗಿ ಕೇಳುತ್ತಿರುವುದರಿಂದ ನಾವು ಕಳೆದ ೧೦೦೦ ವರ್ಷಗಳ ಇತಿಹಾಸವನ್ನು ಗಣನೆಗೆ ತೆಗೆದುಕೊಳ್ಳುತ್ತಿಲ್ಲವೆಂದಾಗಿದೆ. ಮುಸ್ಲಿಂ ಲೀಗ್‌ನ ಪರಿಭಾಷೆಯನ್ನು ಬಳಸಬಹುದಾದರೆ, ನಾವು ೩ ಕೋಟಿಗೂ ಅಧಿಕ ಮುಸ್ಲಿಮರನ್ನು 'ಹಿಂದೂರಾಷ್ಟ್ರ'ದ ತೆಕ್ಕೆಗೆ ದೂಡುತ್ತಿದ್ದೇವೆ. ಯಾವ ಹಿಂದೂ - ಮುಸ್ಲಿಂ ಸಮಸ್ಯೆ ಕಾಂಗ್ರೆಸ್ ಮತ್ತು ಲೀಗ್‌ಗಳ ನಡುವಿನ ಬಿಗುವಿಗೆ ಕಾರಣವಾಗಿದೆಯೋ ಅದೇ ಸಮಸ್ಯೆ ಉಭಯ ದೇಶಗಳ ನಡುವಿನ ಭಿನ್ನಮತಗಳಿಗೆ ಮೂಲವಾಗಲಿದೆ. ಮತ್ತು ಅಂತರರಾಷ್ಟ್ರೀಯ ಶಕ್ತಿಗಳ ನೆರವಿನಿಂದ ಭವಿಷ್ಯದ ಯಾವ ಕ್ಷಣದಲ್ಲೂ ಪೂರ್ಣ ಪ್ರಮಾಣದ ಯುದ್ಧಕ್ಕೆ ಕಾರಣೀಭೂತವಾಗಬಹುದು.



ಪಾಕಿಸ್ತಾನ ನಿರ್ಮಾಣದಿಂದ ಮುಸ್ಲಿಮರಿಗೆ ಇಷ್ಟೊಂದು ಅಪಾಯ ಕಾದಿದೆಯೆಂದಾದರೆ ಅದನ್ನು ಹಿಂದೂಗಳೇಕೆ ವಿರೋಧಿಸುತ್ತಿದ್ದಾರೆಂಬ ಪ್ರಶ್ನೆ ಪದೇಪದೇ ಕೇಳಿಬರುತ್ತಿದೆ. ನನ್ನ ಪ್ರಕಾರ ಈ ವಿರೋಧ ಎರಡು ಕಡೆಗಳಿಂದ ಬರುತ್ತಿದೆ. ಸಾಮ್ರಾಜ್ಯಶಾಹಿಗಳ ಕುತಂತ್ರಗಳ ಬಗ್ಗೆ ನಿಜಕ್ಕೂ ಆತಂಕಕ್ಕೊಳಗಾಗಿರುವ ಒಂದು ಗುಂಪು ಸ್ವತಂತ್ರ ಐಕ್ಯ ಭಾರತ ತನ್ನನ್ನು ತಾನು ರಕ್ಷಿಸಿಕೊಳ್ಳಲು ಹೆಚ್ಚು ಸಮರ್ಥವಾಗಿ ಇರುತ್ತದೆಂದು ಭಾವಿಸುತ್ತದೆ. ಮತ್ತೊಂದು ಗುಂಪು ಮುಸ್ಲಿಮರನ್ನು ಪ್ರಚೋದಿಸಿ ಅವರು ಪಾಕಿಸ್ತಾನಕ್ಕಾಗಿ ಇನ್ನಷ್ಟು ದೃಢ ನಿರ್ಧಾರ ತಳೆಯುವಂತೆ ಮಾಡಿ ಆ ಮೂಲಕ ಅವರನ್ನಿಲ್ಲಿಂದ ತೊಲಗಿಸಲು ಬಯಸುತ್ತದೆ. ತಮಗೆ ಸಾಂವಿಧಾನಿಕ ರಕ್ಷಣೆಗಳಿರಬೇಕೆಂದು ಕೇಳುವ ಹಕ್ಕು ಮುಸ್ಲಿಮರಿಗಿದೆ. ಆದರೆ ದೇಶವಿಭಜನೆಯಿಂದ ಅವರ ಹಿತಾಸಕ್ತಿಗಳು ಈಡೇರಲಾರವು. ಪಾಕಿಸ್ತಾನಕ್ಕೆ ಆಗಿರುವ ಈ ಡಿಮಾಂಡ್ ಇದೆಯಲ್ಲ, ಕೋಮು ಸಮಸ್ಯೆಗೆ ಇದು ರಾಜಕೀಯವಾಗಿ ಒಂದು ದೋಷಯುಕ್ತ ಪರಿಹಾರ.

ಭವಿಷ್ಯದಲ್ಲಿ ಭಾರತವನ್ನು ಕಾಡಲಿರುವುದು ವರ್ಗ ಸಮಸ್ಯೆಗಳು; ಕೋಮುವಿವಾದಗಳಲ್ಲ. ಬಂಡವಾಳಶಾಹಿ ಮತ್ತು ಕಾರ್ಮಿಕವರ್ಗದ ನಡುವೆ ಸಂಘರ್ಷಗಳಾಗಲಿದೆ. ಕಮ್ಯುನಿಸ್ಟ್ ಮತ್ತು ಸಮಾಜವಾದಿ ಚಳುವಳಿಗಳು ಬೆಳೆಯುತ್ತಿವೆ. ಅವುಗಳನ್ನು ನಿರ್ಲಕ್ಷಿಸಲಾಗುವುದಿಲ್ಲ. ಈ ಚಳುವಳಿಗಳು ದಮನಿತರಿಗಾಗಿ ಹೆಚ್ಚೆಚ್ಚು ಹೋರಾಟ ಮಾಡಲಿವೆ. ಮುಂಬರಲಿರುವ ಈ ಆಪತ್ತಿನಿಂದ ಮುಸ್ಲಿಂ ಬಂಡವಾಳಗಾರ ಮತ್ತು ಪಾಳೇಗಾರ ವರ್ಗಗಳು ಕಂಗಾಲಾಗಿವೆ. ಈ ಶಕ್ತಿಗಳೇ ಈಗ ಇಡೀ ವಿವಾದಕ್ಕೆ ಕೋಮು ಬಣ್ಣ ಹಚ್ಚಿ ಆರ್ಥಿಕ ಸಮಸ್ಯೆಯನ್ನು ಧಾರ್ಮಿಕ ವಿವಾದವಾಗಿ ಪರಿವರ್ತಿಸಿವೆ. ಆದರೆ ಇದಕ್ಕೆ ಕೇವಲ ಮುಸ್ಲಿಮರಷ್ಟೇ ಹೊಣೆಯಲ್ಲ. ಈ ಕಾರ್ಯವ್ಯೂಹವನ್ನು ಪ್ರಪ್ರಥಮವಾಗಿ ಅಳವಡಿಸಿಕೊಂಡದ್ದು ಬ್ರಿಟಿಷ್ ಸರಕಾರ. ಅದಕ್ಕೆ ಷರಾ ಬರೆದವರು ಅಲಿಗಢದ ರಾಜಕೀಯ ವ್ಯಕ್ತಿಗಳು. ತರುವಾಯ ಹಿಂದೂಗಳ ಸಂಕುಚಿತ ನಿಲುವುಗಳಿಂದಾಗಿ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸಿತು. ಇಂದು ವಿಭಜನೆಯಾಗದೆ ಸ್ವಾತಂತ್ರ್ಯ ದೊರೆಯದಂತಾಗಿದೆ.

ಸ್ವಯಂ ಜಿನ್ನಾ ಹಿಂದೂ ಮುಸ್ಲಿಂ ಐಕ್ಯತೆಯ ಸಂದೇಶವನ್ನು ಸಾರುತ್ತಿದ್ದವರು. ಕಾಂಗ್ರೆಸ್ ಪಕ್ಷದ ಕಲಾಪವೊಂದರಲ್ಲಿ ಸರೋಜಿನಿ ನಾಯ್ಡು ಆತನನ್ನು 'ಹಿಂದೂ ಮುಸ್ಲಿಂ ಐಕ್ಯತೆಯ ರಾಯಭಾರಿ' ಎಂದೇ ಕರೆದಿದ್ದರು. ಜಿನ್ನಾ ದಾದಾಭಾಯಿ ನೌರೋಜಿಯವರ ಶಿಷ್ಯನಾಗಿದ್ದರು. ೧೯೦೬ರಲ್ಲಿ ಭಾರತದಲ್ಲಿ ಕೋಮು ರಾಜಕಾರಣ ಆರಂಭಿಸಿದ ಮುಸ್ಲಿಂ ನಿಯೋಗವೊಂದರ ಸದಸ್ಯನಾಗಲು ನಿರಾಕರಿಸಿದ್ದರು. ೧೯೦೯ರಲ್ಲಿ ಮುಸ್ಲಿಮರು ಜಂಟಿ ಆಯ್ಕೆ ಸಮಿತಿಯ ಮುಂದಿಟ್ಟಿದ್ದ ಹಕ್ಕೊತ್ತಾಯಗಳನ್ನು ಓರ್ವ ದೃಢ ರಾಷ್ಟ್ರೀಯವಾದಿಯಾಗಿ ವಿರೋಧಿಸಿದ್ದರು. 'ದ ಟೈಮ್ಸ್ ಆಫ್ ಇಂಡಿಯ' ಪತ್ರಿಕೆಗೆ ಅಕ್ಟೋಬರ್ ೩, ೧೯೨೫ರಂದು ಬರೆದ ಪತ್ರವೊಂದರಲ್ಲಿ ಕಾಂಗ್ರೆಸ್ ಒಂದು ಹಿಂದೂಗಳ ಸಂಘಟನೆಯೆಂಬ ಸೂಚನೆಗಳನ್ನು ತಳ್ಳಿಹಾಕಿದ್ದರು. ೧೯೨೫, ೧೯೨೮ರ ಸರ್ವಪಕ್ಷಗಳ ಸಮ್ಮೇಳನಗಳಲ್ಲಿ ಭಾಗವಹಿಸಿ ಜಂಟಿ ಮತದಾರ ವ್ಯವಸ್ಥೆಗಾಗಿ ಬಲವಾಗಿ ಪ್ರತಿಪಾದಿಸಿದ್ದರು. ೧೯೨೫ರಲ್ಲಿ ರಾಷ್ಟ್ರೀಯ ಅಸೆಂಬ್ಲಿಯಲ್ಲಿ ಮಾತನಾಡಿ, ಮೊದಲಿಂದ ಕೊನೆವರೆಗೂ ನಾನೋರ್ವ ರಾಷ್ಟ್ರೀಯವಾದಿಯಾಗಿ ಉಳಿಯುವೆ ಎನ್ನುತ್ತಾ ಸದನದಲ್ಲಿ ಕೋಮುವಿವಾದಗಳನ್ನೆತ್ತದೆ ಅಸೆಂಬ್ಲಿಯನ್ನು ಅದರ ನಿಜಾರ್ಥದಲ್ಲಿ ಒಂದು ರಾಷ್ಟ್ರೀಯ ಸಂಸ್ಥೆಯಾಗಿಸಲು ಸಹಕರಿಸುವಂತೆ ತನ್ನೆಲ್ಲಾ ಹಿಂದೂ-ಮುಸ್ಲಿಂ ಸಹೋದ್ಯೋಗಿಗಳಿಗೆ ಕರೆ ನೀಡಿದ್ದರು.

ಕಾಂಗ್ರೆಸ್ ೧೯೨೮ರಲ್ಲಿ ಸೈಮನ್ ಕಮಿಷನ್‌ನ ಬಹಿಷ್ಕಾರಕ್ಕೆ ಕರೆಕೊಟ್ಟಾಗ ಜಿನ್ನಾ ಕಾಂಗ್ರೆಸ್‌ನ್ನು ಬೆಂಬಲಿಸಿದ್ದರು. ೧೯೩೭ರ ತನಕವೂ ಜಿನ್ನಾ ದೇಶ ವಿಭಜನೆಗೆ ಸಮ್ಮತಿಸಿರಲಿಲ್ಲ. ವಿವಿಧ ವಿದ್ಯಾರ್ಥಿ ಸಂಘಟನೆಗಳಿಗೆ ನೀಡಿದ್ದ ಸಂದೇಶವೊಂದರಲ್ಲಿ, ಹಿಂದೂ-ಮುಸ್ಲಿಂ ಒಗ್ಗಟ್ಟಿಗಾಗಿ ಶ್ರಮಿಸುವ ಅವಶ್ಯಕತೆಯನ್ನು ಒತ್ತಿ ಹೇಳಿದ್ದರು. ಆದರೆ ಏಳು ರಾಜ್ಯಗಳಲ್ಲಿ ಸರಕಾರ ಸ್ಥಾಪಿಸುವ ಸಂದರ್ಭದಲ್ಲಿ ಕಾಂಗ್ರೆಸ್ ಮುಸ್ಲಿಂ ಲೀಗನ್ನು ಕಡೆಗಣಿಸಿದಾಗ ಜಿನ್ನಾ ದುಃಖಿತರಾದರು. ಮುಸ್ಲಿಮರ ರಾಜಕೀಯ ಅವನತಿಯನ್ನು ತಡೆಗಟ್ಟುವ ಸಲುವಾಗಿ ವಿಭಜನೆಗಾಗಿ ಒತ್ತಾಯಿಸಲು ೧೯೪೦ರಲ್ಲಿ ನಿರ್ಧರಿಸಿದರು. ಸಾರಾಂಶದಲ್ಲಿ ಜಿನ್ನಾರ ಪಾಕಿಸ್ತಾನದ ಡಿಮಾಂಡ್ ಹೊರಹೊಮ್ಮಿರುವುದು ಆತನ ಸ್ವಂತ ರಾಜಕೀಯ ಅನುಭವಗಳಿಗೆ ಪ್ರತಿಕ್ರಿಯೆಯಾಗಿ. ನನ್ನ ಬಗ್ಗೆ ಅಭಿಪ್ರಾಯ ಹೊಂದುವ ಹಕ್ಕು ಜಿನ್ನಾರಿಗಿದೆ. ಆದರೆ ಆತ ಬುದ್ಧಿವಂತನಾಗಿರುವ ಬಗ್ಗೆ ನನಗೆ ಎಳ್ಳಷ್ಟೂ ಅನುಮಾನವಿಲ್ಲ. ಮುಸ್ಲಿಂ ಕೋಮುವಾದವನ್ನು ಮತ್ತು ಪಾಕಿಸ್ತಾನಕ್ಕಾಗಿರುವ ಹಕ್ಕೊತ್ತಾಯವನ್ನು ಬಲಿಷ್ಠಗೊಳಿಸಲು ಓರ್ವ ರಾಜಕಾರಣಿಯಾಗಿ ಆತ ಓವರ್‌ಟೈಂ ಕೆಲಸ ಮಾಡಿದ್ದಾರೆ. ಈಗ ಅದೊಂದು ಪ್ರತಿಷ್ಠೆಯ ಪ್ರಶ್ನೆಯಾಗಿ ಪರಿಣಮಿಸಿರುವುದರಿಂದ ಏನು ಮಾಡಿದರೂ ಅದನ್ನು ಬಿಟ್ಟುಕೊಡಲಾರರು.

**ಪ್ರಶ್ನೆ : ಮುಸ್ಲಿಮರು ಪಾಕಿಸ್ತಾನಕ್ಕಾಗಿರುವ ಹಕ್ಕೊತ್ತಾಯದಿಂದ ಹಿಂದೆ ಸರಿಯುವುದಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಅವರೇಕೆ ವಿವೇಕ ಮತ್ತು ತಾರ್ಕಿಕ ಸಂವಾದಗಳಿಗೆ ಸ್ಪಂದಿಸುತ್ತಿಲ್ಲ ?**

**ಉತ್ತರ :** ತಪ್ಪು ಕಾರಣಕ್ಕಾಗಿ ದೊಂಬಿಯೊಂದು ಉತ್ಸಾಹ ಭರಿತವಾಗಿರುವಾಗ ಅದರ ವಿರುದ್ಧ ಹೋರಾಡುವುದು ಕಷ್ಟ. ಮಾತ್ರವಲ್ಲ, ಅದು ಅಸಾಧ್ಯ ಕೂಡ. ಆದರೆ ಆತ್ಮಸಾಕ್ಷಿಯ ದನಿಯನ್ನು ಹತ್ತಿಕ್ಕುವುದು ಮಾತ್ರ ಸಾವಿಗಿಂತಲೂ ಅಧಿಕ ಪಾಲು ಕೆಟ್ಟದ್ದು. ಮುಸ್ಲಿಮರಿಂದು ನಡೆಯುತ್ತಿಲ್ಲ, ಪ್ರವಹಿಸುತ್ತಿದ್ದಾರೆ. ಸಮಸ್ಯೆ ಏನೆಂದರೆ ಅವರು ಸ್ಥಿರ ನಡಿಗೆ ಕಲಿತಿಲ್ಲ; ಒಂದೋ ಧಾವಿಸುತ್ತಾರೆ ಇಲ್ಲಾ ಪ್ರವಾಹದೊಂದಿಗೆ ಸಾಗುತ್ತಾರೆ. ಆತ್ಮವಿಶ್ವಾಸ ಹಾಗೂ ಆತ್ಮಗೌರವ ಕಳೆದುಕೊಂಡ ಜನರ ಗುಂಪು ಇಲ್ಲದ ಸಂಶಯ ಮತ್ತು ಅಪಾಯಗಳನ್ನು ಕಲ್ಪಿಸಿ ಕೊಳ್ಳುತ್ತದೆ. ಪರಿಣಾಮವಾಗಿ ಯಾವುದು ಸರಿ, ಯಾವುದು ತಪ್ಪೆಂದು ಗುರುತಿಸಲು ಅಸಮರ್ಥವಾಗುತ್ತದೆ. ಬದುಕಿನ ನಿಜಾರ್ಥವನ್ನು ಕಂಡುಕೊಳ್ಳಬೇಕಾಗುವುದು ಸಂಖ್ಯಾಬಲ ದಿಂದಲ್ಲ, ದೃಢನಂಬಿಕೆ ಹಾಗೂ ಋಜುಮಾರ್ಗದ ಕ್ರಿಯೆ ಗಳಿಂದ. ಬ್ರಿಟಿಷರ ರಾಜಕೀಯವು ಭೀತಿ ಹಾಗೂ ಅಪನಂಬಿಕೆಯ ಅನೇಕ ಬೀಜಗಳನ್ನು ಮುಸ್ಲಿಮರ ಮಿದುಳಲ್ಲಿ ಬಿತ್ತಿದೆ. ಈಗ ಅವರೊಂದು ಭಯಾನಕ ಪರಿಸ್ಥಿತಿಯಲ್ಲಿದ್ದಾರೆ. ವಿದೇಶೀ ಬ್ರಿಟಿಷರು ಇಲ್ಲಿಂದ ತೊಲಗುತ್ತಿರುವುದಕ್ಕೆ ಸಂಕಟಪಡುತ್ತ ಹೋಗುವ ಮುನ್ನ ದೇಶವನ್ನು ವಿಭಜಿಸಬೇಕೆಂದು ಕೇಳಿಕೊಳ್ಳುತ್ತಿದ್ದಾರೆ. ವಿಭಜನೆಯಿಂದ ಅವರ ಪ್ರಾಣ ಮತ್ತು ಶರೀರಗಳಿಗೆ ಇರುವ ಅಪಾಯಗಳು ದೂರವಾಗುತ್ತವೆಂದು ನಂಬಿದ್ದಾರೆಯೇ ? ಅಪಾಯಗಳಿರುವುದು ನಿಜವೆಂದಾದ ಪಕ್ಷದಲ್ಲಿ ಆ ಅಪಾಯಗಳು ಅವರ ಗಡಿಗಳನ್ನು ಕಾಡಲಿವೆ. ಯಾವುದೇ ಸಶಸ್ತ್ರ ಸಂಘರ್ಷ ಸಂಭವಿಸಿದಾಗ ಹೆಚ್ಚೆಚ್ಚು ಜೀವಹಾನಿ ಮತ್ತು ಆಸ್ತಿಹಾನಿ ಸಂಭವಿಸಲಿವೆ.

**ಪ್ರಶ್ನೆ : ಆದರೆ ಹಿಂದೂಗಳು ಮತ್ತು ಮುಸ್ಲಿಮರು ವಿಭಿನ್ನ ಹಾಗೂ ಅಸಮ ಪ್ರವೃತ್ತಿಗಳಿರುವ ಎರಡು ವಿಭಿನ್ನ ಜನಾಂಗಗಳು. ಅವೆರಡರ ಮಧ್ಯೆ ಒಗ್ಗಟ್ಟು ಸಾಧಿಸುವುದಾದರೂ ಹೇಗೆ ?**

**ಉತ್ತರ :** ಇದೊಂದು ಅಪ್ರಚಲಿತ ವಾದ. ಈ ವಿಷಯದಲ್ಲಿ ಅಲ್ಲಾಮಾ ಇಕ್ಬಾಲ್ ಮತ್ತು ಮೌಲಾನಾ ಹುಸೇನ್ ಅಹ್ಮದ್ ನಡುವಿನ ಪತ್ರವ್ಯವಹಾರಗಳನ್ನು ಗಮನಿಸಿದ್ದೇನೆ. ಕುರಾನ್‌ನಲ್ಲಿ 'ಕ್ವಾಮ್' ಶಬ್ದವನ್ನು ಬಳಸಿರುವುದು ಕೇವಲ ನಂಬಿಗಸ್ಥರ ಸಮುದಾಯ ಒಂದಕ್ಕೇ ಅಲ್ಲ. ವಿಭಿನ್ನ ಮಾನವ ಗುಂಪುಗಳನ್ನೂ ಸಾಮಾನ್ಯವಾಗಿ 'ಕ್ವಾಮ್' ಎಂದೇ ಕರೆಯಲಾಗಿದೆ. ಈಗ ಈ ಮಿಲ್ಲತ್ (ಸಮುದಾಯ), ಕ್ವಾಮ್ (ರಾಷ್ಟ್ರ) ಮತ್ತು ಉಮ್ಮಾ (ಗುಂಪು) ಮುಂತಾದ ಶಬ್ದಗಳ ಉತ್ಪತ್ತಿ ಕುರಿತ ಚರ್ಚೆಯಿಂದ ಏನು ಸಾಧಿಸಲಿದ್ದೇವೆ ? ಧಾರ್ಮಿಕವಾಗಿ ನೋಡಿದರೆ ಭಾರತದಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ, ಪಾರಸಿ, ಸಿಕ್ಖ್ ಮುಂತಾದ ಅನೇಕ ಜನರು ವಾಸವಾಗಿದ್ದಾರೆ. ಹಿಂದೂ ಮತ್ತು ಮುಸ್ಲಿಂ ಧರ್ಮಗಳ ಉದ್ದೇಶಗಳಲ್ಲಿ ಎರಡು ವಿಶಾಲ ವ್ಯತ್ಯಾಸಗಳಿವೆ. ಆದರೆ ಈ ವ್ಯತ್ಯಾಸಗಳು ಭಾರತದ ಸ್ವಾತಂತ್ರ್ಯದ ಹಾದಿಗೆ ಅಡ್ಡಿಯಾಗುವುದಕ್ಕೆ ಬಿಡಬಾರದು. ಎರಡು ಸ್ಪಷ್ಟ ಹಾಗೂ ವಿಭಿನ್ನ ಧಾರ್ಮಿಕ ವ್ಯವಸ್ಥೆಗಳಿರುವುದರಿಂದ ಭಾರತದ ಸಮಗ್ರತೆ ಹಾಗೂ ಐಕ್ಯತೆಯ ಕಲ್ಪನೆಯನ್ನು ಅಲ್ಲಗಳೆದಂತಾಗುವುದಿಲ್ಲ. ಈಗ ವಿಷಯವೆಂದರೆ ನಮ್ಮ ದೇಶದ ಸ್ವಾತಂತ್ರ್ಯ ಮತ್ತು ಅದನ್ನು ಪಡೆಯುವ ವಿಧಾನ. ಸ್ವಾತಂತ್ರ್ಯ ಒಂದು ವರದಾನ ಮತ್ತು ಪ್ರತಿಯೊಬ್ಬ ಮಾನವನ ಹಕ್ಕು. ಇದನ್ನು ಧರ್ಮದ ನೆಲೆಯಲ್ಲಿ ವಿಂಗಡಿಸಲಾಗುವುದಿಲ್ಲ.

ಮುಸ್ಲಿಮರು ತಾವೊಂದು ಸಾರ್ವತ್ರಿಕ ಸಂದೇಶದ ವಾಹಕರೆಂಬುದನ್ನು ಅರಿಯಬೇಕು. ಅವರು ಒಂದು ಜನಾಂಗೀಯ ಅಥವಾ ಪ್ರಾದೇಶಿಕ ಗುಂಪಲ್ಲ. ಹಾಗೆ ನೋಡಿದರೆ ಭಾರತದ ಮುಸ್ಲಿಮರು ಒಂದೇ ಸಮುದಾಯವಲ್ಲ. ಅವರೊಳಗೇ ಅನೇಕ ಒಳಪಂಗಡಗಳಿವೆ. ಅವರನ್ನೆಲ್ಲಾ ಹಿಂದೂ ವಿರೋಧಿ ಭಾವನೆಯ ಮೂಲಕ ಒಂದುಗೂಡಿಸಬಹುದು. ಆದರೆ ಅದೇ ವೇಳೆ ಇಸ್ಲಾಮಿನ ಹೆಸರಿನಲ್ಲಿ ಒಟ್ಟು ಸೇರಿಸಲಾಗುವುದಿಲ್ಲ. ಅವರ ಮಟ್ಟಿಗೆ ಇಸ್ಲಾಂ ಅಂದರೆ ತಮ್ಮದೇ ಪಂಥಕ್ಕೆ ಸಂಪೂರ್ಣ ನಿಷ್ಠೆ. ವಹಾಬಿ, ಸುನ್ನಿ, ಶಿಯಾ ಮುಂತಾದವಲ್ಲದೆ ವಿವಿಧ ಸಂತರನ್ನು, ದೈವಾಂಶಸಂಭೂತರನ್ನು ಪೂಜಿಸುವ ಅಸಂಖ್ಯಾತ ಪಂಗಡಗಳಿವೆ. ಪ್ರಾರ್ಥನೆ ವೇಳೆ ಕೈ ಎತ್ತುವುದು, 'ಆಮೆನ್' ಹೇಳುವುದು ಇದೇ ಮೊದಲಾದ ಸಣ್ಣಪುಟ್ಟ ವಿಷಯಗಳಿಂದ ಹುಟ್ಟಿರುವ ವಿವಾದಗಳಿಗೆ ಅಂತ್ಯ ಕಾಣಿಸುತ್ತಿಲ್ಲ. ಉಲೇಮಾಗಳು ತಕ್‌ಫೀರ್ [ಕಾಫಿರ್ (ಧರ್ಮಭ್ರಷ್ಟ)ನೆಂದು ಘೋಷಿಸುವ ಫತ್ವಾ]ಗಳನ್ನಂತೂ ಧಾರಾಳವಾಗಿ ಬಳಸಿದ್ದಾರೆ.

ಹಿಂದೆ ಅವರು ಇಸ್ಲಾಮನ್ನು ನಂಬದವರ ಬಳಿಗೆ ಒಯ್ಯುತ್ತಿದ್ದರು. ಇಂದು ನಂಬುವವ ರಿಂದಲೇ ಕಿತ್ತೊಯ್ಯುತ್ತಿದ್ದಾರೆ. ಉತ್ತಮ, ಧರ್ಮಭೀರು ಜನರನ್ನೆಲ್ಲ ಕಾಫಿರರೆಂದು ಕರೆದಿರುವ ಅನೇಕ ಘಟನೆ ಗಳನ್ನು ಇಸ್ಲಾಮಿನ ಚರಿತ್ರೆಯುದ್ದಕ್ಕೂ ಕಾಣಬಹುದು. ಇಂತಹ ಅಸಾಧ್ಯ ಸನ್ನಿವೇಶಗಳನ್ನು ಎದುರಿಸುವ ಸಾಮರ್ಥ್ಯ ಕೇವಲ ಪ್ರವಾದಿಗಳಿಗಿತ್ತು. ಅವರು ಕೂಡ ಕ್ಲೇಶ ಹಾಗೂ ತಾಪತ್ರಯಗಳನ್ನು ಅನುಭವಿಸಬೇಕಾಯಿತು. ವಿವೇಚನಾ ಶೂನ್ಯತೆ ಮತ್ತು ಬುದ್ಧಿಹೀನತೆ ಆವರಿಸಿ ಧೋರಣೆಗಳು ಮಡುಗಟ್ಟಿದಾಗ ಸುಧಾರಕರ ಕೆಲಸ ಬಲು ದುಸ್ತರವಾಗುತ್ತದೆ.




ಆದರೆ ಇಂದಿನ ಸ್ಥಿತಿ ಹಿಂದಿಗಿಂತಲೂ ಕೆಟ್ಟದಾಗಿದೆ. ಮುಸ್ಲಿಮರು ಅವರ ಕೋಮುವಾದಕ್ಕೆ ಗಟ್ಟಿಯಾಗಿ ಅತು ಕೊಂಡಿದ್ದಾರೆ. ಅವರಿಗೆ ಧರ್ಮಕ್ಕಿಂತಲೂ ರಾಜಕೀಯವೇ ಮುಖ್ಯವಾಗಿದೆ. ಅದೊಂದು ಧರ್ಮದ ಆದೇಶವೋ ಎಂಬಂತೆ ಐಹಿಕ ಮಹತ್ವಾಕಾಂಕ್ಷೆಗಳ ಹಿಂದೆ ಬಿದ್ದಿದ್ದಾರೆ. ನಾವು ಇತಿಹಾಸದ ಪ್ರತಿಯೊಂದು ಯುಗದಲ್ಲೂ ಒಳಿತನ್ನು ಎಡೆಬಿಡದೆ ಹಿಂಬಾಲಿಸಿದವರನ್ನು ಅವಹೇಳನ ಮಾಡಿದೆವು, ತ್ಯಾಗದ ಶ್ರೇಷ್ಠ ನಿದರ್ಶನಗಳನ್ನು ಹೊಸಕಿಹಾಕಿದೆವು, ನಿಸ್ವಾರ್ಥ ಸೇವೆಯ ಪತಾಕೆಗಳನ್ನು ಚಿಂದಿಮಾಡಿದೆವು. ಸಂಪ್ರದಾಯ, ಪದ್ಧತಿಗಳ ಪಾಲಕರು ಉನ್ನತಮಟ್ಟದ ಪ್ರವಾದಿಗಳನ್ನೇ ಬಿಟ್ಟಿಲ್ಲವೆಂದಿರುವಾಗ ನಮ್ಮಂತಹ ಹುಲುಮಾನವರು ಯಾವ ಲೆಕ್ಕ ?

**ಪ್ರಶ್ನೆ : ನಿಮ್ಮ ನಿಯತಕಾಲಿಕ ಅಲ್-ಹಿಲಾಲ್‌ನ್ನು ಬಹಳ ಕಾಲದ ಹಿಂದೆಯೇ ನಿಲ್ಲಿಸಿ ಬಿಟ್ಟಿರಿ. ಅದು ಬೌದ್ಧಿಕಶೂನ್ಯತೆಯಲ್ಲೇ ಮುಳುಗಿದ್ದ ಮುಸ್ಲಿಮರಿಂದ ನಿರಾಶೆಗೊಳಗಾಗಿಯೇ ಅಥವಾ ಮರುಭೂಮಿಯಲ್ಲಿ ಅಜ಼ಾನ್ ಹೇಳುತ್ತಿರುವ ಅನುಭವವಾಯಿತೇ ?**

**ಉತ್ತರ :** ಅಲ್-ಹಿಲಾಲ್ ನಿಲ್ಲಿಸಿದ್ದು ಅದರ ಸತ್ಯದಲ್ಲಿ ವಿಶ್ವಾಸ ಕಳೆದುಕೊಂಡದ್ದಕ್ಕಾಗಿ ಅಲ್ಲ. ಅದು ಮುಸ್ಲಿಮರ ದೊಡ್ಡ ವರ್ಗವೊಂದರಲ್ಲಿ ಗಣನೀಯ ಪ್ರಮಾಣದ ಅರಿವು ಮೂಡಿಸಿತು. ಅವರು ಇಸ್ಲಾಂನಲ್ಲಿನ, ಮಾನವ ಸ್ವಾತಂತ್ರ್ಯದಲ್ಲಿನ ಮತ್ತು ಋಜುಮಾರ್ಗದ ಗುರಿಗಳನ್ನು ನಿರಂತರವಾಗಿ ಪಾಲಿಸುವಲ್ಲಿನ ತಮ್ಮ ನಂಬಿಕೆಗಳಿಗೆ ಪುನರ್ಜೀವ ಕೊಟ್ಟರು. ವಾಸ್ತವದಲ್ಲಿ ಆ ಅನುಭವ ನನ್ನ ಜೀವನವನ್ನೇ ಹೆಚ್ಚು ಶ್ರೀಮಂತವಾಗಿಸಿತು. ಪ್ರವಾದಿಯ ಸಂಗಡ ಕಲಿಯುವ ಸೌಭಾಗ್ಯವಿದ್ದವರಿಗೆ ಯಾವ ಅನುಭವ ಆಗಿತ್ತೋ ಅದೇ ತೆರನಾದ ಅನುಭವ ನನಗಾಗಿತ್ತು. ನನ್ನ ಸ್ವರವೇ ನನಗೆ ಮೋಡಿ ಮಾಡಿತು. ಅದರ ಪರಿಣಾಮವಾಗಿ ನಾನು ಫೀನಿಕ್ಸ್ ಹಕ್ಕಿ (ಸುಟ್ಟ ನಂತರ ಮರುಜೀವ ಪಡೆಯುವ ಒಂದು ಕಾಲ್ಪನಿಕ ಹಕ್ಕಿ)ಯಂತೆ ಸುಟ್ಟುಹೋದೆ. ಅಲ್-ಹಿಲಾಲ್ ಅದರ ಉದ್ದೇಶವನ್ನು ಸಾಧಿಸಿತ್ತು. ನವಯುಗವೊಂದು ಮೂಡುತ್ತಿತ್ತು. ನಾನು ಪರಿಸ್ಥಿತಿಯ ಮರುಅವಲೋಕನ ಮಾಡಿ ನನ್ನೆಲ್ಲಾ ಸಮಯ ಮತ್ತು ಶಕ್ತಿಯನ್ನು ದೇಶದ ಸ್ವಾತಂತ್ರ್ಯ ಗಳಿಕೆಗೆ ಮುಡುಪಾಗಿಡಲು ನಿರ್ಧರಿಸಿದೆ. ಏಷಿಯ, ಆಫ್ರಿಕಾಗಳ ಸ್ವಾತಂತ್ರ್ಯ ಬಹುತೇಕ ಮಟ್ಟಿಗೆ ಭಾರತದ ಸ್ವಾತಂತ್ರ್ಯದ ಮೇಲೆ ಅವಲಂಬಿಸಿದೆ ಮತ್ತು ಭಾರತದ ಸ್ವಾತಂತ್ರ್ಯದ ಹೆಬ್ಬಾಗಿಲನ್ನು ತೆರೆಯುವ ಕೀಲಿಕೈ ಹಿಂದೂ ಮುಸ್ಲಿಂ ಒಗ್ಗಟ್ಟೆಂಬುದೇ ನನ್ನ ದೃಢನಂಬಿಕೆಯಾಗಿತ್ತು.

ಭಾರತ ಸ್ವತಂತ್ರವಾಗುವುದು ವಿಧಿಲಿಖಿತ ಮತ್ತು ಜಗತ್ತಿನ ಯಾವ ಶಕ್ತಿಗೂ ಅದನ್ನು ನಿರಾಕರಿಸಲು ಸಾಧ್ಯವಿಲ್ಲವೆಂಬುದನ್ನು ಪ್ರಥಮ ಮಹಾಯುದ್ಧಕ್ಕೂ ಮೊದಲೇ ಅರಿತಿದ್ದೆ. ಮುಸ್ಲಿಮರ ಪಾತ್ರದ ಕುರಿತಾಗಿಯೂ ನನ್ನ ಮನಸ್ಸಿನಲ್ಲಿ ಸ್ಪಷ್ಟ ಕಲ್ಪನೆ ಇತ್ತು. ಮುಸ್ಲಿಮರು ತಮ್ಮ ದೇಶವಾಸಿಗಳ ಜೊತೆ ಹೆಜ್ಜೆಹಾಕಲು ಕಲಿಯುವರು ಮತ್ತು ಭಾರತೀಯರು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದಾಗ ಮುಸ್ಲಿಮರು ವೀಕ್ಷಕರಾಗಿದ್ದರೆಂದು ಹೇಳುವ ಅವಕಾಶವನ್ನು ಇತಿಹಾಸಕ್ಕೆ ಕೊಡಲಾರರೆಂಬುದೇ ನನ್ನ ಹೆಬ್ಬಯಕೆ. ಮುಸ್ಲಿಮರು ತೆರೆಗಳ ವಿರುದ್ಧ ಹೋರಾಡುವುದನ್ನು ಬಿಟ್ಟು ಸ್ವಾತಂತ್ರ್ಯ ಹೋರಾಟಗಾರರ ದೋಣಿಗಳು ಮುಳುಗು ತ್ತಿರುವುದನ್ನು ದಡದಲ್ಲಿ ನಿಂತುಕೊಂಡು ಆನಂದಿಸುತ್ತಿದ್ದರೆಂದು ಯಾರೂ ಹೇಳದಿರಲಿ.

*  *  *

*(ಕೃಪೆ : ಜನವರಿ ೨೦೦೦ರ 'ಕಮ್ಯೂನಲಿಸಂ ಕಾಂಬ್ಯಾಟ್'ನಲ್ಲಿ ಪ್ರಕಟವಾದ ಕವರ್ಟ್‌ನ ಸಂದರ್ಶನ ಲೇಖನ.)*

**ಸುರೇಶ್ ಭಟ್ ಬಾಕ್ರಬೈಲ್**
[illegible], ಮಂಗಳೂರು - [illegible]



**ಚೆನ್ನವೀರ ಕಣವಿ**
**(ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರು)**
*ಡಾ|| ಗುರುಲಿಂಗ ಕಾಪಸೆ*
**ಪುಟ : ೧೨೦**
**ಬೆಲೆ : ರೂ. ೬೦**
**ನವಕರ್ನಾಟಕ ಪ್ರಕಾಶನ**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೪, ಬೆಂಗಳೂರು - ೧

ಕನ್ನಡದ ಖ್ಯಾತ ಕವಿಗಳಲ್ಲಿ ಒಬ್ಬರಾದ ಶ್ರೀ ಚೆನ್ನವೀರ ಕಣವಿಯವರು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ಪಂಪ ಪ್ರಶಸ್ತಿಯನ್ನು ಗಳಿಸಿದ್ದು ನಾಡೋಜ ಎಂಬ ಗೌರವಕ್ಕೂ ಪಾತ್ರರಾಗಿದ್ದಾರೆ. ಅವರಿನ್ನೂ ವಿದ್ಯಾರ್ಥಿಯಾಗಿದ್ದಾಗ ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತವಾಗಿ ಬ್ರಿಟಿಷರು ಇಲ್ಲಿಂದ ಕಾಲ್ತೆಗೆದರು. ಅಂದಿನ ದೇಶಪ್ರೇಮಿ ಕಣವಿಯವರ ಒಂದು ಕವನದ ಸಾಲು ಹೀಗಿದೆ: ''ಮುಳುಗುತಿಹ ನೇಸರನು ಮುದಿಸಿಂಹನಂತಾಗಿ ಪಶ್ಚಿಮಾದ್ರಿಯ ಗವಿಯ ಸೇರುತಿಹನು, ಸಂಜೆಗತ್ತಲ ಮಬ್ಬು ಗಗನ ಸಿಂಹಾಸನದಿ ಕಪ್ಪು ಬಾವುಟವೆತ್ತಿ ತೋರಿಸಿಹುದು''. ಪ್ರಕೃತಿಯ ಒಡನಾಟದೊಂದಿಗೆ ಬೆಳೆದ ಕಣವಿಯವರ ಕವಿತೆಗಳಲ್ಲಿ ಸಹಜವಾಗಿ ಅಂದಿನ ಹಳ್ಳಿಯ ಜೀವನದ ನೈಜವಾದ ಚಿತ್ರಣ ಮತ್ತು ನಿಸರ್ಗದ ಉಪಾಸನೆ ಸೊಗಸಾಗಿ ಮೂಡಿಬಂದಿದೆ. ಅವರ ಸಾಹಿತ್ಯದ ವಿಶ್ಲೇಷಣೆ ಮತ್ತು ಬದುಕಿನ ವಿವರಗಳನ್ನು ನೀಡಲಾಗಿದೆ.



**ಉರಿಯ ಪೇಟೆ (ವೈಚಾರಿಕ ಮತ್ತು ಸಂಸ್ಕೃತಿ ವಿಮರ್ಶೆ)**
*ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ*
**ಪುಟ : ೧೧೬**
**ಬೆಲೆ : ರೂ. ೬೦**
**ಲಡಾಯಿ ಪ್ರಕಾಶನ**
ನಂ. ೨೧, ಪ್ರಸಾದ ಹಾಸ್ಟೆಲ್
ಗದಗ - ೫೮೨ ೧೦೧

ಇಂದು ವ್ಯಾಪಾರಿ ಮನೋಭಾವ ಮನುಷ್ಯರ ನಡುವಿನ ಮಧುರ ಸಂಬಂಧಗಳನ್ನು ಅಳಿಸಿಹಾಕುತ್ತಿದೆ. ಜಾಗತೀಕರಣದಿಂದಾಗಿ ಒಂದು ಉತ್ಪಾದನಾ ವಸ್ತುವಿಗೆ ಜಗತ್ತಿನೆಲ್ಲೆಡೆ ಗ್ರಾಹಕರಿರುತ್ತಾರೆ. ಹೆಚ್ಚು ಬೆಲೆ ಕೊಡುವವನು ಮೊದಲ ಗ್ರಾಹಕನಾಗುತ್ತಾನೆ. ಹಿಂದೆ ರಾಷ್ಟ್ರೀಕರಣದತ್ತ ಹೆಜ್ಜೆ ಹಾಕುತ್ತಿದ್ದ ಭಾರತ ಇಂದು ಹಠಾತ್ತಾಗಿ ಖಾಸಗೀಕರಣದತ್ತ ಒಲಿಯುತ್ತಿದೆ. ಇವೆಲ್ಲ ನಡೆಯುತ್ತಿರುವುದು ಅಭಿವೃದ್ಧಿ, ಪ್ರಗತಿಯ ಹೆಸರಿನಲ್ಲಿ. ನಮ್ಮಲ್ಲಿ ಬೆಳೆದ ಹಣ್ಣು ವಿದೇಶಕ್ಕೆ ರವಾನೆಯಾಗಿ ಆಸ್ಟ್ರೇಲಿಯದ ಸೇಬು ನಮ್ಮಲ್ಲಿ ಮಾರಾಟವಾಗುತ್ತಿದೆ. ಪರಿಣಾಮ ಬೆಲೆ ಏರಿಕೆಯ ಬಿಸಿಗೆ ಮಾರುಕಟ್ಟೆ ಹೊತ್ತಿ ಉರಿಯುತ್ತಿವೆ. ಇಂತಹ ಸಾಮಾಜಿಕ ಕಾಳಜಿಗಳನ್ನು ಇಲ್ಲಿನ ಕೆಲವು ಲೇಖನಗಳು ಮನಗಾಣಿಸುತ್ತವೆ. ಇಲ್ಲಿನ ಬರಹಗಳಲ್ಲಿ ವಿಷಯವೈವಿಧ್ಯಗಳಿದ್ದರೂ, ಅಂತಿಮವಾಗಿ ಅವು ಇಂದಿನ ಹದಗೆಟ್ಟ ಪರಿಸ್ಥಿತಿಗಳತ್ತ, ಯುವಜನತೆಯ ಅಸಹಾಯಕತೆಯತ್ತ ಕೈಮಾಡಿ ತೋರುತ್ತವೆ.

**ಅರಿವಿನ ಆಡುಂಬೊಲ (ಕ್ವಿಟ್ ಇಂಡಿಯಾ ಸೆರೆಮನೆ ದಿನಚರಿ)**
*ಕನ್ನಡಕ್ಕೆ : ರೋಸಿ ಡಿ'ಸೋಜಾ; ಸಂ. : ಸುಗತ ಶ್ರೀನಿವಾಸರಾಜು*
**ಪುಟ : ೧೦೪** **ಬೆಲೆ : ರೂ. ೭೫**
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೪, ಬೆಂಗಳೂರು - ೫೬೦ ೦೦೧

ಇದು ಎಚ್. ವೈ. ಶಾರದಾ ಪ್ರಸಾದ್ ಸೆರೆಮನೆಯಲ್ಲಿ ಬರೆದ ದಿನಚರಿಯ ಕನ್ನಡಾನುವಾದ. ಭಾರತದ ಮೂವರು ಪ್ರಧಾನ ಮಂತ್ರಿಗಳಿಗೆ ಸುದ್ದಿ ಸಲಹೆಗಾರರಾಗಿದ್ದು, ಬಹುಮುಖ ಪ್ರತಿಭಾವಂತರೂ ಆಗಿದ್ದ ಶಾರದಾ ಪ್ರಸಾದರನ್ನು ಒಂದೆರಡು ಮಾತುಗಳಲ್ಲಿ ಪರಿಚಯಿಸುವುದು ಆಗದ ಮಾತು. ಸಾವಿರಾರು ಕನಸುಗಳನ್ನು ತುಂಬಿಕೊಂಡ ಯುವಕನೊಬ್ಬ ಐತಿಹಾಸಿಕ 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಭಾಗಿಯಾಗಿ ಸೆರೆಮನೆಗೆ ತಳ್ಳಲ್ಪಟ್ಟಾಗ ಆತ ಬರೆದ ದಿನಚರಿ ಹೇಗಿರಬಹುದು? ಜೈಲಿನಂತಹ ಪರಿಸರದಲ್ಲಿ ಇತರ ರಾಜಕೀಯ ಕೈದಿಗಳೊಂದಿಗೆ ದಿನ ಕಳೆಯಬೇಕಾಗಿಬಂದಾಗ ಅಲ್ಲಿನ ಆಗುಹೋಗುಗಳು ಮತ್ತು ದೈನಂದಿನ ವ್ಯವಹಾರಗಳ ಸೂಕ್ಷ್ಮತೆ ತಾನೇ ತಾನಾಗಿ ಅರಿವಿಗೆ ಬರತೊಡಗಿತು. ಅದರೊಂದಿಗೆ ತಳಕು ಹಾಕಿಕೊಂಡಿರುವ ಪಕ್ಷ ರಾಜಕೀಯದ ನಡೆನುಡಿಗಳೂ ಮುಸುಕು ಸರಿಸಿ ನಿಜರೂಪ ತೋರುತ್ತವೆ. ಒಟ್ಟಾರೆ ಸೆರೆಮನೆ ವಾಸವೊಂದು ತಾನಂದುಕೊಂಡಂತಿಲ್ಲದ, ತಾನು ನಂಬಿರುವಂಥದಲ್ಲದ ಹೊಸ ವಿಚಾರಗಳನ್ನು ಶೋಧಿಸಿಕೊಡುತ್ತದೆ. ಹೀಗೆ ಶಾರದಾ ಪ್ರಸಾದರಿಗೆ ತಮ್ಮ ಜವಾಬ್ದಾರಿಯ ಅರಿವನ್ನು ಮೂಡಿಸಿದ ಒಂದು ಸ್ಥಳವನ್ನಾಗಿ ಸೆರೆಮನೆಯನ್ನು ಇಲ್ಲಿ ವಿಶ್ಲೇಷಿಸಬಹುದು.



**ಭಾಷಾಂತರ ಭಾರತಿ**
*ಡಾ|| ಸಿ. ಪಿ. ಕೆ.*
**ಪುಟ : ೨೭೨** **ಬೆಲೆ : ರೂ. ೧೫೦**
**ಶ್ರೀ ಲಲಿತಾ ಬುಕ್ ಬ್ಯೂರೊ**, 'ಅಂಜನಾದ್ರಿ', ರೇಣುಕಾಚಾರ್ಯ ದೇವಸ್ಥಾನದ ರಸ್ತೆ
ಲಕ್ಷ್ಮಿ ಟಾಕೀಸ್ ಹಿಂಭಾಗ, ಮೈಸೂರು - ೫೭೦ ೦೨೪

ಸಿ.ಪಿ.ಕೆ.ಯವರ ಈ ಕೃತಿ ಭಾಷಾಂತರ ಕಲೆಗೆ ಸಂಬಂಧಿಸಿದ್ದು. ಯಾವುದೇ ಒಂದು ಸಾಹಿತ್ಯಕೃತಿ ಅನುವಾದಗೊಳ್ಳುವುದೆಂದರೆ ಅದರ ಸತ್ವವನ್ನು ಮೂಲದಲ್ಲಿರುವಂತೆಯೇ ಪಡಿಮೂಡಿಸುವುದು ಎಂದರ್ಥ. ಅಲ್ಲಿ ಯಾವುದೇ ಲೋಪ ಸಲ್ಲದು. ಒಂದು ಭಾಷಾ ಸೌಂದರ್ಯಕ್ಕೆ ಸೀಮಿತವಾಗಿದ್ದ ಕೃತಿ ಅಷ್ಟು ಸುಲಭವಾಗಿ ತನ್ನೆಲ್ಲವನ್ನೂ ಬಿಟ್ಟುಕೊಡಲು ಸಿದ್ಧವಿರುವುದಿಲ್ಲ. ಹೆಚ್ಚಿನ ಸಂದರ್ಭದಲ್ಲಿ ಅದು ರೂಪಾಂತರಗೊಳ್ಳಬಹುದಷ್ಟೇ. ಎರಡೂ ಭಾಷೆಗಳಲ್ಲಿ ಸಂಪೂರ್ಣ ಹಿಡಿತವಿಲ್ಲದಿದ್ದರೆ ಅನುವಾದಕರಿಗೆ ಅಡಿಗಡಿಗೆ ತೊಡಕು ಕಟ್ಟಿಟ್ಟದ್ದೇ. ಆದರೂ ಕೆಲವೊಮ್ಮೆ ಅನುವಾದವು ಮೂಲವನ್ನೇ ಮಂಕಾಗಿಸುವಷ್ಟು ಪ್ರಖರವಾಗಿದ್ದು ಅಚ್ಚರಿ ಮೂಡಿಸುವುದೂ ಇದೆ. ಪ್ರಸ್ತುತ ಪುಸ್ತಕದಲ್ಲಿ ಪ್ರಾಚೀನ ಸಂಸ್ಕೃತ ಸಾಹಿತ್ಯದಿಂದ ಕನ್ನಡಕ್ಕಾಗಮಿಸಿದ ಕಾವ್ಯಧಾರೆ ಕುರಿತು ಸಾಕಷ್ಟು ಉದಾಹರಣೆಗಳ ಸಹಿತ ತುಲನೆ ಮಾಡಲಾಗಿದೆ. ಸಂಸ್ಕೃತದ ಮೂಲಪದ್ಯಗಳನ್ನೂ, ಅನುವಾದಗಳನ್ನೂ ಇಲ್ಲಿ ಸಂಗ್ರಹಿಸಿ ಬಳಸಲಾಗಿದೆ. ಇನ್ನೊಂದು ಮಾತು – ಎಲ್ಲ ಕೃತಿಗಳೂ ಭಾಷಾಂತರಕ್ಕೆ ಬಗ್ಗುವುದಿಲ್ಲ; ಹಾಗೇನಾದರೂ ಬಗ್ಗಿಸಹೊರಟರೆ 'ಭಾಷಾಂತರಕಾರ - ಮೂಲಕೃತಿಯ ಕೊಲೆಗಾರ' ಎಂಬ ಹಣೆಪಟ್ಟಿ ನಿಶ್ಚಿತ. ಮೂಲದ ಘನತೆಯೇ ಬೇರೆ, ಭಾಷಾಂತರದ ಅವಾಂತರವೇ ಬೇರೆ. ಅನುವಾದಕರೆಲ್ಲ ಇದನ್ನು ಖಂಡಿತ ಓದಬೇಕು.

**ಗೋಸಾಯಿಗಳ ಜನಾಂಗೀಕ ಅಧ್ಯಯನ**
*ಡಾ|| ಅಶೋಕ ನರೋಡೆ*
**ಪುಟ : xvi + ೬೮ = ೮೪** **ಬೆಲೆ : ರೂ. ೫೫**
**ಕುಕ್ಕೆಶ್ರೀ ಪ್ರಕಾಶನ**, ನಂ. ೨೧, ಮಾಚೋಹಳ್ಳಿ ಕಾಲೋನಿ, ವಿಶ್ವನೀಡಮ್ ಅಂಚೆ
ಬೆಂಗಳೂರು ಉತ್ತರ ತಾಲೂಕು, ಬೆಂಗಳೂರು - ೫೬೦ ೦೯೧



ಗೋಸಾವಿ ಅಥವಾ ಗೋಸಾಯಿ ಜನಾಂಗವೊಂದರ ಪರಿಚಯ ಮಾಡಿಕೊಡುವ ಪುಸ್ತಕವಿದು. ಮಹಾರಾಷ್ಟ್ರ - ಕರ್ನಾಟಕ ಗಡಿ ಪ್ರದೇಶಗಳಲ್ಲಿ ಕಂಡುಬರುವ ತೀರ ಹಿಂದುಳಿದ ಬುಡಕಟ್ಟಿನ ಇವರ ಬದುಕು ತುಂಬ ದಾರುಣ - ಅತಂತ್ರ. ಅಲೆಮಾರಿಗಳಾಗಿ, ಚಿಂದಿ ಆಯುವವರಾಗಿ ಊರೂರು ಅಲೆಯುತ್ತ ರಸ್ತೆಬದಿಗಳಲ್ಲಿ ಚಿಕ್ಕಪುಟ್ಟ ವ್ಯಾಪಾರ ಮಾಡುತ್ತ ಹೇಗೋ ತಮ್ಮ ಹೊಟ್ಟೆಪಾಡು ನೋಡಿಕೊಳ್ಳುತ್ತಾರೆ. ಮುಗ್ಧ ಸ್ವಭಾವದ ಇವರು ಸೋಮಾರಿಗಳಲ್ಲ, ನಸುಕಿನಲ್ಲಿಯೇ ದುಡಿತ ಪ್ರಾರಂಭ. ಎಷ್ಟೇ ಕಷ್ಟ ಬಂದರೂ ಭಿಕ್ಷೆ ಬೇಡುವುದಿಲ್ಲ, ಕಳ್ಳತನ ಮಾಡುವುದಿಲ್ಲ ಎಂಬುದಾಗಿ ಈ ಜನರ ಅಧ್ಯಯನ ಮಾಡಿದ ಡಾ|| ನರೋಡೆ ತಿಳಿಸುತ್ತಾರೆ. ಇವರ ಜೀವನ ಕ್ರಮ, ಆಚರಣೆ, ನಂಬಿಕೆಗಳು, ಸಂಪ್ರದಾಯಗಳನ್ನೆಲ್ಲ ಇಲ್ಲಿ ವಿವರವಾಗಿ ತಿಳಿಸಿದ್ದಾರೆ. ಇತ್ತೀಚೆಗೆ ಕೆಲವು ಕುಟುಂಬಗಳು ನಾಗರಿಕತೆಗೆ ಒಲಿಯುತ್ತಿದ್ದು ಅನೇಕ ಸಂಘಸಂಸ್ಥೆಗಳ ನೆರವಿನಿಂದ ಮುಖ್ಯವಾಹಿನಿಗೆ ಸೇರ್ಪಡೆಯಾಗುತ್ತಿದ್ದು ಬದಲಾವಣೆಯ ಅಲೆ ಪ್ರಾರಂಭವಾಗಿದೆ. ಜನಾಂಗೀಯ ಅಧ್ಯಯನ, ಬುಡಕಟ್ಟು ಸಂಸ್ಕೃತಿ ಮತ್ತು ಸಮಾಜಶಾಸ್ತ್ರೀಯ ಅಧ್ಯಯನದ ಆಸಕ್ತಿ ಇರುವವರಿಗೆ ಕೆಲವು ಮಾಹಿತಿಗಳು ಇಲ್ಲಿವೆ.

– ಇಂದಿರಾಕುಮಾರಿ
೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ಒಂದು ಎನ್‌ಕೌಂಟರ್ ಕುರಿತು




ಕರ್ನಾಟಕದ ಪಶ್ಚಿಮ ಘಟ್ಟದ ತಪ್ಪಲಿನಲ್ಲಿರುವ ಕರಾವಳಿಯ ಉಡುಪಿ, ಕುಂದಾಪುರ, ಕಾರ್ಕಳ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕಿನ ಕೆಲವು ಭಾಗಗಳನ್ನು 'ನಕ್ಸಲ್‌ಪೀಡಿತ' ಎಂದು ಕರೆಯುವುದು ಈಗ ಒಂದು ವಾಗ್ರೂಢಿಯೇ ಆಗಿಹೋಗಿದೆ. ಪೀಡೆಯ ಮಾತಿಗೆ ಬಂದರೆ ರಾಜ್ಯದ ಇತರ ಭಾಗಗಳಂತೆ ಈ ಜಿಲ್ಲೆಗಳ ಜನರನ್ನು ಬಡತನ, ಅಸಮಾನತೆ, ಅನಕ್ಷರತೆ, ಅನಾರೋಗ್ಯ, ನಿರುದ್ಯೋಗ ಮುಂತಾದ ಬವಣೆಗಳೂ ಪೀಡಿಸುತ್ತಿವೆ. ಇವಕ್ಕೆ ಹೋಲಿಸಿದರೆ 'ನಕ್ಸಲ್‌ಪೀಡೆ' ಏನೂ ಅಲ್ಲ. ಆದಾಗ್ಯೂ ಕರ್ನಾಟಕದ ಮಲೆನಾಡು ಮತ್ತು ಪಶ್ಚಿಮ ಘಟ್ಟದ ತಪ್ಪಲು ಪ್ರದೇಶ 'ನಕ್ಸಲ್‌ಪೀಡಿತ' ಎಂದು ರಾಷ್ಟ್ರಮಟ್ಟದಲ್ಲಿ ಸಹ ಈಗ ಗುರುತಿಸಲ್ಪಟ್ಟಿದ್ದು ಮಾಧ್ಯಮಗಳಲ್ಲಿ ಸದಾ ಸುದ್ದಿಯಲ್ಲಿ ಇರುತ್ತದೆ. ಪಶ್ಚಿಮ ಘಟ್ಟದ ಕಾಡುಗಳಲ್ಲಿ ಎಷ್ಟು ಜನ ನಕ್ಸಲೀಯರು ತಲೆಮರೆಸಿಕೊಂಡಿದ್ದಾರೆ? ಅವರ ಬಳಿ ಇರುವ ಶಸ್ತ್ರಾಸ್ತ್ರಗಳೇನು? ಈ ನಕ್ಸಲೀಯರು ದುಡ್ಡು ಹೇಗೆ ಹೊಂದಿಸಿಕೊಳ್ಳುತ್ತಾರೆ? ಈ ಕುರಿತು ಖಚಿತ ಮಾಹಿತಿ ಯಾರ ಬಳಿಯೂ ಇಲ್ಲ. ಯಾವುದೋ ಕುಗ್ರಾಮದ ಬಸ್ ಸ್ಟ್ಯಾಂಡ್ ಗೋಡೆಯ ಮೇಲೆ ತಮ್ಮ ಕರಪತ್ರ (ಪೋಸ್ಟರ್ ಕೂಡ ಅಲ್ಲ) ಅಂಟಿಸಿದ್ದಾರೆ, ಯಾರದ್ದೋ ಮನೆಗೆ ನುಗ್ಗಿ, ನಡುರಾತ್ರಿಯಲ್ಲಿ ಊಟ ಬಡಿಸಿ ಎಂದು ಒತ್ತಾಯಿಸಿದ್ದಾರೆ, ಇನ್ನಾವುದೋ ಸ್ಥಳದಲ್ಲಿ ಸಭೆ ನಡೆಸಿದ್ದಾರೆ, ಇವೇ ಮುಂತಾದ ವರದಿ ರೂಪದ ವದಂತಿಗಳೇ ಕನ್ನಡದಲ್ಲಿ ನಕ್ಸಲೀಯರ ಬಗ್ಗೆ ಸದ್ಯಕ್ಕೆ ಲಭ್ಯವಿರುವ ಏಕೈಕ ಮಾಹಿತಿ. ಕರ್ನಾಟಕದ ನಕ್ಸಲೀಯರು ಯಾವುದಾದರೂ ರಾಜಕೀಯ ಸಂಘಟನೆಯ ಸದಸ್ಯರೇ, ಅಥವಾ ಅವರದ್ದೇ ಒಂದು ಸಂಘಟನೆ ಇದೆಯೆ ಎಂದು ಕೂಡ ಯಾರಿಗೂ ಗೊತ್ತಿಲ್ಲ. ಈ ನಕ್ಸಲೀಯರು ತಮ್ಮನ್ನು ತಾವು ಹೇಗೆ ಗುರುತಿಸಿಕೊಳ್ಳುತ್ತಾರೆ? ಖಂಡಿತವಾಗಿಯೂ 'ನಕ್ಸಲೀಯ' ಎಂದಲ್ಲ. ಆ ಹೆಸರಿನ ಸಂಘಟನೆ ದೇಶದಲ್ಲಿ ಎಲ್ಲಿಯೂ ಇಲ್ಲ. ಪಶ್ಚಿಮ ಬಂಗಾಳದ ನಕ್ಸಲ್‌ಬಾರಿ ಎಂಬ ಊರಿನಲ್ಲಿ ಪ್ರಾರಂಭವಾದ ಚಳುವಳಿ ಎಂದು ಸೂಚಿಸುವುದನ್ನು ಬಿಟ್ಟರೆ 'ನಕ್ಸಲೀಯ' ಎಂಬ ಹೆಸರಿಗೆ ಯಾವ ಮಹತ್ವವೂ ಇಲ್ಲ. ಪೊಲೀಸ್ ಮಾಹಿತಿ, ಮಾಧ್ಯಮದ ವರದಿಗಳು ಮತ್ತು ಮಾವೋವಾದಿ ಕಮ್ಯುನಿಸ್ಟ್ ಪಕ್ಷದ ಅಧಿಕೃತ ಹೇಳಿಕೆಗಳನ್ನು ಹೊರತುಪಡಿಸಿ ನಕ್ಸಲೀಯ ಚಳುವಳಿಯನ್ನು ಪರಿಚಯಿಸುವ 'ವಸ್ತುನಿಷ್ಠ' ಬರಹಗಳು ಕನ್ನಡದಲ್ಲಿ ಇಲ್ಲವೇ ಇಲ್ಲ ಎಂದು ಹೇಳಬಹುದು. ಚಳುವಳಿಯೊಂದರ ಖಚಿತ ಮಾಹಿತಿಯೇ ದೊರೆಯದಂತಹ ಸ್ಥಿತಿಯಲ್ಲಿ ಅದರ ಕುರಿತು ನಡೆಯುವ ವಾಗ್ವಾದ ನೀತಿಬೋಧೆಯಿಂದ ಪ್ರಾರಂಭವಾಗಿ, ಕೊನೆಗೆ ವಾದದಲ್ಲಿ ತನ್ನ ಎದುರಾಳಿ ಹಿಂಸೆಯ ಪರ, ತಾನಾದರೋ ಅಹಿಂಸಾವಾದಿ ಎಂಬ ಆತ್ಮಸಮರ್ಥನೆಯಲ್ಲಿ ಮುಗಿಯುವುದು ಅನಿವಾರ್ಯ. ಇದರಿಂದ ಯಾರಿಗೂ ಪ್ರಯೋಜನವಿಲ್ಲ.

'ನಕ್ಸಲ್‌ಪೀಡೆ' ಕುರಿತ ಈ ಬಗೆಯ ವಾದವಿವಾದ ಏನೇ ಇರಲಿ, ಪೀಡೆ ಎನ್ನುವಷ್ಟು ದೊಡ್ಡ ಸಂಖ್ಯೆಯಲ್ಲಾದರೂ ಅವರು ಇದ್ದಾರೆಯೇ? ಕರಾವಳಿಯ ಜಿಲ್ಲೆಗಳಲ್ಲಿ ಮತ್ತು ಮಲೆನಾಡಿನಲ್ಲಿ ಕೆಲವೆಡೆ ಕಳೆದ ಕೆಲವು ವರ್ಷಗಳಲ್ಲಿ ಹಿಂದುತ್ವವಾದಿಗಳು ನಡೆಸಿದಷ್ಟು ಹಿಂಸಾಚಾರವನ್ನು ನಕ್ಸಲೀಯರು ಯಾವತ್ತೂ ಎಲ್ಲಿಯೂ ನಡೆಸಿಲ್ಲ. ಪ್ರತಿ ಚುನಾವಣೆಗೂ ಮೊದಲು, ಈ ಪ್ರದೇಶದಲ್ಲಿ ನಕ್ಸಲೀಯ ಹಿಂಸಾಚಾರ ನಡೆಯಬಹುದು ಎಂಬ ನಿರೀಕ್ಷೆಯಲ್ಲಿ ಪೊಲೀಸರು ಭಾರೀ ಬಂದೋಬಸ್ತು ನಡೆಸುತ್ತಾರೆ; ಮಾಧ್ಯಮಗಳೂ ಆ ಬಗ್ಗೆ ಮುಂಚಿತವಾಗಿಯೇ ಆತಂಕ ಹುಟ್ಟುಹಾಕುತ್ತವೆ. ಆದರೆ ಕರ್ನಾಟಕದಲ್ಲಿ ಲೋಕಸಭೆಯಿಂದ ಹಿಡಿದು ಗ್ರಾಮಪಂಚಾಯತ್ ಚುನಾವಣೆಗಳವರೆಗೆ ನಡೆಯುವ ಯಾವ ಚುನಾವಣೆಯಲ್ಲಿಯೂ ಎಲ್ಲಿಯೂ ನಕ್ಸಲೀಯರ ವತಿಯಿಂದ ಹಿಂಸೆ ಬಿಡಿ, ಸಾಂಕೇತಿಕ ಪ್ರತಿರೋಧ ಸಹ ನಡೆದಿಲ್ಲ. ಹಾಗಿದ್ದೂ 'ನಕ್ಸಲ್ ಪೀಡಿತ' ಎಂಬ ನುಡಿಗಟ್ಟನ್ನು ಮಾತ್ರ ಮಾಧ್ಯಮಗಳು ನಿರಂತರ ಚಲಾವಣೆಯಲ್ಲಿ ಇರುವಂತೆ ನೋಡಿಕೊಂಡಿವೆ. ಕರಾವಳಿಯಲ್ಲಿ ಕುಂದಾಪುರ ತಾಲ್ಲೂಕಿನ ಹಳ್ಳಿಹೊಳೆಯಿಂದ ಹಿಡಿದು ಉಡುಪಿ ಜಿಲ್ಲೆಯ ಹೆಬ್ರಿ, ಮುದ್ರಾಡಿ, ಮುನಿಯಾಲು, ಕಾರ್ಕಳ, ಈದು, ನಾರಾವಿ ಮಾರ್ಗವಾಗಿ ಬೆಳ್ತಂಗಡಿಗೆ ಹೋಗುವ ಹೆದ್ದಾರಿಯ ಆಸುಪಾಸಿನ ಗ್ರಾಮಗಳು 'ನಕ್ಸಲ್ ಪೀಡಿತ' ಎಂದು ಪರಿಗಣಿಸಲ್ಪಟ್ಟಿವೆ. ಹೆಬ್ರಿ, ಕಾರ್ಕಳ ಹೆದ್ದಾರಿಯಲ್ಲಿ ಮುನಿಯಾಲು ನಂತರ ಸಿಗುವ ಗ್ರಾಮ ಮುಟ್ಲುಪಾಡಿ. ಇದೇ ಮಾರ್ಚ್ ತಿಂಗಳ ಮೊದಲ ದಿನವೇ ಈ ನಕ್ಸಲ್ ಪೀಡಿತ ಗ್ರಾಮದಲ್ಲಿ ಒಬ್ಬ ನಕ್ಸಲೀಯನ 'ಎನ್‌ಕೌಂಟರ್' ನಡೆಯಿತು.

ಪಶ್ಚಿಮ ಘಟ್ಟದ ಬುಡದಲ್ಲೇ ಇದೆ ಎಂಬಂತೆ ತೋರುವ ಮುಟ್ಲುಪಾಡಿ ಗ್ರಾಮದ ಮೈರೋಳಿ ಜಡ್ಡು ಎಂಬಲ್ಲಿ ಪುರಾತನವಾದ ಅರ್ಧನಾರೀಶ್ವರ ದೇವಸ್ಥಾನವಿದ್ದು ಅದರ ಸಮೀಪದಲ್ಲೇ ಬ್ರಹ್ಮಬೈದರ್ಕಳ ದೈವಸ್ಥಾನವೂ ಇದೆ. ದೇವಸ್ಥಾನದ ವರ್ಷಾವಧಿ ಜಾತ್ರೆಗೆ ಸುತ್ತಮುತ್ತಲಿನ

೧೯೮೭ರಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಅಧಿಕೃತ ಘೋಷಣೆ ಸರಕಾರದಿಂದ ಹೊರಬಿದ್ದಾಗ ಉಡುಪಿ, ಕುಂದಾಪುರ, ಕಾರ್ಕಳ, ಬೆಳ್ತಂಗಡಿ, ಶೃಂಗೇರಿ ತಾಲ್ಲೂಕುಗಳ, ಪಶ್ಚಿಮ ಘಟ್ಟದ ತಪ್ಪಲಿನ ಹಳ್ಳಿಗಳು ಅದರ ವ್ಯಾಪ್ತಿಗೆ ಒಳಪಟ್ಟವು.

ತಲೆತಲಾಂತರದಿಂದ ಈ ಹಳ್ಳಿಗಳಲ್ಲಿ ವಾಸಿಸುತ್ತಿದ್ದ ಜನ, ಹಠಾತ್ತನೆ, ತಮ್ಮ ತಮ್ಮ ಮನೆಗಳಲ್ಲೇ ಅಕ್ರಮ ನಿವಾಸಿಗಳಾಗಿಬಿಟ್ಟರು. ಸ್ವಾತಂತ್ರ್ಯ ಬಂದ ಹೊಸತರಲ್ಲಿ ಕೇಂದ್ರ ಸರಕಾರ ದೇಶದ ಆದಿವಾಸಿಗಳು ನೆಲೆಸಿದ ಅರಣ್ಯ ಪ್ರದೇಶ ಸರಕಾರದ ಒಡೆತನಕ್ಕೆ ಸೇರಿದ್ದು ಎಂದು ಘೋಷಿಸಿದಾಗಲೇ, ಆದಿವಾಸಿಗಳು ಎರಡನೆಯ ದರ್ಜೆಯ ಪ್ರಜೆಗಳಾದರು. ೯೦ರ ದಶಕದಲ್ಲಿ ರಾಷ್ಟ್ರದ ವಿವಿಧೆಡೆ, ಅಸ್ತಿತ್ವಕ್ಕೆ ಬಂದ ರಾಷ್ಟ್ರೀಯ ಉದ್ಯಾನವನಗಳ ವ್ಯಾಪ್ತಿಯ ಒಳಗೆ ಬರುವ ಜನರನ್ನು ಎರಡನೆಯ ದರ್ಜೆಯ ಪ್ರಜೆಗಳೆಂದು ಪರಿಗಣಿಸಲು ಸಹ ಸರಕಾರ ನಿರಾಕರಿಸಿತು.

ಗ್ರಾಮಗಳಿಂದ ಸಾವಿರಾರು ಜನ ಬರುತ್ತಾರೆ. ಈ ಜಾತ್ರೆಯ ಆಕರ್ಷಣೆ ಎಷ್ಟು ಎಂದರೆ ದೇವಾಲಯವನ್ನು ಆವರಿಸಿ ಕೊಂಡಿರುವ ಗುಡ್ಡಬೆಟ್ಟಗಳಲ್ಲಿ ಭೂಗತರಾಗಿ ಸಂಚರಿಸುವ ನಕ್ಸಲೀಯರು ಸಹ ಈ ಜಾತ್ರೆಗೆ ತಪ್ಪದೆ ಬರುತ್ತಾರೆ ಎಂದು ಪ್ರತೀತಿ; ತಮ್ಮ ಕರಪತ್ರ ಇತ್ಯಾದಿ ಹಂಚಲು ಅವರು ಜಾತ್ರೆಗೆ ಬಂದೇಬರುತ್ತಾರೆ ಎಂಬ ನಿರೀಕ್ಷೆಯಲ್ಲಿ ಪೊಲೀಸರು ಕೂಡ ಅವರಿಗೆ ಕಾದುಕೂತಿರುತ್ತಾರಂತೆ. ಇದು ನಿಜವೋ ಸುಳ್ಳೋ ಎಂದು ನಿಖರವಾಗಿ ಹೇಳಲು ಬರುವುದಿಲ್ಲ. ಆದರೆ ಮುಟ್ಲುಪಾಡಿ ಮೈರೋಳಿ ಜಡ್ಡುವಿನಲ್ಲಿ ನಕ್ಸಲ್ ಎನ್‌ಕೌಂಟರ್ ನಡೆದ ೨೦೧೦ ಮಾರ್ಚ್ ೧ನೆಯ ತಾರೀಕು ಸೋಮವಾರದಂದೇ ಅಲ್ಲಿನ ದೇವಸ್ಥಾನದ ಜಾತ್ರೆಯೂ ನಡೆದಿತ್ತು. ಆದಿನ ಸಂಜೆ ೪.೧೫ರ ಸುಮಾರಿಗೆ ವಸಂತ ಎಂಬ ಮಲೆಕುಡಿಯ ತರುಣನನ್ನು ಕಾರ್ಕಳದ ನಕ್ಸಲ್ ನಿಗ್ರಹ ತಂಡದ ಪೊಲೀಸರು, ಗುಂಡಿಟ್ಟು ಕೊಂದರು. ಈ ಪ್ರಕರಣದ ಕುರಿತು ಮಾಹಿತಿ ಸಂಗ್ರಹಿಸಲು ಕರ್ನಾಟಕದ ಪಿ.ಯು.ಸಿ.ಎಲ್. ಘಟಕದ ಸತ್ಯಶೋಧಕ ತಂಡವೊಂದು ಇತ್ತೀಚೆಗೆ ಸ್ಥಳಕ್ಕೆ ತೆರಳಿತ್ತು. ಈ ತಂಡದಲ್ಲಿ ಬೆಂಗಳೂರಿನ ಪ್ರೊ|| ರಾಮದಾಸರಾವ್, ಮೈಸೂರಿನ ಡಾ|| ವಿ. ಎನ್. ಲಕ್ಷ್ಮೀನಾರಾಯಣ, ಮಂಗಳೂರಿನ ಪಿ. ಬಿ. ಡೇ'ಸಾ ಮತ್ತು ಸುರೇಶ್ ಭಟ್ ಬಾಕ್ರಬೈಲು, ಹಾಗೂ ಉಡುಪಿಯ ಜಿ. ವಿಷ್ಣು ಮತ್ತು ಈ ಲೇಖಕ ಸದಸ್ಯರಾಗಿದ್ದರು. ಮುಟ್ಲುಪಾಡಿ ಮೈರೋಳಿ ಜಡ್ಡು, ಕಾರ್ಕಳ ತಾಲೂಕಿನ ಅಜೆಕಾರು ಪೊಲೀಸು ಠಾಣೆಯ ವ್ಯಾಪ್ತಿಗೆ ಒಳಪಟ್ಟಿದ್ದರೂ ವಸಂತನ ಎನ್‌ಕೌಂಟರ್ ಪ್ರಕರಣವನ್ನು ಕಾರ್ಕಳದ ಡಿ.ವೈ.ಎಸ್.ಪಿ. ಸಂತೋಷ್ ಕುಮಾರ್ ತನಿಖೆ ನಡೆಸಿದ್ದರು. ಈ ಎನ್‌ಕೌಂಟರ್ ಕೊಲೆಯನ್ನು ವರದಿ ಮಾಡಿದ ಕೆಲವು ಪತ್ರಿಕೆಗಳು ಮೃತ ವಸಂತನನ್ನು ಶಂಕಿತ ನಕ್ಸಲ್ ಎಂದು ಕರೆದಿದ್ದರೂ ಸಂತೋಷ್ ಕುಮಾರ್ ಮಾತ್ರ ವಸಂತ ನಕ್ಸಲ್‌ನೇ ಹೌದು ಎಂದು ಭಾವಿಸಿದ ಹಾಗೆ ನಮಗೆ ಕಂಡಿತು. ಆದರೆ ನಕ್ಸಲೀಯ ಸಮಸ್ಯೆ ಬಗ್ಗೆ ನಮ್ಮೊಡನೆ ಚರ್ಚಿಸಲು ಅವರು ನಿರಾಕರಿಸಿದರು. ಆದರೆ ಸಾಮಾಜಿಕ, ಆರ್ಥಿಕ ಮುಖಗಳು ಸರಕಾರದ ಧೋರಣೆಗಳಿಗೆ ಸಂಬಂಧಿಸಿದ್ದು ಆ ಕುರಿತು ತಾನು ಏನೂ ಹೇಳುವಂತಿಲ್ಲ ಎಂದು ಅವರು ಹೇಳಿದರು. ಒಬ್ಬ ಪೊಲೀಸು ಅಧಿಕಾರಿಯಾಗಿ ಅವರ ಮಟ್ಟಿಗೆ ನಕ್ಸಲೀಯ ಸಮಸ್ಯೆ ಕಾನೂನು ಸುವ್ಯವಸ್ಥೆಗಳಿಗೆ ಮಾತ್ರ ಸಂಬಂಧಿಸಿದೆ. ಆದರೆ ಪ್ರಜೆಗಳಿಗೆ ಉತ್ತರದಾಯಿಯಾದ ಸರಕಾರವೂ ಈ ಸಮಸ್ಯೆಯನ್ನು ಕೇವಲ ಕಾನೂನು ಸುವ್ಯವಸ್ಥೆಯ ಸಮಸ್ಯೆ ಎಂದು ಪರಿಗಣಿಸಿದೆ ಎಂಬುದು ಇತ್ತೀಚಿಗಿನ ದಿನಗಳಲ್ಲಿ ಸ್ಪಷ್ಟವಾಗತೊಡಗಿದೆ.

ನಕ್ಸಲೀಯ ವಸಂತನ ಸಾವು ಸಂಭವಿಸಿರುವುದು ನೈಜ ಅರ್ಥದ ಪೊಲೀಸು ಎನ್‌ಕೌಂಟರ್‌ನಲ್ಲಿ ಎಂದು ಸಂತೋಷ್ ಕುಮಾರ್ ಖಾತ್ರಿಯಾಗಿ ಹೇಳಿದರು. ಅವರ ಪ್ರಕಾರ, ಮಾರ್ಚ್ ೧ರಂದು ಸಂಜೆ ೪ರ ಸುಮಾರಿಗೆ ವಸಂತ, ಮತ್ತು ಇನ್ನಿಬ್ಬರು ಮುಟ್ಲುಪಾಡಿಯ ದೇವಾಲಯ ದಿಂದ ಸುಮಾರು ೪ ಕಿ.ಮೀ. ದೂರದಲ್ಲಿ, ನಡೆದು ಬರುತ್ತಿದ್ದರು. ಪೊಲೀಸರಿಗೆ ಆ ಬಗ್ಗೆ ಮೊದಲೇ ಸುಳಿವು ಸಿಕ್ಕಿತ್ತು. ವಸಂತನ ಕೈಯಲ್ಲಿ ಒಂದು ಎಸ್.ಎಲ್.ಆರ್. ಬಂದೂಕು ಇದ್ದು, ಆತನ ಹೆಗಲ ಚೀಲದಲ್ಲಿ ಇದರ ಗುಂಡುಗಳಿದ್ದವು. ಸಂತೋಷ್ ಕುಮಾರ್ ಪ್ರಕಾರ, ಈ ಬಂದೂಕು, ಶೃಂಗೇರಿಯ ಮಗೇಬೈಲಿನ ಚಂದ್ರಶೇಖರ್ ಎಂಬುವರ ಮನೆಯಿಂದ ನಕ್ಸಲರು ಬಲಾತ್ಕಾರದಲ್ಲಿ ಒಯ್ದದ್ದು. ಈ ಪೊಲೀಸರನ್ನು ಕಂಡು ವಸಂತ, ತನ್ನ ಬಂದೂಕಿನಿಂದ ಗುಂಡು ಹಾರಿಸಿದ. ಅದರಿಂದ ಓರ್ವ ಪೊಲೀಸ್ ಕಾನ್ಸ್‌ಟೇಬಲ್‌ನ ಕಾಲಿಗೆ ಗಾಯವಾಯಿತು. ವಸಂತನ ಈ ದಾಳಿಗೆ ಪ್ರತಿಯಾಗಿ ನಕ್ಸಲ್ ನಿಗ್ರಹ ತಂಡದವರು ಗುಂಡು ಹಾರಿಸಿದಾಗ ಅವನು ಸ್ಥಳದಲ್ಲೇ ಕುಸಿದುಬಿದ್ದ. ವಸಂತನ ಜೊತೆಗಿದ್ದ ಇಬ್ಬರು, ಸುಂದರಿ ಮತ್ತು ವಿಕ್ರಮಗೌಡ, ತಪ್ಪಿಸಿಕೊಂಡು ಓಡಿ ಕಾಡಿನಲ್ಲಿ ಕಣ್ಮರೆಯಾದರು. ಸುಂದರಿ ವಸಂತನ ತಂಗಿಯಾಗಿದ್ದು, ಕಳೆದ ಹಲವು ವರ್ಷಗಳಿಂದ ಅವಳು ಭೂಗತಳಾಗಿದ್ದಾಳೆ. ಉಡುಪಿಯ ಎಸ್. ಪಿ. ಮಧುಕರ ಪವಾರ್ ಹೇಳುವ ಪ್ರಕಾರ ಅವರ ಬಳಿ ಎ.ಕೆ.೪೭ ಗನ್ ಇದೆ. ಈ ಎನ್‌ಕೌಂಟರ್ ನಡೆದಿರುವುದು ಒಂದು ನಿರ್ಜನ ಪ್ರದೇಶದಲ್ಲಿ ಕಾರ್ಕಳದ ನಕ್ಸಲ್ ನಿಗ್ರಹ ಪಡೆ ಮತ್ತು ಅವರ ಜೊತೆಗೆ ಹೋದ ಕಾರ್ಕಳ ಪೊಲೀಸರನ್ನು ಬಿಟ್ಟರೆ ಈ ಘಟನೆಯನ್ನು ಕಣ್ಣಾರೆ ನೋಡಿದವರು ಯಾರೂ ಇಲ್ಲ. ಹಾಗಾಗಿ ಈ ಎನ್‌ಕೌಂಟರ್ ಕುರಿತ ಪೊಲೀಸು ನಿರೂಪಣೆಯ ವಿಶ್ವಾಸಾರ್ಹತೆಯ ಬಗ್ಗೆ ಏನೂ ಹೇಳ ಲಾಗುವುದಿಲ್ಲ. ಯಾಕೆಂದರೆ 'ಎನ್‌ಕೌಂಟರ್' ಎಂಬ ಇಂಗ್ಲಿಷ್ ಶಬ್ದ, ಭಾರತದಲ್ಲಿ ಪಡೆದುಕೊಂಡಿರುವ ಜನಜನಿತ ಅರ್ಥ, ಪೊಲೀಸರ ಸತ್ಯಸಂಧತೆ ಬಗ್ಗೆ ಜನಕ್ಕೆ ಚೂರೂ ವಿಶ್ವಾಸವಿಲ್ಲವೆಂಬುದನ್ನೇ ಸೂಚಿಸುತ್ತದೆ.

ಮುಟ್ಲುಪಾಡಿಯಲ್ಲಿ ಈ ಎನ್‌ಕೌಂಟರ್ ನಡೆದ ಜಾಗ ಮಾತ್ರವಲ್ಲ, ಆ ಇಡೀ ಪರಿಸರವೇ ಸಾಮಾನ್ಯ ದಿನಗಳಲ್ಲಿ ನಿರ್ಜನವಾಗಿರುತ್ತದೆ. ನಾವು ಹೋದಾಗ, ಅದು ಮಧ್ಯಾಹ್ನದ ಹೊತ್ತಾದರೂ, ಮುಟ್ಲುಪಾಡಿಯ ದೇವಸ್ಥಾನದ ಆವರಣದಲ್ಲಿ ಕೂಡ ಯಾರೂ ಇರಲಿಲ್ಲ. ದೇವಸ್ಥಾನದ ಗರ್ಭಗುಡಿ ಮುಚ್ಚಿತ್ತು; ಆದರೆ ಹೊರಬಾಗಿಲು ತೆಗೆದು ಕೊಂಡಿತ್ತು. ನಮಗೆ ಅಲ್ಲಿ ಮಾತಿಗೆ ಸಿಕ್ಕ ಸ್ಥಳೀಯ ರೈತ ರೊಬ್ಬರ ಬಳಿ ವಸಂತನಾಗಲೀ, ಇತರ ನಕ್ಸಲರಾಗಲೀ, ಆ ಊರಿನಲ್ಲಿ ಕರಪತ್ರ ಹಂಚಿದ್ದರೆ, ಸಭೆ ನಡೆಸಿದ್ದರೆ ಎಂದು ನಾವು ವಿಚಾರಿಸಿದೆವು. ಅವರಿಗೆ ವಸಂತನ ಎನ್‌ಕೌಂಟರ್ ಹತ್ಯೆಯ ವಿಷಯ ಗೊತ್ತಿತ್ತು. ಅದು ನಡೆದ ಸ್ಥಳವೂ ಗೊತ್ತಿತ್ತು. ನಕ್ಸಲರು ಮುಟ್ಲುಪಾಡಿಯಲ್ಲಿ ಸಭೆ ಇತ್ಯಾದಿ ಏನನ್ನೂ ಮಾಡಿಲ್ಲ ಎಂದು ಅವರು ಹೇಳಿದರು. ಮುಟ್ಲುಪಾಡಿಯಲ್ಲಿ ದೇವಾಲಯದ ಸಮೀಪ, ಹೆದ್ದಾರಿ ಯಲ್ಲಿ ಸಣ್ಣ ಅಂಗಡಿ ನಡೆಸುತ್ತಿದ್ದ ಒಬ್ಬ ಗೃಹಸ್ಥರೂ ಅದೇ ಮಾತನ್ನು ಹೇಳಿದರು. ನಕ್ಸಲರು ಹೊತ್ತಲ್ಲದ ಹೊತ್ತಲ್ಲಿ ಬಂದು ಅಕ್ಕಿ ಕೊಡಿ, ಊಟ ಹಾಕಿ ಎಂದು ಕೇಳಿದ್ದುಂಟಾ ಎಂದು ನಾವು ಕೇಳಿದ್ದಕ್ಕೆ ಅವರು ಅಸಮಾಧಾನಗೊಂಡು, ''ಛೇ, ಛೇ, ಹಾಗೆಲ್ಲ ಸುಮ್ಮಸುಮ್ಮನೆ ಹೇಳಬಾರದು'' ಎಂದು ನಮ್ಮನ್ನೇ ಛೇಡಿಸಿದರು.

ಕಾರ್ಕಳ ಬೆಳ್ತಂಗಡಿ ಮಾರ್ಗದಲ್ಲಿ, ನಾರಾವಿಗೆ ಸುಮಾರು ೧೦ ಕಿ.ಮೀ. ದೂರದಲ್ಲಿ ದಟ್ಟಕಾಡಿನ ನಡುವೆ ಇರುವ ಕುತ್ಲೂರು ಗ್ರಾಮದ ಅಳಂಬ ಎಂಬ ಸ್ಥಳದಲ್ಲಿ ನಾವು ವಸಂತನ ತಂದೆ ಬಾಬುಗೌಡರನ್ನು ಭೇಟಿ ಯಾದೆವು. ಅವರ ಮನೆ ಇರುವ ಜಾಗದ ಹೆಸರು ಕೋಟಂದಡ್ಕ. ಅಲ್ಲಿಗೆ ಹೋಗಲು ಕಾಡಿನ ನಡುವೆ ಕಡಿದಾದ ದಾರಿಯಲ್ಲಿ ಮತ್ತೂ ೪ ಕಿ.ಮೀ. ದೂರ ನಡೆಯಬೇಕು. ನಮಗೆ ಅದರ ಶ್ರಮ ತಪ್ಪಿಸಲು ಬಾಬು ಗೌಡರೇ ಅಳಂಬಕ್ಕೆ ನಡೆದುಬಂದಿದ್ದರು. ಅವರಿಗೆ ಈಗ ಸುಮಾರು ೬೫ರ ಹರೆಯ. ವಸಂತನ ಜೊತೆ ಮನೆಯವರಿಗೆ ಸಂಪರ್ಕ ಕಡಿದುಹೋಗಿ ಹತ್ತು ವರ್ಷಗಳೇ ಕಳೆದಿದೆ ಅಂತೆ. ಪೊಲೀಸರು ಅವನ ಮೇಲೆ ಕೇಸು ಹಾಕಿದನಂತರ ಮನೆಗೆ ಬರುವುದನ್ನೇ ನಿಲ್ಲಿಸಿದ ಎಂದು ಬಾಬುಗೌಡ ಹೇಳಿದರು. ಅವರಿಗೆ ವಸಂತನೂ ಸೇರಿ ೪ ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣುಮಕ್ಕಳು. ಬಾಬುಗೌಡರ ಮೊದಲ ಮಗ ಲೋಕಯ್ಯ ಕೆಲವು ವರ್ಷಗಳ ಕೆಳಗೆ ಮರದಿಂದ ಬಿದ್ದು ತೀರಿಕೊಂಡಿದ್ದಾನೆ; ಎರಡನೆಯ ಮಗ ಸುರೇಶ ಪದವೀಧರನಾಗಿದ್ದು ಧರ್ಮಸ್ಥಳದ ಗ್ರಾಮಾಭಿವೃದ್ಧಿ ಸಂಸ್ಥೆಯಲ್ಲಿ ಕೆಲಸ ಮಾಡುತ್ತಾನೆ. ಮೂರನೆಯವನೇ ಶಂಕಿತ ನಕ್ಸಲ್ ವಸಂತ. ತೀರಿಕೊಳ್ಳುವಾಗ ಅವನಿಗೆ ೩೨ ವರ್ಷವಾಗಿತ್ತು. ವಸಂತ ೧೦ನೆಯ ಕ್ಲಾಸಿನವರೆಗೆ ಓದಿದ್ದ. ವಸಂತನ ಜೊತೆ, ಅವನ ಒತ್ತಿನ ತಂಗಿ ಸುಂದರಿ ಕೂಡ ಓರ್ವ ಶಂಕಿತ ನಕ್ಸಲ್. ಆಕೆ ೪ನೆಯ ಕ್ಲಾಸು ಮುಗಿಸಿದ್ದು ಭೂಗತಳಾಗಿದ್ದಾಳೆ. ಮೊನ್ನೆ ಅಣ್ಣನ ಎನ್‌ಕೌಂಟರ್ ಆಗುವಾಗ ಅವಳು ಅವನ ಜೊತೆ ಇದ್ದಳಂತೆ. ಬಾಬು



*ಎನ್‌ಕೌಂಟರ್‌ಗೆ ಬಲಿಯಾಗಿರುವ ಶಂಕಿತ ನಕ್ಸಲ್ ವಸಂತ ಯಾನೆ ಆನಂದ. (ಚಿತ್ರಕೃಪೆ : ವಾರ್ತಾಭಾರತಿ, ೨-೩-೨೦೧೦)*

ಗೌಡರಿಗೆ ಕಿವಿ ಸರಿಯಾಗಿ ಕೇಳಿಸುವುದಿಲ್ಲ. ಹಾಗಾಗಿ ಅವರು ನಮ್ಮ ಜೊತೆ ಹೆಚ್ಚು ಮಾತಾಡಲಿಲ್ಲ. ಅವರ ಒಟ್ಟಿಗಿದ್ದ ತರುಣ ಪೂವಯ್ಯ ಮಲೆಕುಡಿಯ ಮತ್ತು ವಯೋವೃದ್ಧರಾದ ರಾಮಯ್ಯ ಗೌಡರು, ತಮ್ಮ ಊರಿನಲ್ಲಿ ತಮ್ಮ ಕಣ್ಣೆದುರೇ ಬೆಳೆದ ವಸಂತ, ಭೂಗತನಾದ ವೃತ್ತಾಂತವನ್ನು ನಮಗೆ ತಿಳಿಸಿದರು.

೧೯೮೭ರಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಅಧಿಕೃತ ಘೋಷಣೆ ಸರಕಾರದಿಂದ ಹೊರಬಿದ್ದಾಗ ಉಡುಪಿ, ಕುಂದಾಪುರ, ಕಾರ್ಕಳ, ಬೆಳ್ತಂಗಡಿ, ಶೃಂಗೇರಿ ತಾಲ್ಲೂಕುಗಳ, ಪಶ್ಚಿಮ ಘಟ್ಟದ ತಪ್ಪಲಿನ ಹಳ್ಳಿಗಳು ಅದರ ವ್ಯಾಪ್ತಿಗೆ ಒಳಪಟ್ಟವು.

ತಲೆತಲಾಂತರದಿಂದ ಈ ಹಳ್ಳಿಗಳಲ್ಲಿ ವಾಸಿಸುತ್ತಿದ್ದ ಜನ, ಹಠಾತ್ತನೆ, ತಮ್ಮತಮ್ಮ ಮನೆಗಳಲ್ಲೇ ಅಕ್ರಮ ನಿವಾಸಿಗಳಾಗಿಬಿಟ್ಟರು. ಸ್ವಾತಂತ್ರ್ಯ ಬಂದ ಹೊಸತರಲ್ಲಿ ಕೇಂದ್ರ ಸರಕಾರ ದೇಶದ ಆದಿವಾಸಿಗಳು ನೆಲೆಸಿದ ಅರಣ್ಯ ಪ್ರದೇಶ ಸರಕಾರದ ಒಡೆತನಕ್ಕೆ ಸೇರಿದ್ದು ಎಂದು ಘೋಷಿಸಿದಾಗಲೇ, ಆದಿವಾಸಿಗಳು ಎರಡನೆಯ ದರ್ಜೆಯ ಪ್ರಜೆಗಳಾದರು. ೬೦ರ ದಶಕದಲ್ಲಿ ರಾಷ್ಟ್ರದ ವಿವಿಧೆಡೆ, ಅಸ್ತಿತ್ವಕ್ಕೆ ಬಂದ ರಾಷ್ಟ್ರೀಯ ಉದ್ಯಾನವನಗಳ ವ್ಯಾಪ್ತಿಯ ಒಳಗೆ ಬರುವ ಜನರನ್ನು ಎರಡನೆಯ ದರ್ಜೆಯ ಪ್ರಜೆಗಳೆಂದು ಪರಿಗಣಿಸಲು ಸಹ ಸರಕಾರ ನಿರಾಕರಿಸಿತು. ಏಕಾಏಕಿ, ತಾವಿದ್ದ ಊರು, ಮನೆಗಳನ್ನು ಖಾಲಿಮಾಡಿ ಹೊರನಡೆಯಬೇಕು ಎಂದು ಸರಕಾರ ಈ ಅರಣ್ಯವಾಸಿಗಳಿಗೆ ತಾಕೀತು ಮಾಡಿತು. ಕರ್ನಾಟಕದಲ್ಲಿ, ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಗೆ ಬರುವ ಸುಮಾರು ೧೩೦೦ ಆದಿವಾಸಿ ಮತ್ತು ಇತರ ಕುಟುಂಬಗಳಿಗೆ ಜಾಗ ತೆರವು ಮಾಡಲು, ೧೯೯೭ರಲ್ಲಿ ಮೊದಲ ನೋಟಿಸು ಕೊಡಲಾಯಿತು. ಬಾಬುಗೌಡರ ಮನೆ, ಕೆಲವೇ ಅಡಿ ಮತ್ತು ೭೪ ಸೆಂಟ್ಸ್‌ನ ಅವರ ಪುಟ್ಟ ಅಡಿಕೆ ತೋಟವಿದ್ದ ಕೋಟಂದಡ್ಕ, ಅಳಂಬ, ಕುತ್ಲೂರು ಗ್ರಾಮಗಳ ನಿವಾಸಿಗಳ ಮೇಲೂ ಈ ನೋಟಿಸು ಜಾರಿಗೊಂಡಿತು. ಬಾಬುಗೌಡರೂ ಸೇರಿದಂತೆ, ಕುತ್ಲೂರು ಗ್ರಾಮದ ೭೦ ಮನೆಯವರಲ್ಲಿ ಬಹುತೇಕ ಎಲ್ಲರೂ, ಈ ನೋಟಿಸನ್ನು ತಿರಸ್ಕರಿಸಿದರು. ಈ ಅರಣ್ಯವಾಸಿಗಳ ಮಟ್ಟಿಗೆ, ಸರಕಾರದ ಎವಿಕ್ಷನ್ ನೋಟಿಸು, ಅಕ್ಷರಶಃ ಮರಣದಂಡನೆಯೇ ಆಗಿತ್ತು. ಸರಕಾರ, ಪರಿಹಾರವಾಗಿ ಕೊಡುವ ನಗದು ಹಣ (ಗರಿಷ್ಠ ೧೦ ಲಕ್ಷ ರೂ.) ತಮ್ಮ ಕೃಷಿಭೂಮಿ, ತಮ್ಮ ಉದ್ಯೋಗ, ಮತ್ತು ತಮ್ಮ ಹಳ್ಳಿಯ ಸಮುದಾಯ ಜೀವನಕ್ಕೆ ಪರ್ಯಾಯವಲ್ಲ ಎಂಬ ವ್ಯಾವಹಾರಿಕ ಸತ್ಯ ಅವರಿಗೆ ತಿಳಿದಿತ್ತು. ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ನಿವಾಸಿಗಳು ತಮ್ಮ ಮೇಲೆ ಜಾರಿಯಾದ ಒಕ್ಕಲೆಬ್ಬಿಸುವ ನೋಟಿಸನ್ನು ತಿರಸ್ಕರಿಸಿದ ನಂತರ ಅವರ ಮೇಲೆ ಫಾರೆಸ್ಟ್ ಇಲಾಖೆಯ ಕಿರುಕುಳ ಮಾಮೂಲಿಗಿಂತ ಹಲವುಪಟ್ಟು ಜಾಸ್ತಿಯಾಯಿತು. ಬ್ರಿಟಿಷ್ ವಸಾಹತುಶಾಹಿ ಸರಕಾರ, ದೋಚುವ ಉದ್ದೇಶಕ್ಕಾಗಿಯೇ ಹುಟ್ಟುಹಾಕಿದ ಫಾರೆಸ್ಟ್ ಇಲಾಖೆ, ಭಾರತದ ಅರಣ್ಯನಾಶಕ್ಕೆ ಮುಖ್ಯ ಕಾರಣವಾಗಿದೆ. ಸ್ವತಂತ್ರ ಭಾರತದಲ್ಲಂತೂ, ಫಾರೆಸ್ಟ್ ಇಲಾಖೆ, ಭ್ರಷ್ಟಾಚಾರಕ್ಕೆ ಇನ್ನೊಂದು ಹೆಸರಾಗಿದೆ. ಈಗ ಈ ಕುಖ್ಯಾತ ಇಲಾಖೆಯ ಅಧಿಕಾರಿಗಳೂ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ

**ಮುಂಬೈ ದಾಳಿ ಪ್ರಕರಣ..**
**ಅಂತೂ ಕಸಬ್‌ಗೆ ಶಿಕ್ಷೆ..**



**ಅಂಗೈ ಹುಣ್ಣಿಗೆ ಕನ್ನಡಿ ಬೇಕೆ..? ಅಂತೂ ಒಂದು ವರ್ಷ ಬಳಿಕವಾದ್ರೂ ತೀರ್ಪು ಬಂತಲ್ಲಾ ಅನ್ನೋದೇ ಸಮಾಧಾನ..!**

ಪ್ರದೇಶದಿಂದ ಬಾಬುಗೌಡರಂತಹವರನ್ನು ಓಡಿಸಿ ರಾಷ್ಟ್ರದ 'ಅರಣ್ಯ ಸಂಪತ್ತನ್ನು' ಕಾಪಾಡಲು ಮುಂದಾದರು. ಈ ಅರಣ್ಯವಾಸಿಗಳು ಏನು ಮಾಡಕೂಡದು ಎಂಬ ಉದ್ದದ ಪಟ್ಟಿಯನ್ನೇ ಇಲಾಖೆ ತಯಾರಿಸಿತು. ಆ ಪಟ್ಟಿ ಪ್ರಕಾರ ಕಾಡಿನಿಂದ ಕಟ್ಟಿಗೆ ತರುವ ಹಾಗಿಲ್ಲ; ಕೊಟ್ಟಿಗೆಗೆ ಸೊಪ್ಪು ಸದೆ ತರುವಂತಿಲ್ಲ. ಕಾಡಿನಲ್ಲಿ ಕತ್ತಿಕೊಡಲಿ ಹಿಡಿದು ಓಡಾಡುವುದೂ ಅಪರಾಧ, ಹೊರಗಿನಿಂದ, ಅಂದರೆ ಉದ್ಯಾನವನದ ಗಡಿಯ ಹೊರಗಿನಿಂದ, ಫಾರೆಸ್ಟ್ ಇಲಾಖೆಯ ಅನುಮತಿ ಇಲ್ಲದೆ ನೆಂಟರಿಷ್ಟರು ಬರುವ ಹಾಗಿಲ್ಲ; ಕಾಡಿನ ತೊರೆಗಳ ನೀರು ಬಳಸಕೂಡದು. ಅರಣ್ಯವಾಸಿಗಳ ದಿನನಿತ್ಯದ ಬದುಕನ್ನು ದುರ್ಭರಗೊಳಿಸುವುದರ ಜೊತೆಗೆ ಮಾನಸಿಕವಾಗಿಯೂ ಅವರನ್ನು ಜರ್ಜರಿತರನ್ನಾಗಿ ಮಾಡುವುದು ಈ ನಿರ್ಬಂಧಗಳ ಉದ್ದೇಶವಾಗಿದ್ದಿತು. ೧೯೪೭ರಿಂದ ಈಚೆಗೆ ಸರಕಾರದ ರೆವೆನ್ಯೂ ಆಡಳಿತದ ಸಿಬ್ಬಂದಿ, ಪೊಲೀಸು ಇಲಾಖೆಯ ನೆರವಿನೊಂದಿಗೆ ಅಭಿವೃದ್ಧಿ, ಅರ್ಥಾತ್ ಅಣೆಕಟ್ಟು, ಹೆದ್ದಾರಿ, ಗಣಿಗಾರಿಕೆ, ಬೃಹತ್ ಉದ್ಯಮ ಮತ್ತು ಇತ್ತೀಚೆಗೆ ವಿಶೇಷ ಆರ್ಥಿಕ ವಲಯಗಳ ನಿರ್ಮಾಣಕ್ಕಾಗಿ, ದೇಶಾದ್ಯಂತ, ಕೋಟ್ಯಂತರ ಜನರನ್ನು ಅತ್ಯಂತ ಹಿಂಸ್ರ ವಿಧಾನಗಳಲ್ಲಿ ಒಕ್ಕಲೆಬ್ಬಿಸಿದೆ. 'ನಿರಾಶ್ರಿತರು', 'ಆಂತರಿಕ ನಿರ್ವಸಿತರು', ಮತ್ತು 'ನಾಪತ್ತೆಯಾದವರು' ಎಂಬ ಸ್ವತಂತ್ರ ಭಾರತದ ಜನಪ್ರಭೇದಗಳಿಗೆ ಇನ್ನೊಂದು ಸೇರ್ಪಡೆ, ಈ 'ಅಭಿವೃದ್ಧಿ ನಿರಾಶ್ರಿತ'ರದ್ದು. ಒಂದು ಕನಿಷ್ಠ ಅಂದಾಜಿನ ಪ್ರಕಾರ ಸ್ವಾತಂತ್ರ್ಯದಿಂದ ಈಚೆಗೆ ಭಾರತದಲ್ಲಿ ಹತ್ತಿರ-ಹತ್ತಿರ ೫ ಕೋಟಿ ಜನ 'ಅಭಿವೃದ್ಧಿ ನಿರಾಶ್ರಿತ'ರಾಗಿದ್ದಾರೆ. ಇವರಲ್ಲಿ ಹೆಚ್ಚಿನವರು ಆದಿವಾಸಿಗಳು ಮತ್ತು ಬಡರೈತರು. ಪ್ರಭುತ್ವ 'ಪ್ರಜೆ' ಎಂದು ಗುರುತಿಸಲು, ಎಷ್ಟೋ ವೇಳೆ 'ಮನುಷ್ಯ' ಎಂದು ಗೌರವಿಸಲು ಸಹ ನಿರಾಕರಿಸುವ ಈ ಅಭಿವೃದ್ಧಿ ನಿರಾಶ್ರಿತರ ಸಾಲಿಗೆ ಸೇರಲು ಕರ್ನಾಟಕದ ಪಶ್ಚಿಮ ಘಟ್ಟದ ಅರಣ್ಯ ವಾಸಿಗಳು ನಿರಾಕರಿಸಿ, ಹೋರಾಟ ನಡೆಸಿದ್ದು ಈಗ ಇತಿಹಾಸ; ಆದರೆ ಅದು 'ಅಧಿಕೃತ' ಇತಿಹಾಸವಲ್ಲ, ಯಾಕೆಂದರೆ ಸರಕಾರ ಮತ್ತು ಮಾಧ್ಯಮಗಳು ಆ ಹೋರಾಟವನ್ನು ಹೆಸರಿಸಿದ್ದು 'ನಕ್ಸಲ್' ಎಂದು. ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವಿರೋಧಿ ಹೋರಾಟದಲ್ಲಿ ವಸಂತ ಭಾಗವಹಿಸಿದ್ದ. ಹೈಸ್ಕೂಲುವರೆಗೆ ಓದಿದ್ದ ವಸಂತ ಅದುವರೆಗೆ ತನ್ನ ಹಳ್ಳಿಯ ಸುತ್ತಮುತ್ತ ಕೂಲಿನಾಲಿ ಮಾಡಿಕೊಂಡಿದ್ದ; ಕಾಡುತ್ಪತ್ತಿ ಸಂಗ್ರಹಿಸಿ ಮಾರುವುದನ್ನು ಸಹ ಅವಕಾಶ ಸಿಕ್ಕಾಗ ಮಾಡುತ್ತಿದ್ದ. ರಾಷ್ಟ್ರೀಯ ಉದ್ಯಾನವನದ ಪ್ರಸ್ತಾಪ, ಅವನ ಮನೆಯವರು ಮತ್ತು ಗ್ರಾಮದ ಇತರರ ಕತ್ತಿಗೇ ಬಂದು ಕೂತಾಗ ಅವನು ಚಳುವಳಿಯಲ್ಲಿ ಭಾಗವಹಿಸುವುದು ಅನಿವಾರ್ಯ ವಾಗಿತ್ತು. ಅಳಂಬದಲ್ಲಿ ಅವನ ಬಗ್ಗೆ ನಮಗೆ ಹೇಳಿದ ಹಿರಿಯರಾದ ರಾಮಯ್ಯ ಗೌಡರು ಮತ್ತು ವಸಂತನ ಓರಿಗೆಯವರೇ ಆದ ಪೂವಯ್ಯ ಮಲೆಕುಡಿಯ, ವಸಂತ ಬೆಳ್ತಂಗಡಿಯಲ್ಲಿ ನೂರಾರು ಜನರ ಸಭೆ ಸೇರಿಸಿ ಭಾಷಣ ಮಾಡುತ್ತಿದ್ದುದನ್ನು ನೆನಪಿಸಿಕೊಂಡರು. ರಾಷ್ಟ್ರೀಯ ಉದ್ಯಾನವನದ ಹೆಸರಿನಲ್ಲಿ ಜನರನ್ನು ಒಕ್ಕಲೆಬ್ಬಿಸುವುದರ ವಿರುದ್ಧ ಚಿಕ್ಕಮಗಳೂರು, ಶಿವಮೊಗ್ಗ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಹೋರಾಟದ ನೇತೃತ್ವ ವಹಿಸಿದ್ದು ಕರ್ನಾಟಕ ವಿಮೋಚನಾ ರಂಗ (ಕ.ವಿ.ರಂ.) ಎಂಬ ಸಂಘಟನೆ. ಯಾವ ರಾಜಕೀಯ ಪಕ್ಷಕ್ಕೂ ನಿಷ್ಠೆ ಹೊಂದದ, ಆದರೆ ಎಡಪಂಥೀಯ ಧೋರಣೆಗಳುಳ್ಳ ಈ ಸಂಘಟನೆ ಕುದುರೆಮುಖ ಗಣಿಗಾರಿಕೆಯ ವಿರುದ್ಧ ದೊಡ್ಡ ಹೋರಾಟವನ್ನೇ ನಡೆಸಿತ್ತು. ಚಿಕ್ಕಮಗಳೂರಿನ ಬಾಬಾಬುಡನ್‌ಗಿರಿಯನ್ನು ವೈದಿಕೀಕರಣಗೊಳಿಸುವ ಸಂಘಪರಿವಾರದ ಹಿಂದುತ್ವ ರಾಜಕೀಯದ ವಿರುದ್ಧ ಕೂಡ ಕ.ವಿ.ರಂ. ಪ್ರತಿಭಟನೆಯನ್ನು ಸಂಘಟಿಸಿತ್ತು. ರಾಷ್ಟ್ರೀಯ ಉದ್ಯಾನವನ ವಿರೋಧಿ ಹೋರಾಟ, ಪ್ರಜಾಸತ್ತಾತ್ಮಕ ವಿಧಾನಗಳಲ್ಲಿ ಶಾಂತಿಯುತ ಚಳುವಳಿಯಾಗಿಯೇ ಪ್ರಾರಂಭವಾಯಿತು. ಯಾವ ಹಂತದಲ್ಲಿ ಅದು 'ನಕ್ಸಲ್' ಆಗಿ ಪರಿವರ್ತನೆಗೊಂಡಿತು ? ಈ ಹೋರಾಟದಲ್ಲಿ ಭಾಗವಹಿಸಿದ ವಸಂತನಿಗೆ ಆ ಬೆಳವಣಿಗೆಯ ಅರಿವು ಇತ್ತೆ ? ಅವನು ನಕ್ಸಲೀಯ ಅಥವಾ ಮಾವೋವಾದಿಯಾಗಿದ್ದರೆ, ಅದು ಯಾವತ್ತಿನಿಂದ ? ಅವನು ಬಂದೂಕು ಹಿಡಿದಿದ್ದರೆ ಅದು ಅವನ ಕೈಗೆ ಬಂದದ್ದು ಯಾವಾಗ, ಯಾರು ಅದನ್ನು ಅವನ ಕೈಯಲ್ಲಿ ಇಟ್ಟವರು ? ವಸಂತನ ಹೆತ್ತವರಿಗೆ ಈ ಬಗ್ಗೆ ಏನೂ ಗೊತ್ತಿಲ್ಲ. ಅವನ ಊರಿನವರಿಗೆ ಸಹ, ಈಗ ಅವನ ಬಗ್ಗೆ ನೆನಪಿನಲ್ಲಿ ಉಳಿದಿರುವುದು ಅವನು ಬೆಳ್ತಂಗಡಿಯಲ್ಲಿ ಸಭೆ ನಡೆಸುತ್ತಿದ್ದುದು ಮತ್ತು ಭಾಷಣ ಮಾಡುತ್ತಿದ್ದುದು ಮಾತ್ರ.

'ವಸಂತನ ಎನ್‌ಕೌಂಟರ್ ನಡೆದಮೇಲೆ, ಆ ಕುರಿತು ಪತ್ರಕರ್ತರ ಜೊತೆ ಮಾತಾಡುತ್ತ ಪಶ್ಚಿಮ ವಲಯ ಪೊಲೀಸು ವರಿಷ್ಠಾಧಿಕಾರಿ ಗೋಪಾಲ ಹೊಸೂರ್ ವಸಂತ, 'ಶಸ್ತ್ರಾಸ್ತ್ರ ದಾಳಿ, ಅರಣ್ಯ ಇಲಾಖೆಗೆ ವಂಚನೆ, ಅಧಿಕಾರಿಗಳ ಮೇಲೆ ದಾಳಿ, ಸಾರ್ವಜನಿಕರಿಗೆ ಹಲ್ಲೆ, ಪೊಲೀಸರ ಮೇಲೆ ದಾಳಿ ಸೇರಿದಂತೆ ಒಟ್ಟು ೩೦ ಪ್ರಕರಣಗಳಲ್ಲಿ ಪೊಲೀಸರಿಗೆ ಬೇಕಾಗಿದ್ದನು' ಎಂದು ಹೇಳಿದ್ದಾರೆ. ಹೊಸೂರ್ ಕರ್ನಾಟಕದ ದಕ್ಷ ಮತ್ತು ಪ್ರಾಮಾಣಿಕ ಪೊಲೀಸು ಅಧಿಕಾರಿಗಳಲ್ಲಿ ಒಬ್ಬರು. ಆದಾಗ್ಯೂ ಆರೋಪಿಗಳ ವಿರುದ್ಧ ಕೇಸು ದಾಖಲಿಸುವುದು ಕೆಳದರ್ಜೆಯ ಪೊಲೀಸು ಸಿಬ್ಬಂದಿಯಾಗಿರುವುದರಿಂದ, ವಸಂತನ ವಿರುದ್ಧ 'ಬುಕ್' ಮಾಡಲಾಗಿರುವ ಕೇಸುಗಳಲ್ಲಿ

ಎಷ್ಟು ಸ್ವತಃ ಪೊಲೀಸರೇ 'ಫಿಟ್' ಮಾಡಿರುವಂತಹವು ಎಂಬುದು ಕೇಳಬಾರದ ಪ್ರಶ್ನೆ ಏನಲ್ಲ. ಎನ್‌ಕೌಂಟರ್‌ನ ಹಾಗೆ 'ಕೇಸಿನಲ್ಲಿ ಫಿಟ್' ಮಾಡುವುದು ಕೂಡ ಈಗ ಕನ್ನಡದ್ದೇ ನುಡಿಗಟ್ಟಾಗಿ ಹೋಗಿದೆ. ವಸಂತ ನಕ್ಸಲೀಯನಾಗಿದ್ದನೋ ? ಆಗಿದ್ದರೆ ಯಾರು ಅವನಿಗೆ ನಕ್ಸಲ್ ದೀಕ್ಷೆ ಕೊಟ್ಟವರು ಎಂಬ ಪ್ರಶ್ನೆಗೆ ಉತ್ತರವಿಲ್ಲ. ಆದರೆ ಅವನು ತನ್ನ ಮನೆಯವರಿಂದ ದೂರವಾಗಿ ತಲೆಮರೆಸಿಕೊಂಡು ಇರಲು ಪ್ರಾರಂಭಿಸಿದ್ದು ಮಾತ್ರ ರಾಷ್ಟ್ರೀಯ ಉದ್ಯಾನವನ ವಿರೋಧಿ ಹೋರಾಟದ ಸಂದರ್ಭದಲ್ಲಿ. ಅವನ ವಿರುದ್ಧ ಕ್ರಿಮಿನಲ್ ಕೇಸು ದಾಖಲಾದಾಗ ಕಾಡಿಗೆ ಬೆಂಕಿ ಕೊಟ್ಟ ಎಂಬ ಫಾರೆಸ್ಟ್ ಡಿಪಾರ್ಟ್‌ಮೆಂಟಿನ ದೂರಿನ ಮೇಲೆ ಅವನ ವಿರುದ್ಧ ಕೇಸು, ವಾರಂಟು ಎಲ್ಲ ಶುರುವಾಯಿತು. ಇದನ್ನು ಅಳಂಬದಲ್ಲಿ ನಮ್ಮೊಡನೆ ಮಾತಾಡಿದ ವಸಂತನ ಊರಿನವರೇ ಹೇಳಿದರು. ರಾಷ್ಟ್ರೀಯ ಉದ್ಯಾನವನ ವಿರೋಧಿ ಹೋರಾಟ ಎಲ್ಲೆಲ್ಲಿ ನಡೆಯಿತೋ ಅಲ್ಲೆಲ್ಲ ಈ ಹೋರಾಟದ ಕಾರ್ಯಕರ್ತರ ವಿರುದ್ಧ ಪೊಲೀಸರು ಕೇಸು ದಾಖಲಿಸಿದ್ದಾರೆ. ಶೃಂಗೇರಿಯ ಕಲ್ಕುಳಿ ವಿಠಲ ಹೆಗ್ಡೆಯವರ ಮೇಲೆ ಹಲವು ಸುಳ್ಳು ಕೇಸುಗಳನ್ನು ಜಡಿಯಲಾಗಿದೆ; ಮರಿಯಪ್ಪ ಮತ್ತು ಇತರರ ಮೇಲೆ ಪೊಲೀಸು ಕೇಸು, ಜೈಲುವಾಸ – ಎಲ್ಲವನ್ನೂ ವಿಧಿಸಲಾಗಿದೆ.

ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಗಡಿಯ ಒಳಗಿರುವ ಕಾರ್ಕಳ ತಾಲ್ಲೂಕಿನ ಈದು ಗ್ರಾಮದಲ್ಲಿ ಪಾರ್ವತಿ ಮತ್ತು ಹಾಜಿಮಾ ಎಂಬ ಇಬ್ಬರು 'ನಕ್ಸಲ್' ಯುವತಿಯರ ಎನ್‌ಕೌಂಟರ್ ನಡೆದ ನಂತರ, ರಾಜ್ಯ ಸರಕಾರ, ಪಶ್ಚಿಮ ಘಟ್ಟದ ಕಾಡುಗಳಿಂದ ಯಾರನ್ನೂ ಬಲಾತ್ಕಾರವಾಗಿ ಒಕ್ಕಲೆಬ್ಬಿಸುವುದಿಲ್ಲ ಎಂದು ಪ್ರಕಟಿಸಿತು. ಅಳಂಬದಲ್ಲಿ, ಮೃತ ವಸಂತನ ಬಗ್ಗೆ ನಮ್ಮ ಜೊತೆ ಮಾತಾಡಿದ ಅವನ ಗ್ರಾಮಸ್ಥರು ಪಾರ್ವತಿ, ಹಾಜಿಮಾರನ್ನು ನೆನಪು ಮಾಡಿಕೊಂಡರು. ೨೦೦೮ರಲ್ಲಿ ಶೃಂಗೇರಿಯ ಕಿಗ್ಗ ಎನ್‌ಕೌಂಟರ್‌ನಲ್ಲಿ ಕೊಲ್ಲಲ್ಪಟ್ಟ ಇನ್ನೊಬ್ಬ 'ನಕ್ಸಲ್' ದಿನಕರ ಗೌಡನನ್ನೂ ಗ್ರಾಮಸ್ಥರು ನೆನಪಿಸಿಕೊಂಡರು. ದಿನಕರ ಗೌಡ ಕೂಡ ಕುತ್ಲೂರಿನವನು. ಅವನ ಮನೆ, ವಸಂತನ ಮನೆಗೆ ಸಮೀಪದಲ್ಲಿಯೇ ಇದೆ. ಅದೂ ಅಲ್ಲದೆ ದಿನಕರ ಗೌಡ ವಸಂತನ ಭಾವ, ಅಂದರೆ ಸುಂದರಿಯ ಗಂಡ. ಪಶ್ಚಿಮ ಘಟ್ಟದ ತಪ್ಪಲಿನ ಅರಣ್ಯವಾಸಿಗಳಿಗೆ ಒಕ್ಕಲೆಬ್ಬಿಸುವುದಿಲ್ಲ ಎಂದು ಸರಕಾರ ನೀಡಿದ ಆಶ್ವಾಸನೆಗೆ, ಪಾರ್ವತಿ, ಹಾಜಿಮಾ, ದಿನಕರ ಗೌಡ, ಸುಂದರಿ ಮತ್ತು ವಸಂತರಂತಹವರು ನಡೆಸಿದ ಹೋರಾಟವೇ ಕಾರಣ ಎಂಬ ಧ್ವನಿ, ಗ್ರಾಮಸ್ಥರ ಮಾತಿನಲ್ಲಿತ್ತು. ಹಾಗೆಂದು ಇವರಿಗೆ ಫಾರೆಸ್ಟ್ ಇಲಾಖೆಯವರ ಕಿರುಕುಳ ಈಗಲೂ ಪೂರ್ತಿ ನಿಂತಿಲ್ಲ. ಸರಕಾರ ಕೊಡುವ ಪರಿಹಾರದ ಹಣ ತೆಗೆದುಕೊಂಡು ಜಾಗ ಖಾಲಿ ಮಾಡಬೇಕು ಎಂಬ ಒತ್ತಡ ಇವರ ಮೇಲೆ ಮುಂದುವರಿದಿದೆ. ೮೦ರ ಹರೆಯದ ರಾಮಯ್ಯ ಗೌಡ, ಈ ವಿಷಯದ ಕುರಿತು ಮಾತನಾಡುತ್ತ, ''ನಾವು, ನಮ್ಮ ವಂಶದವರು ಅನಾದಿಕಾಲದಿಂದಲೂ ಇಲ್ಲಿಯೇ ವಾಸ ಮಾಡಿಕೊಂಡಿದ್ದವರು. ಬ್ರಿಟಿಷರ ಕಾಲದಲ್ಲಿ ನಮ್ಮ ಜಾಗ ಸರ್ವೆ ಮಾಡಿ, ಒಂದೊಂದು ಮನೆಯವರಿಗೆ ಇಂತಿಷ್ಟು ಎಂದು ನಿಗದಿ ಮಾಡಿದರು. ಆವತ್ತಿನಿಂದ ಇವತ್ತಿನವರೆಗೆ ನಾವು ಕಾಡಿನ ಒಂದಿಂಚು ಜಾಗವನ್ನೂ ಒತ್ತುವರಿ ಮಾಡಿಲ್ಲ. ಕಾಡಿಗೆ ನಾವು ಏನೂ ಉಪದ್ರವ ಮಾಡಿಲ್ಲ. ಸರಕಾರ ಯಾಕೆ ನಮ್ಮನ್ನು ಇಲ್ಲಿಂದ ಹೊರಟುಹೋಗಿ ಎಂದು ಹೇಳುತ್ತಿದೆ ?'' ಎಂದು ಕೇಳಿದರು. ರಾಜ್ಯದ ಕೊಡಗು, ಹಾಸನ, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳ ದೊಡ್ಡ ಭೂಮಾಲಕರು, ಮತ್ತು ಅವರವರ ಶಕ್ತಿ ಸಾಮರ್ಥ್ಯಕ್ಕೆ ತಕ್ಕಂತೆ ಮಧ್ಯಮ ಮತ್ತು ಸಣ್ಣ ಹಿಡುವಳಿದಾರರು ಸಹ ಸಾವಿರಾರು ಎಕ್ರೆ ಅರಣ್ಯಭೂಮಿಯನ್ನು ಒತ್ತುವರಿ ಮಾಡಿಕೊಂಡು ಕಾಫಿ, ಅಡಿಕೆ ತೋಟಗಳನ್ನಾಗಿ ಪರಿವರ್ತಿಸಿರುವ ಅಕ್ರಮವನ್ನು ಸರಕಾರವೇ ಸಕ್ರಮಗೊಳಿಸಿದೆ. ಆದರೆ ಅರಣ್ಯ ರಕ್ಷಣೆಯ ಕಾರಣ ಕೊಟ್ಟು ಪಶ್ಚಿಮ ಘಟ್ಟದ ಕಾಡುಗಳಿಂದ ಜನರನ್ನು ನಿಕಾಲೆ ಮಾಡಲು ಯತ್ನಿಸುತ್ತಿದೆ.

ಈ ಜನ, ಫಾರೆಸ್ಟ್ ಇಲಾಖೆಯ ಕಿರುಕುಳದ ಜೊತೆ, ಈಗ ನಕ್ಸಲ್ ನಿಗ್ರಹದ ಹೆಸರಿನಲ್ಲಿ ಲಂಗುಲಗಾಮಿಲ್ಲದ ಪೊಲೀಸು ಹಿಂಸಾಚಾರವನ್ನೂ ಅನುಭವಿಸಬೇಕಾಗಿದೆ. ಅಳಂಬದಲ್ಲಿ ನಮ್ಮೊಡನೆ ಮಾತಾಡಿದವರಲ್ಲಿ ಒಬ್ಬರಾದ ಪೂವಯ್ಯ, ಈ ವರ್ಷ ಜನವರಿಯಲ್ಲಿ ಕಾರ್ಕಳ ಪೊಲೀಸರ ಕೈಯಲ್ಲಿ ತಾನು ಸಿಕ್ಕಿಹಾಕಿಕೊಂಡು ಪಟ್ಟ ಪಾಡನ್ನು ಹೇಳಿಕೊಂಡರು. ಸುಮಾರು ೩೦ ವರ್ಷ ಪ್ರಾಯದ ಪೂವಯ್ಯನವರಿಗೆ ಮೃತ ವಸಂತನ ಜೊತೆ ನಿಕಟವಾದ ಒಡನಾಟವಿತ್ತು. ಪೂವಯ್ಯ ಕೂಡ ವಸಂತ, ಸುಂದರಿ, ದಿನಕರ ಗೌಡ ಮತ್ತು ವಿಕ್ರಮ ಗೌಡರ ಹಾಗೆ ಮಲೆಕುಡಿಯ ಸಮುದಾಯಕ್ಕೆ ಸೇರಿದವರು. ಇವರೆಲ್ಲರೂ, ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಯೋಜನೆಯ ಸಂತ್ರಸ್ತರು. ನಮ್ಮ ಮಾಧ್ಯಮಗಳು ನಕ್ಸಲ್ ಸಮಸ್ಯೆಯನ್ನು ವರದಿ ಮಾಡುವಾಗಲೆಲ್ಲ ಒಂದೆಡೆಯಿಂದ ನಕ್ಸಲರು, ಇನ್ನೊಂದೆಡೆಯಿಂದ ಪೊಲೀಸರ ಕಾಟಕ್ಕೆ ಸಿಕ್ಕಿ ನಲುಗುವ ಮುಗ್ಧ, ಅಸಹಾಯಕ ಮಲೆಕುಡಿಯರ ಚಿತ್ರಣವನ್ನು ತಪ್ಪದೆ ಕೊಡುತ್ತವೆ. ಸನ್ನಿವೇಶದ ಮೂಕಬಲಿಯಾಗುವುದನ್ನು ಹೊರತುಪಡಿಸಿ ಮಲೆಕುಡಿಯರಿಗೆ ಈ ಚಿತ್ರಣದಲ್ಲಿ ಯಾವ ಪಾತ್ರವೂ ಇಲ್ಲ. ಪಶ್ಚಿಮ ಘಟ್ಟದ ನಕ್ಸಲ್ ಪೀಡಿತ ಹಳ್ಳಿಗಳ ಮಲೆಕುಡಿಯರು ಖಂಡಿತ, ಅಸಹಾಯಕರು; ಬಹುಮಟ್ಟಿಗೆ ಮುಗ್ಧರೂ ಹೌದು. ಆದರೆ ಅವರು ಮೂಕಬಲಿಯಾಗಲು ಈಗ ನಿರಾಕರಿಸುತ್ತಿದ್ದಾರೆ. ವಸಂತ, ಅವನ ತಂಗಿ ಸುಂದರಿ, ಆಕೆಯ ಗಂಡ ದಿನಕರ ಗೌಡ, ಎನ್‌ಕೌಂಟರ್ ನಡೆದಾಗ ವಸಂತನ ಜೊತೆಗಿದ್ದ ವಿಕ್ರಮ ಗೌಡ ಮತ್ತು ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವಿರೋಧಿ ಹೋರಾಟದಲ್ಲಿ ಭಾಗಿಗಳಾಗಿದ್ದ ಎಲ್ಲರೂ, ಈ ಮಾತಿಗೆ ಜ್ವಲಂತ ನಿದರ್ಶನಗಳು. ಈ ಹೋರಾಟದಲ್ಲಿ ಭಾಗಿಯಾಗಿದ್ದ ಕುತ್ಲೂರಿನ ಮಲೆಕುಡಿಯರಲ್ಲಿ, ಪೂವಯ್ಯ ಕೂಡ ಒಬ್ಬರು. ಈ ವರ್ಷ ಜನವರಿಯಲ್ಲಿ ಒಂದು ದಿನ, ಅವರು ನಾರಾವಿಯ ಸಮೀಪ ಅವರ ಪೈಕಿಯವರ ಒಂದು ಮದುವೆ ಸಮಾರಂಭದಲ್ಲಿ ಭಾಗವಹಿಸಿ, ತನ್ನ ಮನೆಗೆ ವಾಪಸ್ಸು ನಡೆದುಹೋಗುತ್ತಿದ್ದಾಗ, ಕುಕ್ಕುಜೆ ಎಂಬಲ್ಲಿ, ಪೊಲೀಸರು ಅವರನ್ನು ತಡೆದು ಜೀಪು ಹತ್ತಿಸಿದರು. ಜೀಪಿನಲ್ಲಿ ಅವರ ಕಣ್ಣಿಗೆ ಬಟ್ಟೆಕಟ್ಟಿ, ಸುಮಾರು ಮೂರು



*ನಕ್ಸಲರೊಂದಿಗೆ ಸಂಪರ್ಕ ಹೊಂದಿದ್ದನೆಂದು ಚಿತ್ರಹಿಂಸೆಗೊಳಗಾದ ಪೂವಯ್ಯ ಮಲೆಕುಡಿಯ*

ಗಂಟೆಗಳ ಪ್ರಯಾಣದ ನಂತರ ಅವರನ್ನು ಒಂದು ಪೋಲಿಸು ಠಾಣೆಗೆ ಒಯ್ದು (ತೀರ್ಥಹಳ್ಳಿ ಠಾಣೆ ಎಂದು ಪೂವಯ್ಯನವರ ಊಹೆ) ಅಲ್ಲಿ ಅವರನ್ನು ಇಡೀ ರಾತ್ರಿ ಮಾಮೂಲಿ ಪೊಲೀಸು ವಿಧಾನಗಳಲ್ಲಿ ರಿಪೇರಿ ಮಾಡಲಾಯಿತು. ಪೊಲೀಸರ ವರಾತ ಒಂದೇ. ''ವಸಂತನ ಬಗ್ಗೆ ಹೇಳು; ನಕ್ಸಲರ ಬಗ್ಗೆ ನಿನಗೆ ಗೊತ್ತಿದೆ; ಹೇಳು.'' ಪೂವಯ್ಯನವರಿಗೆ ವಸಂತನ ಬಗ್ಗೆಯಾಗಲೀ, ನಕ್ಸಲ್‌ರ ಬಗ್ಗೆಯಾಗಲೀ ನಿಜಕ್ಕೂ ಏನೂ ಗೊತ್ತಿರಲಿಲ್ಲ. ಆದರೆ ಪೊಲೀಸರು ಅದನ್ನು ನಂಬಲು ತಯಾರಿರಲಿಲ್ಲ. ಪೂವಯ್ಯನವರ ಬಾಯಿ ಬಿಡಿಸುವ ತಮ್ಮ ವ್ಯರ್ಥ ಪ್ರಯತ್ನವನ್ನು ಮರುದಿನ ಸಂಜೆ ೪ ಗಂಟೆಯವರೆಗೂ ಮುಂದುವರಿಸಿ ಪೊಲೀಸರು ಅವರನ್ನು ಶಿವಮೊಗ್ಗ ಮ್ಯಾಜಿಸ್ಟ್ರೇಟರ ಎದುರು ಹಾಜರು ಪಡಿಸಿದರು. ಪೂವಯ್ಯರನ್ನು ೨೪ ಗಂಟೆ ಬಂಧನದಲ್ಲಿ ಇಡಲು, ಪೊಲೀಸರು, ಮ್ಯಾಜಿಸ್ಟ್ರೇಟರಿಗೆ ಕೊಟ್ಟ ವಿವರಣೆ: ''ತೀರ್ಥಹಳ್ಳಿ ಬಸ್‌ಸ್ಟ್ಯಾಂಡಿನಲ್ಲಿ ಪೂವಯ್ಯ ಅನುಮಾನಾಸ್ಪದವಾಗಿ ಓಡಾಡುತ್ತಿದ್ದರು'' ಎಂಬುದಾಗಿತ್ತು. ಪೂವಯ್ಯರಿಗೆ ಪೊಲೀಸರು ಆವತ್ತು ಮಾಡಿದ ಉಪಚಾರದಿಂದ ಅವರು ಈಗಲೂ ಚೇತರಿಸಿಕೊಂಡಿಲ್ಲ. ಅವರನ್ನು ವಶಕ್ಕೆ ತೆಗೆದುಕೊಂಡದ್ದು ಏಕೆ ಎಂಬುದರ ಬಗ್ಗೆ ಮ್ಯಾಜಿಸ್ಟ್ರೇಟರ ಬಳಿ ಹಸಿಸುಳ್ಳು ಹೇಳಿದ ಪೊಲೀಸರು ಒಂದು ವಿಷಯದಲ್ಲಿ ಮಾತ್ರ ನ್ಯಾಯವಾಗಿ ನಡೆದುಕೊಂಡರು ಎಂಬುದನ್ನು ಇಲ್ಲಿ ಕಾಣಿಸಲೇಬೇಕು. ಆ ದಿನ ಪೂವಯ್ಯನವರ ಕಿಸೆಯಲ್ಲಿ ೨೨೦ ರೂಪಾಯಿ ಇತ್ತು. ತೀರ್ಥಹಳ್ಳಿಯಲ್ಲಿ ಪೊಲೀಸರು ಕಾಫಿ ತಿಂಡಿಗೆ ೨೦ ರೂಪಾಯಿ ತೆಗೆದುಕೊಂಡು ಉಳಿದ ಹಣವನ್ನು ಪೂವಯ್ಯನವರ ಕಿಸೆಯಲ್ಲಿಯೇ ಉಳಿಸಿ ಉಪಕಾರ ಮಾಡಿದ್ದರು. ಪೊಲೀಸರು ಹೇಳುವುದೆಲ್ಲ ಸುಳ್ಳು ಎಂಬ ತೀರ್ಮಾನಕ್ಕೆ

ನಾವು ಬರಬೇಕಿಲ್ಲ. ಆದರೆ ಪೊಲೀಸರು ಒಂದು ಸಂಗತಿಯ ಬಗ್ಗೆ ನಿಜವನ್ನೇ ಹೇಳಿದಾಗಲೂ ವಾಸ್ತವದ ಸತ್ಯಕ್ಕೆ ಬೇರೆ ಮುಖಗಳೂ ಇರುತ್ತವೆ. ಉದಾಹರಣೆಗೆ, ಪೊಲೀಸು ಎನ್‌ಕೌಂಟರ್ ನಡೆದಾಗ ವಸಂತನ ಕೈಯಲ್ಲಿ ಎಸ್.ಎಲ್.ಆರ್. ಬಂದೂಕು ಇತ್ತು ಹಾಗೂ ಸ್ಥಳದಿಂದ ಪಲಾಯನ ಮಾಡಿದ ಸುಂದರಿ ಮತ್ತು ವಿಕ್ರಮ ಗೌಡರ ಬಳಿ ಎ.ಕೆ.೪೭ ಗನ್ ಇದೆ ಎಂಬ ಪೊಲೀಸು ಹೇಳಿಕೆ ನಿಜವೇ ಇರಬಹುದು. ಆದರೆ ಆಯುಧ ಇರಿಸಿಕೊಂಡ ಮಾತ್ರಕ್ಕೆ ಅವರು ಹಿಂಸಾವಾದಿಗಳಾಗುತ್ತಾರೆಯೆ ? ಪೊಲೀಸರು ಈ ನಕ್ಸಲ್‌ರಿಗೆ ಆರೋಪಿಸಿರುವ ಕ್ರಿಮಿನಲ್ ಕೃತ್ಯಗಳು, ಹಿಂಸಾತ್ಮಕ ಕ್ರಾಂತಿಯೊಂದರ ತಯಾರಿ ಎಂದು ಭಾವಿಸ ಬಹುದೇ ? ಅಹಿಂಸಾತ್ಮಕ ಪ್ರತಿಭಟನೆಯ ಮಾರ್ಗಗಳು ತೆರೆದುಕೊಂಡಿದ್ದಾಗಲೂ ವಸಂತ ಮತ್ತು ಇತರರು ಬೇಕು ಬೇಕೆಂದೇ ಹಿಂಸೆಯ ಹಾದಿಯನ್ನು ಆಯ್ದುಕೊಂಡರೆ ? ಈ ಪ್ರಶ್ನೆಗಳ ಕುರಿತು ನಮ್ಮ ನಮ್ಮ ಮೂಗಿನ ನೇರಕ್ಕೆ ಸರಿಯಾಗಿ ಎಷ್ಟೂ ಮಾತು ಬೆಳೆಸಬಹುದು. ಆದರೆ ಸಾಯುವ ಕಾಲಕ್ಕೆ ವಸಂತ ಕೈಯಲ್ಲಿ ಬಂದೂಕು ಹಿಡಿದಿದ್ದರೂ ಕಾಲಲ್ಲಿ ''ತೊಟ್ಟಿದ್ದು ಮಾತ್ರ ಹರಿದ ಚಪ್ಪಲಿ. ಅದಕ್ಕೆ ಚಪ್ಪಲಿ ತುಂಡೊಂದನ್ನು ಜೋಡಿಸಲಾಗಿತ್ತು.'' (ವಿಜಯ ಕರ್ನಾಟಕ, ೦೨.೦೩.೨೦೧೦, ಪುಟ ೧೨).

ಈ ವಿವರ ಪೊಲೀಸ್ ಎನ್‌ಕೌಂಟರ್ ಒಂದರ ಮಾಮೂಲು ವರದಿಯನ್ನು ರೋಚಕ ಗೊಳಿಸಬಹುದು. ಆದರೆ ಅದರಷ್ಟಕ್ಕೆ ಅದು ಅಂತಹ ಗಮನಾರ್ಹ ಸಂಗತಿ ಏನೂ ಅಲ್ಲ. ವಸಂತ ಮತ್ತು ಇತರ ಮಲೆಕುಡಿಯರಿಗೆ ಬಡತನದ ಕಾರ್ಪಣ್ಯ ಹೊಸತಲ್ಲ; ಆದರೆ ಸರಕಾರ ಒಮ್ಮಿಂದೊಮ್ಮೆಗೆ ''ನಿಮ್ಮ ಊರು ಮನೆಗಳಲ್ಲೇ ನೀವು ಅಕ್ರಮವಾಸಿಗಳು'' ಎಂದು ಆಪಾದಿಸಿ ಜಾಗ ಖಾಲಿಮಾಡಲು ತಾಕೀತು ಮಾಡಿದ್ದು ಅವರಿಗೆ ಹೊಚ್ಚ ಹೊಸ ಅನುಭವ. ವಸಂತ ನೇತೃತ್ವ ವಹಿಸಿದ ರಾಷ್ಟ್ರೀಯ ಉದ್ಯಾನವನ ವಿರೋಧಿ ಹೋರಾಟವು ಸರಕಾರದ ಮುಂದೆ ಯಾವುದೇ ಹೆಚ್ಚುವರಿ ಸವಲತ್ತಿನ ಬೇಡಿಕೆಯನ್ನು ಇಟ್ಟಿರಲಿಲ್ಲ. ಪಶ್ಚಿಮ ಘಟ್ಟದ ಮಲೆಕುಡಿಯರು ತಮ್ಮ ಬದುಕಿನ ಯಥಾಸ್ಥಿತಿಯನ್ನು ಉಳಿಸಿಕೊಳ್ಳಲು ಹೋರಾಟದ ಹಾದಿ ಹಿಡಿಯಬೇಕಾದದ್ದೇ ಒಂದು ದೊಡ್ಡ ವಿಪರ್ಯಾಸ. ಅವರು ಪ್ರಜಾಸತ್ತಾತ್ಮಕ ಮಾರ್ಗಗಳಲ್ಲೇ ತಮ್ಮ ಹೋರಾಟ ನಡೆಸಿದರು. ಸರಕಾರ ಅದನ್ನು ನಿರ್ಲಕ್ಷಿಸಿತು. ಪ್ರಜಾಪ್ರಭುತ್ವದ ಈ ವಿಕಟ ನಾಟಕ ಈಗ ದೇಶದೆಲ್ಲೆಡೆ ನಡೆದಿದೆ. ಒರಿಸ್ಸಾ, ಜಾರ್ಖಂಡ್, ಛತ್ತೀಸ್‌ಗಢ ರಾಜ್ಯಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಗಣಿಗಳಿಗೋಸ್ಕರ, ಅಲ್ಲಿ ನೆಲೆಸಿರುವ ಆದಿವಾಸಿಗಳನ್ನು ಬಲಾತ್ಕಾರದಿಂದ ಒಕ್ಕಲೆಬ್ಬಿಸಲಾಗುತ್ತಿದೆ. ಅದರ ವಿರುದ್ಧ ನಡೆಯುತ್ತಿರುವ ಪ್ರಜಾಸತ್ತಾತ್ಮಕ ಹೋರಾಟವನ್ನು ಸರಕಾರ, ಅತ್ಯಂತ ಕ್ರೂರ ವಿಧಾನಗಳ ಮುಖಾಂತರ ದಮನಿಸಿದೆ. ಅದೃಷ್ಟವಶಾತ್ ಕರ್ನಾಟಕದ ಮಲೆಕುಡಿಯರು ವಾಸಿಸಿ ಕೊಂಡಿರುವ ಅರಣ್ಯದಲ್ಲಿ ಕಬ್ಬಿಣ, ಅಲ್ಯುಮಿನಿಯಂ, ಯುರೇನಿಯಂ ಮುಂತಾದ ಖನಿಜಗಳ ನಿಕ್ಷೇಪವಿಲ್ಲ. ಹಾಗಾಗಿ ರಾಜ್ಯ ಸರಕಾರ ಸದ್ಯದ ಮಟ್ಟಿಗಾದರೂ ಅವರನ್ನು ಒಕ್ಕಲೆಬ್ಬಿಸುವ ತನ್ನ ನಿರ್ಧಾರವನ್ನು ಅಮಾನತ್ತಿನಲ್ಲಿ ಇರಿಸಿದೆ. ಆದರೆ ಸರಕಾರದ ಈ 'ಔದಾರ್ಯ'ಕ್ಕೆ ಮಲೆಕುಡಿಯರು ತೆತ್ತಿರುವ ಬೆಲೆ ಅಗಾಧವಾದದ್ದು. ಇಲ್ಲಿ ಹಿಂಸೆ ನಡೆಸುತ್ತಿರುವವರು ಯಾರು ? ಹಿಂಸೆಗೆ ಬಲಿಯಾಗುತ್ತಿರುವವರು ಯಾರು ? ಮಾಧ್ಯಮಗಳು ಮಲೆಕುಡಿಯ ವಸಂತನನ್ನು ನಕ್ಸಲ್ ಎಂದು ಕರೆದಿವೆ; ನಕ್ಸಲ್ ಎಂಬ ನಾಮಪದ, ಬುದ್ಧಿಗೇಡಿ ಹಿಂಸೆಗೆ ಒಂದು ಪರ್ಯಾಯ ಪದ ಎಂಬಂತೆಯೂ ಪ್ರಚಾರ ನಡೆದಿದೆ. ಸರಕಾರ ವಸಂತನ ಮೇಲೆ ಹಿಂಸೆಯ ಆರೋಪವನ್ನು ಹೊರಿಸುವುದರ ಜೊತೆ, ತನ್ನ ತೀರ್ಪನ್ನು ಸಹ ಜಾರಿಗೊಳಿಸಿದೆ. ನಕ್ಸಲ್ ವಸಂತನ ಕುರಿತು ಮಾಧ್ಯಮಗಳ ತೀರ್ಮಾನ ಮತ್ತು ಸರಕಾರದ ಮರಣದಂಡನೆಯ ತೀರ್ಪು ನ್ಯಾಯಸಮ್ಮತವೆ ? ವಸಂತನದ್ದು ಹಿಂಸಾತ್ಮಕ ಹೋರಾಟ; ಹಾಗಾಗಿ ಅವನಿಗೆ ಆದದ್ದು ನ್ಯಾಯ ಎಂದೇ ಇಟ್ಟುಕೊಂಡರೂ ವಸಂತನಿಗೆ ಹೋರಾಟದ ಬೇರೆ ಯಾವ ಹಾದಿ ತೆರೆದಿತ್ತು ? ಕಳೆದ ೧೫ ವರ್ಷಗಳಲ್ಲಿ ಸರಕಾರದ ನಿರ್ದಯ ಆರ್ಥಿಕ ಧೋರಣೆಗಳಿಂದಾಗಿ ಲಕ್ಷಾಂತರ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇದನ್ನು ಪ್ರಜಾಸತ್ತಾತ್ಮಕ ಅಹಿಂಸಾವಾದಿ ಪ್ರತಿಭಟನೆ ಎಂದು ಭಾವಿಸಬಹುದೋ ? ವಸಂತ ಈ ಆತ್ಯಂತಿಕ ಮಾರ್ಗವನ್ನು ಹಿಡಿಯಲಿಲ್ಲ. ಅಕಾಲದಲ್ಲಿ ದುರ್ಮರಣ ಹೊಂದುವುದರ ಜೊತೆಗೆ ಅದಕ್ಕೆ ಒಂದು ಕಾರಣವನ್ನೂ ಅವನು ಬಿಟ್ಟುಹೋಗಿದ್ದಾನೆ. ಅಹಿಂಸಾವಾದಿಗಳು ನೆಮ್ಮದಿಯಾಗಿರಲು ಅಷ್ಟು ಸಾಲದೆ ?

(ಇದು ಅಧಿಕೃತ ಪಿ.ಯು.ಸಿ.ಎಲ್. ವರದಿ ಅಲ್ಲ. ಈ ಬರಹದ ಅಭಿಪ್ರಾಯಗಳಿಗೆ ನಾನು ಮಾತ್ರ ಜವಾಬ್ದಾರ).

ಜಿ. ರಾಜಶೇಖರ
'ವಿಷ್ಣುನಂದನ್' (ಚಾಕೊಲೇಟ್ ಫ್ಯಾಕ್ಟರಿ ಬಳಿ), ಕೊಳಂಬೆ, ಉಡುಪಿ - ೫೭೬ ೧೦೧

# ಹೃದಯದ ಮೇಲೆ ಮಮತೆಯ ಅಕ್ಷರ



ಬೆಳಗಿನಿಂದ ಸರಿ ರಾತ್ರಿವರೆಗೆ
ಅವರಿವರಿಂದ ಓದಿಸಿಕೊಂಡ ನ್ಯೂಸ್‌ಪೇಪರಿನಂತೆ
ಮೂಲೆಯಲಿ ಮುದುರಿಕೊಂಡು ಬಿದ್ದಿದೆ ಮನಸು

ಓ ! ಗರ್ಭ ಶಿಶುವೆ
ಕ್ಷಮೆಯಿರಲಿ ನನ್ನೀ ಅಮಾಯಕ ಸ್ಥಿತಿಗೆ
ಕಣ್ಣೀರು ಕವಿತೆಯಾಗುವ ಕಾಲ ಬಂದಿದೆ

ಇತಿಹಾಸವನ್ನು ಕೆಣಕಬಾರದು
ಭವಿಷ್ಯವೆಂಬುದು ಗಗನ ಕುಸುಮ
ನೆನಪುಗಳು ಅನಂತ
ಕನಸುಗಳು ಮಾತ್ರ ಕಡಲ ಬದಿಯ ಮರಳ ಮನೆ

ನಿನ್ನ ಹೃದಯದ ಮೇಲೆ ಮಮತೆಯ ಅಕ್ಷರಗಳನ್ನು ಬರೆಯುತ್ತಿರುವ
ಜನ್ಮದಾತೆಯ ಉಡಿಯಲ್ಲಿ ಫಲ ತಾಂಬೂಲಗಳಿರಲಿ
ಅವಳ ಆಯುಸ್ಸು ವೃದ್ಧಿಯಾಗಲಿ

ನಿನ್ನ ಹೆಸರಿನೊಂದಿಗೆ
ನನ್ನ ಹರಕೆ ಕಾಡಿಗೆಯ
ದೃಷ್ಟಿ ಬೊಟ್ಟಿರಲಿ
ನಾದಕ್ಕೆ ಮನಸೋಲದ ದುಷ್ಟ ಯುಗ ಬಂದೀತು
ಜೋಕೆ ಕರುಳ ಕುಡಿಯೆ

ಮಲ್ಲಿಕಾರ್ಜುನ ಛಬ್ಬಿ
'ಕಾವ್ಯ ದೀಪ್ತಿ', ಹುಣಸನಹಳ್ಳಿ ಅಂಚೆ, ಕೋಡಿಹಳ್ಳಿ ಹೋಬಳಿ
ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ - ೫೬೨ ೧೧೯



ನಭಾವಲೋಕನ

# ಮಂಗಳ-ಶುಕ್ರಗಳ 'ರಹಸ್ಯ' ಭೇಟಿ

**ಸಂ**ಜೆಯ ಆಕಾಶದಲ್ಲಿ ಕಳೆದ ತಿಂಗಳಿಂದ ಕಾಣುತ್ತಿರುವ ಮೂರು ಗ್ರಹಗಳನ್ನು ಪರಿಚಯಿಸಿ ಕೊಳ್ಳಲು ಚಂದ್ರನ ಸಹಾಯ ಅಗತ್ಯವೇನಿಲ್ಲ; ಆದರೂ ಚಂದ್ರ ೧೪, ೧೫ ಮತ್ತು ೧೬ರಂದು ಅವುಗಳ ಪಕ್ಕ ರಾರಾಜಿಸಿ ತನ್ನ ಕರ್ತವ್ಯವನ್ನು ನಿರ್ವಹಿಸುವಾಗ ಮತ್ತೊಮ್ಮೆ ಪರಿಚಯಕ್ಕೆ ಅವಕಾಶವಿದೆ. ಕಟಕದಿಂದ ಸಿಂಹಕ್ಕೆ ಸಾಗುವಾಗ ಶುಕ್ರ ಗ್ರಹ ಮಘನಕ್ಷತ್ರವನ್ನು ಸಮೀಪಿಸಿ ಮುಂದೆ ಸಾಗುವುದನ್ನು ಕಾಣಬಹುದು. ತಿಂಗಳ ಆರಂಭದಲ್ಲಿ ಈ ಮೂರೂ ಗ್ರಹಗಳು ಮತ್ತು ಮಘ ನಕ್ಷತ್ರ ಸರತಿಯ ಸಾಲಿನಲ್ಲಿ ನಿಂತಂತೆ ಕಾಣುತ್ತದೆ. ತಿಂಗಳ ಕೊನೆಗೆ ಮಂಗಳ - ಶುಕ್ರಗಳ ಹಸ್ತಲಾಘವ ನಡೆಯುತ್ತದೆ. ಬಹುಶಃ ಇದು ಮೋಡಗಳ ಹಿಂದೆ ನಡೆದು ನಮಗೆ ಕಾಣದೆಯೇ ಇರಬಹುದು. ಅದರಿಂದಲೇ ರಹಸ್ಯ ಎಂದಿದ್ದು. ಮುಂಗಾರೆಂದರೆ ಸಂಜೆ ಮಳೆ ಖಚಿತವಲ್ಲವೇ ?

ಬುಧ ಗ್ರಹ ತಿಂಗಳ ಮಧ್ಯ ದಿಂದಲೇ ಸಂಜೆ ಪಶ್ಚಿಮದ ಅಂಚಿನಲ್ಲಿ ಕಾಣುತ್ತದೆ; ತಿಂಗಳ ಕೊನೆಗೆ ಸ್ಫುಟವಾಗಿಯೇ ಕಾಣುತ್ತದೆ. ಆಕಾಶ ಶುಭ್ರವಾಗಿದ್ದರೆ ಮಾತ್ರ !

ಗುರು ನಡುರಾತ್ರಿಗೆ ಉದಯಿಸುತ್ತದೆ. ಬೆಳಗಿನ ಜಾವ ನೆತ್ತಿಯ ಮೇಲೆ ಕಾಣುತ್ತದೆ. ಮುಂದಿನ ತಿಂಗಳುಗಳಲ್ಲಿ ಉಂಟಾಗುವ ವಿಯುತಿಯ ಸೂಚಕವಾಗಿ ಹಿನ್ನಡೆ ಆರಂಭವಾಗುತ್ತದೆ.

ಸಂಜೆಯ ಆಕಾಶದ ಪುಂಜಗಳಲ್ಲಿಯ ಬದಲಾವಣೆ ಈಗಾಗಲೇ ಗಮನಕ್ಕೆ ಬಂದಿರಬೇಕು. ನೆತ್ತಿಯ ಮೇಲೆ ಯಾವುದೇ ಪ್ರಕಾಶಮಾನ ಪುಂಜವಿಲ್ಲವೇ ಎನ್ನಿಸಬಹುದು. ಅಲ್ಲಿ ಕಾಣುವ ಕೆಂಪು ನಕ್ಷತ್ರವೇ ಸ್ವಾತಿ; ಅದಕ್ಕಿಂತ ತುಸು ದಕ್ಷಿಣಕ್ಕಿರುವುದು ಚಿತ್ತಾ. ಉತ್ತರದ ಸಪ್ತರ್ಷಿ ಮಂಡಲವನ್ನು ಸ್ಪಷ್ಟವಾಗಿ ಗುರುತಿಸಬಹುದು. ಆರನೆಯ ನಕ್ಷತ್ರ (ವಸಿಷ್ಠ)ಕ್ಕೆ ಸಂಗಾತಿ ಇದೆಯೇ ಇಲ್ಲವೇ ಎಂದು ಹುಡುಕಿ ನಿಮ್ಮ ದೃಷ್ಟಿ ಶಕ್ತಿಯನ್ನು ಪರೀಕ್ಷಿಸಬಹುದು. ಕಾಣದಿದ್ದಲ್ಲಿ ಮೋಡಗಳ ಮೇಲೆ ದೋಷ ಹೊರೆಸಿ ಪಾರಾಗಬಹುದು !

ದಕ್ಷಿಣದಲ್ಲಿ ಸಾಕಷ್ಟು ಆಕರ್ಷಕ ನಕ್ಷತ್ರಪುಂಜಗಳಿವೆ. ತ್ರಿಶಂಕು ಅವುಗಳಲ್ಲಿ ಅತ್ಯಂತ ಸುಂದರವಾದುದು. ಆಕಾಶದ ಆ ಭಾಗದಲ್ಲಿ ನಕ್ಷತ್ರಗಳು ಹೆಚ್ಚು ಕಣ್ಣನ್ನು ಹಾಗೆಯೇ ಪೂರ್ವಕ್ಕೆ ಹೊರಳಿಸಿ. ಅತ್ಯಂತ ಸುಂದರವಾದ ವೃಶ್ಚಿಕ ರಾಶಿ ನೋಡಲು ಸಿಗುವುದು. ಚೇಳಿನ ಆಕಾರವನ್ನೇ ಹೋಲುವ ಹೆಸರಿಗೆ ಅನ್ವರ್ಥವಾಗುವ ರಾಶಿ ಇದು.

ಈ ತಿಂಗಳ ಕೊನೆಯ ವಾರದಲ್ಲಿ ಎರಡು ಉಲ್ಕಾವೃಷ್ಟಿಗಳಿವೆ. ಕೇಪ್ರಿಕಾರ್ನಿಡ್ಸ್ ಮತ್ತು ಡೆಲ್ಟಾ ಅಕ್ವಾರಿಡ್ಸ್ ಎಂದು ಹೆಸರು. ಆದರೆ ಮಳೆಯ ಆರ್ಭಟದಲ್ಲಿ ನಮಗೆ ನೋಡಲು ಸಿಗುವುದೇ ? ಕಾದು ನೋಡಬೇಕು.

ಈ ತಿಂಗಳಲ್ಲಿ ಪೂರ್ಣ ಸೂರ್ಯ ಗ್ರಹಣವೂ ಇದೆ. ೧೧ರ ನಡುರಾತ್ರಿ ೧೦:೩೯ರಿಂದ ೧೨ರ ಬೆಳಿಗ್ಗೆ ೩:೨೭ರ ವರೆಗೆ ನಡೆಯುವುದು. ಹಗಲ ಕತ್ತಲಿನ ನೋಟ ಶಾಂತಸಾಗರದಿಂದ ಮಾತ್ರ ಸಾಧ್ಯ.

ಭೂಮಿ ಸೂರ್ಯನಿಗೆ ಅತಿ ದೂರವಾಗುವ ದಿನ ಜುಲೈ ೬. ಆದರೆ ನಮಗೆ ಅದರ ಅನುಭವ ವಾಗುವುದೇ ? ಖಂಡಿತಾ ಇಲ್ಲ.

**ಖಗೋಳ ದಿನಚರಿ**

ಜುಲೈ ೧ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೪ ಚಾಂದ್ರಮಾಸದ ಕೊನೆಯ ಪಾದ; ಗುರು - ಚಂದ್ರ ಜೋಡಿ*
೬ ಭೂಮಿ - ಸೂರ್ಯ ನಡುವೆ ಗರಿಷ್ಠ ದೂರ
೮ ಕೃತ್ತಿಕಾ - ಚಂದ್ರ ಜೋಡಿ*
೧೨ ಅಮಾವಾಸ್ಯೆ ೦೦:೧೦ಕ್ಕೆ ; ಸೂರ್ಯಗ್ರಹಣ ೧೧ರ ರಾತ್ರಿ ೧೦:೩೯ರಿಂದ ಬೆಳಗಿನ ೦೩:೨೭ರವರೆಗೆ
೧೩ ಚಂದ್ರ - ಬುಧ ಜೋಡಿ; ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೧೫ ಶುಕ್ರ - ಚಂದ್ರ ನಡುವೆ ಕನಿಷ್ಠ ಕೋನ*
೧೬ ಮಂಗಳ - ಚಂದ್ರ - ಶನಿ ಪುಟ್ಟ ಗುಂಪು*
೧೮ ಚಾಂದ್ರಮಾಸದ ಮೊದಲ ಪಾದ
೨೪ ಚಂದ್ರ - ಜ್ಯೇಷ್ಠಾ ಜೋಡಿ*
೨೬ ಹುಣ್ಣಿಮೆ ೦೭:೦೭ಕ್ಕೆ
೨೮ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೩೧ ಗುರು - ಚಂದ್ರ ಜೋಡಿ*
ಆಗಸ್ಟ್ ೧ ಮಂಗಳ - ಶನಿ ನಡುವೆ ಕನಿಷ್ಠ ಕೋನ*
(* ಛಾಯಾಗ್ರಹಣಕ್ಕೆ ಸದವಕಾಶ)

೩೧ರ ಸಂಜೆ ಬುಧ, ಶುಕ್ರ ಮಂಗಳ ಮತ್ತು ಶನಿ

ಮೆಕ್‌ನಾಟ್ ಎಂಬಾತ ಕಂಡುಹಿಡಿದ ಧೂಮಕೇತುವೊಂದು ಜುಲೈ ಮೊದಲವಾರ ಸೂರ್ಯನನ್ನು ಸುತ್ತಿ ಬರಲಿದೆ. ಜೂನ್‌ನಲ್ಲಿ ದುರ್ಬೀನುಗಳಿಗೆ ನಿಲುಕುವಷ್ಟು ಪ್ರಕಾಶ ಪಡೆದ ಇದು ಜುಲೈನಲ್ಲಿ ಬರಿಗಣ್ಣಿಗೆ ಕಾಣುವಷ್ಟು ಪ್ರಕಾಶಮಾನವಾಗಬಹುದು. ಸಂಜೆ ಮತ್ತು ಮುಂಜಾವುಗಳೆರಡೂ ಹೊತ್ತು ಕಾಣಬಹುದು ಎಂದು ನಿರೀಕ್ಷೆ. ಜುಲೈ ೧೧ರಂದು ಪೂರ್ಣ ಸೂರ್ಯಗ್ರಹಣ ನೋಡುವವರಿಗೆ ಹಗಲಲ್ಲಿಯೇ ಈ ಧೂಮಕೇತುವಿನ ದರ್ಶನ ದೊರಕಲಿದೆ. ಬೆಳಗಿನ ಜಾವ ವಿಜಯಸಾರಥಿ ಪುಂಜದ ಉತ್ತರಕ್ಕೆ ಹುಡುಕಿದಲ್ಲಿ ಕಾಣಸಿಗಬಹುದು. ಈ ಪುಂಜ ಮಹಾವ್ಯಾಧ ಪುಂಜದ ಉತ್ತರಕ್ಕಿದೆ. (ಆರು ತಿಂಗಳ ಹಿಂದಿನ ನಭಾವಲೋಕನದ ನಕ್ಷೆಯಲ್ಲಿ ಹುಡುಕಿ ನೋಡಿ.)

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧



# ಬಹುಮಾನ

ಚಿದಂಬರ

ಶಾಲೆಯ ಧ್ವಜದ ಕಂಬಕೆ ಆಧಾರವಾಗಿ ಗಾಂಧೀಜಿ ಫೋಟೊ ಇಟ್ಟು ಪೂಜೆ ಮಾಡಿ ಹೂ ಏರಿಸಿ ಸಕ್ಕರೆ ಪುಟಾಣಿ, ಬೆಲ್ಲ, ಊದಬತ್ತಿ ಹಚ್ಚಿ ಶ್ರದ್ಧಾಭಕ್ತಿಯಿಂದ ಎಲ್ಲ ಹುಡುಗರು ಶುಭ್ರ ಬಿಳಿ ಅಂಗಿ, ನೀಲಿ ಚಡ್ಡಿ, ತಲಿ ಮ್ಯಾಲ ಗಾಂಧಿ ಟೊಪಗಿ ಧರಿಸಿ ಕೈಯೊಳಗ ಝುಂಡಾ ಹಿಡಕೊಂಡು ಪ್ರಭಾತಪೇರಿಗೆ ಸಜ್ಜಾಗಿದ್ದರು. ಕೆಲ ಹುಡುಗರು ಸಕ್ಕರಿ ಪುಟಾಣಿ ಬೆಲ್ಲದ ಚೀಟ ಮುಟ್ಟಿಸದವರು ಅಲ್ಲಲ್ಲಿ ಕೂಡಿಸಿ ಯಾರದೊ ಕಡೆಗೆ ಕೊಟ್ಟು ತಮ್ಮ ಪನಿವಾರು ಗಾಂಧಿ ಅಜ್ಜಗ ಮುಟ್ಟಿತ ಅಂತ ನಿಟ್ಟುಸಿರಬಿಟ್ಟರು. ಕಿಟ್ಟಿ ಜಳಕಾ ಮಾಡಿ ಚಡ್ಡಿ ಹಾಕೊಂಡು ಬರಿ ಮೈಲಿ ನಿಂತಿದ್ದ, ಅವನ ಗಾಂಧೀ ಟೊಪಿಗಿ ಇನ್ನು ಸಿಕ್ಕಿರಲಿಲ್ಲ.

ಅವನವ್ವ ಚಿನ್ನವ್ವ ಬೆಳಿಗ್ಗೆ ಎದ್ದವಳ ಹಳೆ ಲ್ಯಾವಿ ಗಂಟಗಳನ್ನೆಲ್ಲ ಹುಡುಕಾಡುತ ಹರಸಾಹಸ ಪಡುತ್ತಿದ್ದಳು, ಕಿಟ್ಟಿ ಇಂದು ಶಾಲೆಗೆ ಹೋಗಲೇಬೇಕಿತ್ತು. ಮೊನ್ನೆ ನಡೆದ ಭಾಷಣ ಸ್ಪರ್ಧೇಲಿ ಅವನಿಗೆ ಬಹುಮಾನ ಬಂದಿದ್ದು, ಇಂದು ಗ್ರಾಮ ಪಂಚಾಯತಿ ಛೇರ್ಮನ್ನರು, ಊರ ಗೌಡರು ಆದ ಹುಲಿಗೆಪ್ಪನವರ ಕೈಯಿಂದ ಬಹುಮಾನ ವಿತರಿಸುವ ಕಾರ್ಯಕ್ರಮ ಇತ್ತು.

ಏನಾದರು ಮಾಡಿ ಟೊಪಿಗೆ ತಲಿ ಮ್ಯಾಲ ಹಾಕೊಂಡ ಹೋಗಬೇಕು ಇಲ್ಲದಿದ್ದರ ಸಾಲಿಯೊಳಗ ಹುಡುಗರೆಲ್ಲ ''ಬಕ್ಕ ತಲಿ ಕಿಟ್ಯಾ... ಬಕ್ಕ ತಲಿ ಕಿಟ್ಯಾ...'' ಅಂತ ಹಂಗಿಸತಾರ, ಅಷ್ಟ ಯಾಕ ಕಿಳ್ಳಿಕ್ಯಾತರ ಇಟ್ಟಲ ಮಾಸ್ತರ ಇನಪಾರ್ಮ ಸರಿಯಾಗಿ ಹಾಕೊಂಡ ಬರಲಿಲ್ಲಂದ್ರ ತಲಿ ತಲಿ ಬಡಿತಾರ, ಮಂಡಿಗಾಲ, ಮಂಡಿಗೈ ಊರಿ ಪಾಟಿಕಲ್ಲ ಮ್ಯಾಲ ಉಸಕ ಒಗಿಸಿ ಅದರ ಮ್ಯಾಲ ನಡಿಲಾಕ ಹಚ್ಚಿತಾರ. ಒಂದ ಸಲಾ ಹಿಂಗ ಆಗಿತ್ತು, ಅಗಸ್ಯಾಗಿನ ಹನಮಂತ ದೇವರ ಗುಡಿ ಮುಂದ ಸರ್ಕಸ ನೋಡಿ ಯ್ಯಾಳೆ ಮಾಡಿ ಸಾಲಿಗಿ ಹೋದಾಗ, ಪಾಟಿಕಲ್ಲ ಮ್ಯಾಲ ಉಸಕ ಒಗಿಸಿ ಅದರ ಮ್ಯಾಲ ನಡಿಲಾಕ ಹಚ್ಚಿದರು. ಮುಂಗೈ ಮೊಣಕಾಲ, ಊರ್ಯಾತಾವ್ರಿ ಸರ್ ಅಂತ ಅಳಕೊತ ಹೇಳಿದರ ಕುಂಡಿಮ್ಯಾಲ ಒದ್ದು ಚಡ್ಡಿ ಹರದದ್ದು, ಅದನ ನೋಡಿ ಹುಡುಗರೆಲ್ಲ ಗೊಳೊಂತ ನಕ್ಕಿದ್ದು ನೆನಪಾಗಿ ಕಿಟ್ಟಿಗೆ ಭಯವಾಯ್ತು. ಟೋಪಿಗಿ ಹಾಕೊಂಡ ಬರಲಿಲ್ಲಂದ್ರ ಬಾಳ ಬಡಿತಾರ ಸಾಲ್ಯಾಗ ಕರಕೊಳ್ಳಾಂಗಿಲ್ಲ ಏನಾರ ಮಾಡಿ ಟೊಪಿಗಿ ಹಾಕೊಂಡೆ ಹೊಗಲು ನಿರ್ಧರಿಸಿದ. ಬಿಸಿಲು ಬಲಿಯುತ್ತಿತ್ತು ಮನೆಯ ಆಜುಬಾಜೂಕಿನ ಹುಡುಗರೆಲ್ಲ ಸಿದ್ಧರಾಗಿ ಶಾಲೆಯತ್ತ ನಡೆದಿದ್ದರು, ಕೆಲವರು ಬರಿಮೈಲಿ ನಿಂತಿದ್ದ ಕಿಟ್ಟಿಯನ್ನು ಗಮನಿಸದೆ ತಮ್ಮ ಪಾಡಿಗೆ ತಾವು ಶಾಲೆಯತ್ತ ಧಾವಿಸುತ್ತಿದ್ದರು, ಇನ್ನ ಕೆಲವರು. ಕಿಟ್ಟಿಯ ನೋಡಿ ''ಯಾಕೋ ಕಿಟ್ಟಿ ಬರಾಂಗಿಲ್ಲ...?'' ಅಂತ ಕೇಳಿದರು, ಕಿಟ್ಟಿ ಏನಂತ ಉತ್ತರ ಕೊಡಲು ತಿಳಿಯದೆ ಮೌನವಾಗಿ ಅವರನ್ನೆ ನೋಡುತ ನಿಂತಿದ್ದ. ಮತ್ತೆ ಕೆಲವರು ಲೇಟಾಗಿದೆ ಎಂದು ಯಾವುದನ್ನೂ ಗಮನಿಸದೆ ಓಡುತ್ತಿದ್ದರು. ಕಿಟ್ಟಿಗೆ ಅದೇ ಕೋಪ, ಅಸಮಾಧಾನ, ತನ್ನವ್ವಳನ್ನು ಬೈಯುತ ಅವಳ ಬಳಿ ಹೋದ ''ಯಾವ್ವಾ ಹುಡಗೋರೆಲ್ಲ ಸಾಲಿಗಿ ಹೋದರು, ಯಾಳಿ ಮಾಡಿದರ ಸರ್ಗೋಳ ಬಡಿತಾರ ಬಡಿಸಿಕೊಳ್ಳಾಕ ಅಲ್ಲಿಗಿ ನೀ ಬರತಿ...? ನೀ ಟೋಪಿಗಿ ಕೊಡತಿನೊ ಇಲ್ಲೊ...?'' ಮತ್ತೆ ಕೂಗಿದ. ಹೊರಗಡೆ ಬೈಲ ಕಡೆಗೆ ಹೋಗಿದ್ದ ಕಿಟ್ಟಿಯ ಅಜ್ಜಿ ಮುತ್ತವ್ವ ಕೈಯಲ್ಲಿನ ಕಿಟಗಿ ಗೊಡಿಗಿ ನಿಲ್ಲಿಸಿ ಅಲ್ಲೆ ಅಂಗಳದಲ್ಲಿ ಕೆಳ ಕೈಯೂರಿ ಕುಳಿತುಕೊಳ್ಳುತ ಮೊಮ್ಮಗನನ್ನು ಹಣೆಗೆ ಕೈ ಹಿಡಿದು ದಿಟ್ಟಿಸಿತು.

''ಕಿಟ್ಟಿ ಸಾಲಿಗಿ ಇನ್ನು ಹೋಗಿಲ್ಲೊಂದು ಲಡದು ಬಾಡ್ಯಾ... ಹೊತ್ತ ಮ್ಯಾಲೆರ ಬಂದರೂ ಅವ್ವ ಮಗ ಆರಾಕ್ಕೊಂಡು ಮಲಗತೀರಿ, ಲಗ್ಗ ಎಳಾಕೇನ ದಾಡಿ,...? ಮಂದಿ ಹುಡುಗರನ ನೋಡು ಸಿಂಗಾರಾಗಿ ಹೆಂಗ ಸಾಲಿಗಿ ಹೊಂಟಾವು. ನನ್ನ ಹಾಂಟ್ಯಾನ ಮಗನ ಓದಕ್ಕೊಂಡ ಬರಕೊಂಡ ಶ್ಯಾನ್ಯಾ ಆದನಂದರ ಪಂಗ... ಪಂಗ... ತಿರಗೋದ ಮಾಡತಿ, ನಿಮ್ಮಪ್ಪನ ಗೂಣ ಒಂದೀಟರ ಹಿಡಕೋಲಾ... ನಾಳಿ ಏನಾದರ ಆದರ ಯಾರಿಗಿ ಕೊಡತಿ...?'' ಅಂತ ಮಗನ ನೆನಪಿನ ಜೋಡಿ ತನ್ನ ಶೋಕವನ್ನು ತೋಡಿಕೊಂಡಿತು. ಯಾವ ಯಾವುದೋ ಹಳೇ ಅರಿವಿಯ ಗಂಟಗಳನ್ನೆಲ್ಲ ಕೈಲಿ ಹಿಡಿದು ಹುಡುಕುತ್ತಿದ್ದ ಚಿನ್ನವ್ವ ಅತ್ತೆ ಮಾತ ಕೇಳಿ ಹಾಗೇ ಹೊರಬಂದಳು.

''ಅತ್ತಿ ದೇವರ ಮನ್ಯಾಗಿನ ಅರಿವಿ ಗಂಟಿನಾಗ ಅವರು ಎರಡ ಟೋಪಿಗಿ ಇಟ್ಟಿದ್ನಿ, ಎಲ್ಲಿ ಸಿಗವಲ್ಲು ನೀವೇನಾರ ತೆಗದಿಟ್ಟದಿರೇನು...?'' ಕೇಳಿದಳು. ಈ ಮಾತಿಗೆ ಮುತ್ತವ್ವ ಏನೊಂದು ಮಾತಾಡದೆ ಕಿವಿ ಕೇಳದವರಂತೆ ನಟಿಸಿ ಮುಖ ತಿರಿವಿ ಆ ಕಡೆ ಕುಳಿತಳು.

**''ಏನಂದಿ... ನಮ ಹುಡುಗ ನಿನ್ನ ಮೊಮ್ಮಗನ ಬಹುಮಾನ ಇಸಗೊಂಡಾನ...? ಯಾಕ ನಿನ್ನ ಮೊಮ್ಮಗನಿಗೇಣ ಬ್ಯಾನಿ ಹಾದಿತ್ತಂತ ಹೊಗಿ ಇಸಕೊಳ್ಳಾಕ ಎಲ್ಲಿ ಹೋಗಿದ್ದ ...ಸಾಲಿ ಬಿಟ್ಟ ಹುಚ್ಚ ಸೂಳಿಮಗಾ...?'' ಅಂತಂದ ಒಮ್ಮಿಗೆ ಗೌಡರು ಆವೇಶಗೊಂಡದ ನೋಡಿ ಕಿಟ್ಟಿ ಹೆದರಿದ. ಇಲ್ಲಿಗಿ ಯಾಕಾದರು ಬಂದಿನೋ ಅನಿಸತವನಿಗೆ. ಕೈಕಾಲ ನಡಗತೊಡಗಿದವು. ಗೌಡರ ವಿಕರಾಳ ಮುಖದಲಿ ಸಿಟ್ಟಿನೊಂದಿಗೆ ಅವರ ಮೀಸೆಗಳು ಕುಣಿಯತೊಡಗಿದವು. ಕಿಟ್ಟಿ ಹೆದರಿದವನೆ ತನ್ನಜ್ಜಿಯನ್ನು ಬಿಗಿದಪ್ಪಿ ಹಿಡಿದುಕೊಂಡ.**




ಚಿನ್ನವ್ವಳ ಎದೆಗೆ ಅದೆ ಕಿಡಿ ಒಗೆದಂತಾಯ್ತು ಸಿಡಿಮಿಡಿ ಮಾಡುತ್ತ "ತನ್ನ ಅರಿವಿ ಏನೇನ ಬೇಕು ಅವನ್ನೆಲ್ಲ ಮುಂದಾಗಳೆ ತೆಗದಿಟಕೊಳ್ಳಾಕ ಏನ ದಾಡಿ ಇವಗ, ಮುದು ಆಗಿದಾನ. ಹೋಗು ವ್ಯಾಳೆದಾಗ ಹುಡಿಕ್ಯಾಡಾಕ ಹಚ್ಚತಾನ ಸಾಲಿ ಕಲಿವ ಮುಕಾ ನೋಡ ಇತರದ... ಹುಚ್ಚ ನನ್ನ ಹಾಂಟ್ಯಾ..." ಅಂತ ಸಿಗದ ಟೊಪಿಗಿಗೆ ಹರಿಹಾಯ್ದಳು. ಸೊಸೆಯ ನಡುವಳಿಕೆ ನೋಡಿ ಮುತ್ತಜ್ಜಿಗೆ ಮೈಯೆಲ್ಲ ಉರಿಯಿತು. ತನ್ನ ಮಗನ ಊಳಗಾ ಮಾಡಾಕ ಬ್ಯಾಸರಸಾಕಿ ಮಂದಿ ಸೇವಾ ಏನ ಮಾಡತಳು ಬದನಿಕಾಯಿ. ಮಂದಿಹಾಂಗ ಬೆಳಿಗ್ಗೆ ಎದ್ದು ಹುಡಗರಿಗಿ ಜಳಕಾ ನೀರಾ ನಿಡಿ ಮಾಡಿ ಅಟ್ಟೊ ಇಟ್ಟೊ ತಿನಸ ತಿನಿಸಿ ಸಂಗಾಟದವರ ಜೋಡ ಕಳಿಸಬೇಕನ್ನಾಗಿಲ್ಲ, ಇಂದ ಹುಡುಗನ ಸಾಲಿ ಲಗ್ಗ ಐತಿ ಅಂದಮ್ಯಾಲ ಗಡಾನ ಎದ್ದು ಎಲ್ಲ ಕೆಲಸಾ ಮುಗಿಸಿಕೊಬೇಕು. ಈಗೇನ ಮಗಲಾಗ ಗಂಡ ಅದಾನ... ಬಿಟ್ಟೇಳಾಕ ಬಿಡವಲ್ಲವಾ... ಅನ್ನೊದೈತಿ...? ಯಾರಿಗೆರ ಕೌತುಕ ಕಲಸಾಕಿ, ಇದೇನ ಒಂದ ದಿನದ ಮಾತಾ... ಮಗಾ ಸತ್ತಾಗಿನಿಂದ ನೋಡಾತೇನ ಹೊತ್ತ ಹೊಂಡಗುಡದ ಯಾವತ್ತ ಎದ್ದ ಅಂಗಳಾ ಬಾಗಲಾ ಉಡಗಿದಾಳ ಈಕೀ...? ಇಂತಾ ಸಿಟ್ಟಾ ಸೆಡವ ಮಾಡಿ ಗಂಡನ ಗೊತ್ತಿಗಿ ಹಚ್ಚಿ ಬಿದ್ದಾಳಿಲ್ಲಿ ಕರಿಮಾರ್‍ಯಾಕಿ, ಅಂತಂದು ಮಾರಿತುಂಬ ಶೆರಗಿಡುದಕೊಂಡು, "ಹುಲಿಯಂತಾ ಮಗಾ ಈಕಿ ಕೈಯಾಗ ಹಂಗಾ ನರಳಿ ನರಳಿ ಸತ್ತೋತ... ಅಂತ ಮಗನ ನೆನಪಿಸಿಕೊಂಡು ಕಣ್ಣೀರ ಒರಿಸಿಕೊಂಡು ದುಕ್ಕಿಸಿದಳು. ಆ ಹೊತ್ತಿಗೆ ಎದುರಮನಿ ಕಡಪಟಿ ಬಾಳವ್ವಾ ತಲಿ ಕೂದಲಾ ಬಾಚಿಕೊಂಡು ಉದುರಿದ ಕೂದಲಗಳನ ಸುರುಳಿ ಮಾಡಿ ಹೊರಗೆಸೆಯಲು ಬಂದವಳೆ ಮುತ್ತವಜ್ಜಿಯತ್ತ ನೋಡಿ,

"ಯಾಕ ಚಿಗವ್ವಾ ಬಾಯಿ ಮಾಡಾಕತಿ...?" ಕೇಳಿದಳು.

"ಇನ್ನೇನ ಬಿಡ ಸಮ್ಮವ್ವ, ಈ ಹುಡುಗ ಒಂದ ಸಾಮಾನ ಜತನಲೆ ಇಟಗೊಂಡ ಜಲ್ಮಾ ಮಾಡಾಂಗಿಲ್ಲ... ಕಳಕೊಂಡ ಹುಡಿಕ್ಯಾಡಕೊಂತ ಹೋಗತಾವ..." ಸಿಡುಕಿನಿಂದ ಗೊಣಗಿದಳು. ಬಾಳವ್ವ ಹೊಸ್ತಲಿನಿಂದ ಹೊರಬಂದು ಕಿಟ್ಟಿಯ ನೋಡಿ, "ಯಾಕ ಕಿಟ್ಟಿ ಇನಾ ಸಾಲಿಗಿ ಹೋಗಿಲ್ಲ...? ಬಾಡ್ಯಾ ಮನ್ಯಾಗೇನ ಗುಗ್ಗರಿ ಹಾಕತಿ,...? ಸನ್ನ ಸನ್ನ ಹುಡುಗೊರ ಎಂತ ಹುರುಪಿಲೆ ಹೊಂಟಾವ. ದೊಡ್ಡಾವ ಆಗಿ ಹೇಳಿಸಕೊಳ್ಳದ ನಿನ್ನಷ್ಟಕ ಹೋಗಾಕೇನ ದಾಡಿ...? ಯಾಕ ಇವರವ್ವೇನ ಮಾಡತಾಳ ಸಾಲಿತನಾ ಕಳಿಸಿಬರಬಾರದೇನ...?" ಅಂದಳು.

"ಅವ್ವಾ ಆಕೀ...! ಬೆಳಗಾಗುತನಾ ಮಲಗಾಕ ಹೇಳ... ಹೊತೊತಗೊಂಡ ಮಲಗತಾಳ... ದಿನಾ ನಟ್ಟಕಡಿಲಾಕ ಹೋಗತಾಳಲ್ಲ, ಬ್ಯಾಸರಿಸಿರತಾಳ ನಾಯೇನ ಮಾಡಾಕಿ ಕೂಳಿಗಿ ಬ್ಯಾಸರಾದಾಕಿ ನನಗೆಲ್ಲಿ ನಿದ್ದಿ ಬರಬೇಕು...?"

"ನೀನು ಮಾಡುವಾಗ ರಗಡ ಮಾಡಿದಿ ತಗೋ... ಇನ್ನೇನ ಮಾಡತಿನ ನಿಮ್ಮೌನ... ಹೊಕ್ಕಟ ತಿಂದ ಹೊತ್ತ ಗಳಕೊಂತ ಹೋಗೋದ..." ಅಂತ ಸಮಾಧಾನ ಮಾಡಿದಳು.

"ಬಾಳವ್ವ ಅವನದ ಟೊಪಿಗಿ ಸಿಗವಲ್ತು, ಅವರವ್ವ ಈಗ ಹುಡಿಕ್ಯಾಡಾತಾಳ ಅದಕ ಈ ಸ್ವಾಂಗಾ ಹಿಡಕೊಂಡ ನಿಂತಾನ"

"ಏಯ್ ಮುತ್ತವ್ವತಿ ನಮ್ಮ ಸಂಗ್ಯಾನ ಹಳಿ ಟೊಪಿಗೆ ಐತಿ ಕೊಡಲಿ...? ಮೊನ್ನಿ ಆಟಾ ಆಡಾಕ ಹೋಗಿ ಬಸನಾರ ಹುಡುಗ ಜಗ್ಗಿದಂತ ದಂಡಿಗಿ ಒಂದೀತ ಹರದೈತಿ ಅಂತಿದ್ದ ...ನೇಮಕ ಹಾಕೊಂಡ ಹೋಗ್ತಿನಂದರ ಕೊಡತಿನಿ... ನನ್ನ ಹಾಟ್ಯಾನು ಹುಡುಕು ವ್ಯಾಳೆದಾಗ ಒಂದ ಸಾಮಾನ ಸಿಗಾಂಗಿಲ್ಲವಾ...? ತರ್‍ಲಿ...?" ಅಂತ ಕೇಳಿದಳು. ಆ ಮಾತ ಮುತ್ತವಜ್ಜಿಗಿ ಕೇಳಸಿತೊ ಇಲ್ಲೊ... ಚಿನ್ನವಗಂತು ಸ್ಪಷ್ಟವಾಗಿ ಕೇಳಿಸಿತ್ತು, ಅವಳು ಸಿಡಿಮಿಡಿ ಮಾಡುತ ಆಕಡೆಗೆ ಸರಿದು ಹೋದಳು. ಮೆರಕನಾರ, ಕುರುಬರಾ, ಹೊಸಮನ್ಯಾರ ಹೆಂಗಸರೆಲ್ಲ ಕೊಡಾ ಹಿಡಿದು ಬಾಂವಿ ನೀರಿಗಿ ಹೊಂಟಿದ್ದರು, ಹೂಗಾರ ಮುದುಕ ಮಾರಿ ತೊಳಿತ ...ತೊಳಿತಾ ...ವಾ ...ವಾ ...ಅಂತ ವಾಂತಿ ಮಾಡಕೊಳತಿದ್ದ. ಆ ದನಿ ಓಣಿ ತುಂಬ ಗುನಗುಡುತ್ತಿತ್ತು. ಹಿಂದಿನ ಮನಿ ಗಜಪತ್ಯಾರ ಅಣತಮ್ಮಂದಿರು ಹೊಲದ ಪಾಲ ಸಲುವಾಗಿ ಬಾಯಿ ಹಾಕ್ಯಾಡತಿದ್ದರು. ಆದರ ಸೂರ್ಯ ಇದನ್ನೆಲ್ಲ ನೋಡಿ ನೋಡಿಲ್ಲದವರಂಗ ಮ್ಯಾಲದ್ದ ಹೊರಟಬಿಟ್ಟಿದ್ದ. ಆದರ ಮುತ್ತವ್ವಗ ಸೊಸಿ ಮ್ಯಾಲಿನ ಸೇಡು ಉಬ್ಬುತ ಬಂತು ನೆಲಕ ಕೈಯೂರಿ ಮ್ಯಾಲೆದ್ದು ಗ್ವಾಡಿಗಿ ನಿಲಿಸಿದ ಬಡಿಗಿ ಹಿಡಿದು ಬಾಳವ್ವನ ಅಂಗಳದತ್ತ ಬಂದು, ..."ಬಾಳವ್ವಾ... ಸಂಗ್ಯಾನ ಟೊಪಿಗಿ ಕೊಡ ನನ್ನ ಮಗಳ... ಹುಡುಗ ಅದರ ದೆಸಿಂದ ಸಾಲಿ ಬಿಟ್ಟ ನಿಂತೆತಿ, ಸಾಲಿ ಮುಗಿಸಿ ಬಂದ ಮ್ಯಾಲ ನಾನ ಇಸತಂದ ಕೊಡತಿನಂತ" ಅಂದಳು... ಅಷ್ಟರಲ್ಲಿ ಕಿಟ್ಟಿಯ ಶಾಲೆಯ ಕಡೆಯಿಂದ ಡ್ರಮ ಬಾರಿಸುವ, 'ಬೊಲೊ ಭಾರತ ಮತಾಕಿ ಜೈ, ಮತಾಮಾ ಗಾಂಧೀಜಿಕಿ ಜೈ' ಅನ್ನುವ ಸದ್ದು ಕೇಳಿ ಬಂತು. ಕಿಟ್ಟಿ ಆ ಸದ್ದು ಕೇಳಿದವನೆ ಬೆಂಕಿಮೇಲೆ ನಿಂತವರಂತೆ ಚಡಪಡಿಸತೊಡಗಿದ, ಚಿನ್ನವ್ವ ಇನ್ನು ಹುಡುಕುತ್ತಿದ್ದಳು, ಮುತ್ತವ್ವಜ್ಜಿ ನೆರಮನಿ ಬಾಳವ್ವನಿಂದ ಮುಗ್ಗು ಮುಗ್ಗಾದ ಹಳೇ ಟೊಪಿಗಿ ತಂದು ಅಂಗಳದಲ್ಲಿ ನಿಂತಿದ್ದ ಕಿಟ್ಟಿನ ಕರೆದು,

"ಬಾ ಕೂಸ... ತಗೋ ಬಾಳ ಚಿಗವ್ವಗೋಳ ಸಂಗ್ಯಾನದ ಇಸಕೊಂಡ ಬಂದೀನಿ... ನಿನ್ನ ಟೋಪಿಗಿ ಎಲ್ಲೇತೋ ಯಾರಿಗಿ ಗೊತ್ತ... ಅದ ಸಿಕ್ಕು ನೀ ಸಾಲಿಗಿ ಹಾಕೊಂಡ ಹೊಗುಗುಡದ ಮೂರ ಮಧ್ಯಾಹ್ನ ಆಗಿರತ್ತ ಹುಡುಗರೆಲ್ಲ ಮನೀಗಿ ಬಂದಿರತಾವ." ಅಂತ ಸಮೀಪಕ ಕರೆದು ಅವನ ತಲಿಮ್ಯಾಲ ತಾನ ಟೊಪಿಗಿ ಹಾಕಿ ಪ್ರೀತಿ ಮಾಡಿ, ತನ್ನ ಚೊಂಚಿಯೊಳಗ ಇಟಗೊಂಡಿದ್ದ ಪಾರ್ಲೆ ಬಿಸ್ಕಿಟಿನ ಅರ್ದಾ ಚೂರೊಂದನ್ನ ಕಿಟ್ಟಿಗಿ ಕೊಡುತ "ತಗೋ ತಿನಕೊಂತ ಹೋಗು" ಅಂತಂದು ಮುದ್ದ ಮಾಡಿ ಲಟಿಕಿ ಮುರಿದಳು. ಕಿಟ್ಟಿಗೆ ಯಾವದೋ ಒಂದು ಟೊಪಿಗಿ ಸಿಕ್ಕಿತಲಾ ಸಾಲಿಯೊಳಗ ಮಾಸ್ತರ ಕೈಲಿಂದ ಬಡಿಸಿ ಕೊಳ್ಳೊದ ತಪ್ಪಿತಲ್ಲಾ ಅಂತ ಖುಷಿಯಾಗಿ ಅಜ್ಜಿ ಕೊಟ್ಟ ಬಿಸ್ಕಿಟಿನ ತುಣಕನ್ನು ಬಾಯಿಗಿಟ್ಟು ಕೊಂಡು ತನ್ನ ಮನಿಯ ಹೊಸ್ತಿಲ ಬಳಿ ಬಂದು "ಯವ್ವಾ ನಾ ಸಾಲಿಗಿ ಹೋಗ್ತಿನಿ..." ಅಂತಂದು ಓಡಲು ಸಿದ್ದನಾದ. ಒಳಗಿನಿಂದ ಬಂದ ಅವನವ್ವ ಆವೇಶದಿಂದ ಏದುಸಿರ ಬಿಡುತ್ತ "ನಿಂದರ ನನ್ನ ಹಾಂಟ್ಯಾ" ಅಂದಳು. ಅವಳ ಎದಿ ಹಣಿಯೆಲ್ಲ ಬೆವರಿನಿಂದ ತೊಯ್ದಿತ್ತು. ಅತ್ಯಂತ ಭಾವಾವೇಶಕ್ಕೆ ಒಳಗಾಗಿದ್ದಳು. ಕಿಟ್ಟಿ ಗಾಬರಿಯಿಂದ ಅವಳನ್ನೆ ನೋಡಿದ.

"ಲೇ ಕಿಟ್ಟಿ ಆ ಟೊಪಿಗಿ ಹಾಕೊಂಡರ ನೋಡ ನಿನ್ನ ನೀ ಸಾಲಿಗಿ ಹೊಗದಿದ್ದರು ಚಿಂತಿಲ್ಲ ನನಗ ಯಾವಕ್ಕಿ ಮದತ ಬ್ಯಾಡ... ನನಗ ನಾ ಯಾರಿಗಿ ಬಗ್ಗುವಳಲ್ಲ ಸಿಂಪಿ ಉಪಕಾರ ಮಾಡಿ ಸಂಪಾಗಿ ಮೋಸಮಾಡುವ ನಾಯಿಗೋಳ ಬುದ್ಧಿ ನನಗ ಗೊತ್ತಿಲ್ಲ...?" ಅಂತ ಚೀರಾಡಿದಳು. ಬಾಗಿಲದೊಳಗ ನಿಂತಿದ್ದ ಬಾಳವ್ವ ಆ ಮಾತ ಕೇಳಿಸಿಕೊಂಡಾಕಿಗಿ ಕುಂಡಿಗಿ ಒದ್ದಂಗಾಯಿತು. ಎದ್ದ ಬಂದಾಕಿನ, "ಯಾಕ ಚಿನ್ನವ್ವ ನಿನಗೇನ ಅಂದೇನೊ ಆಡಿದೇನೊ ಒಮ್ಮಿದೊಮ್ಮಿಗೆ ನಾಯಿ ನರಿ ಅಂತ ಬೈತಿಯೆಲ್ಲ, ನೆಟ್ಟಗ ಮಾತಾಡಾಕ ಕಲ್ಕೊ... ಮೊದಲ..." ಅಂದಳು.

"ಯಾರ ಜೊಡ ಹೆಂಗ ಮಾತಾಡಬೇಕೆಂಬುದ ನನಗ ಗೊತ್ತೈತಿ. ನೀ ಏನ ಹೇಳಾಕ ಬರಬ್ಯಾಡ... ನಿನ್ನ ಕೆಲಸಾ ನೋಡಹೋಗ... ಶ್ಯಾಣ್ಯಾಳದಿ..." ಅಂತಂದಳು. ನಿಜವಾಗಿ ಬಾಳವ್ವಗ ಕೆಣಿಕಿ ಕ್ಯಾರ ಹಾಕೊಂಡಗಾಯಿತಿದು... ಮತ್ತೊಂದು ಮಾತಾಡಲು ಬಾಯಿ ಬರದೆ ತೊದಲ ತೊಡಗಿದಳು. ಇದೇ ವೇಳೆಗೆ ಚಿನ್ನವ್ವ ಅವಳ ಮೇಲೆ ಏರಿಹೋದಳು.

"ಮುತ್ತವ್ವ ಚಿಗವ್ವ ನನ್ನ ಟೊಪಿಗಿ ನಮಗ ಕೊಡ ಯಾವ ಪಿಸರಿ ಕೈಲಿ ಬೈಸಿಕೊಳಾಕ ಯಾರ ಮನೀಗೆ ನಾನ ಬೇಡಾಕ ಹೋಗೊದಿಲ್ಲ, ಯಾವುತರದ ಏನ ತಿಂದಿಲ್ಲ ಉಂಡಿಲ್ಲ, ಯಾರ ಋಣ ನನ್ನ ಹಲ್ಲಾಗ ಇಲ್ಲ ಏನೋ ಹಿರಿಮನಿಶ್ಯಾಳ ಬಾಗಲ ತನಾ ಬಂದ ಕೆಳಾತಾಳಲ್ಲ ಅಂತ ಕರೆದ ಕೊಟ್ಟರ, ಇಕೀದ ಉಪ್ಪರಿಗಿ ಮ್ಯಾಲ ಕುಂತೈತಿ, ನಿನ್ನಂತಾ ನಾಯಿ ಮೂಸಿ ನೋಡಾಂಗಿಲ್ಲ ಹೋಗ ನನಗ ನಾಯಿ ಅಂತ ಮಾತಾಡತಾಳ ಬೋಸಡಿ... ಹುಚ್ಚ ಬೋಸಡಿ... ಅಲ್ಲಾ ಸಣ್ಣ ಮಗಾ ಟೊಪಿಗಿ ದೆಸಿಂದ ಸಾಲಿ ಬಿಟ್ಟ ನ್ಯಾಯ ಮಾಡಕೊಂತ ನಿಂತೈತಲಾ ಅಂತ ಕರಣಾ ತೋರಿಸಿದರ ಉಡ್ಯಾಗ ಉಚ್ಚಿ ಹೊಯತಾಳ ಹಲಕಟ ರಂಡಿ ...ಟೊಪಿಗಿ ಹಾಕೇರ ಕಳಸವಾಳ್ಯಾಕ ಹಂಗಾರ ಕಳಸವಾಳ್ಯಾಕ ನಮಗ್ಯಾಕ ಬೇಕ ಉಸಾಬರಿ" ಅಂತಂದು ಕಿಟ್ಟಿ ತಲಿಮ್ಯಾಲಿನ ಟೊಪಿಗಿ ಕಸಗೊಂಡು ಥೂ ಅಂತ ಉಗುಳಿ ಒಳಹೋದಳು. ತಲಿಮ್ಯಾಲಿನ ಟೊಪಿಗಿ ಕಸಗೊಂಡ ಹೋದದ ನೋಡಿ ಕಿಟ್ಟಿಗಿ ಮತ್ತೆ ಆತಂಕ ಶುರುವಾಯ್ತು ಇವತ್ತ ಶಾಲೆಗೆ ಹೋಗತೀನೊ ಇಲ್ಲೊ, ಬಹುಮಾನ ತಗೋತೀನೊ ಇಲ್ಲೊ, ಸರಗೋಳ ಅದಕಾಗಿ ಕರಸಿ ಮತ್ತೆಲ್ಲಿ ಬಡಿತಾರೊ ಏನೋ ಎಂದು ಹೀಗೆ ಹತ್ತು ಹಲವು ವಿಚಾರಗಳು ಅವನ ತಲಿ ತುಂಬಿಕೊಂಡವು. ಸೊಸೆಯ ಮಾತಿನಿಂದ ಮುತ್ತವಗ ಭಯಂಕರ ಅವಮಾನವಾಯ್ತು. ಉಸಾಬರಿ ಮಾಡಿದಾಕಿ ನಾನ

ನಡುವ ಇವಳ್ಯಾಕ ಮಾತಾಡಿದಳು...? ಅಂತ ತಿಳಿಯದೆ ಪಿತ್ತ ನೆತ್ತಿಗೇರಿಸಿಕೊಂಡಳು ಮುತ್ತವ್ವ. ಕಣ್ಣಲ್ಲಿ ನೀರು ದಳದಳ ಇಳಿದು ಹೊರಟವು, ಹೊರಬಂದ ಚೆನ್ನವ್ವ ಕಿಟ್ಟಿಯನ್ನ ಕೈಹಿಡಿದು ದರದರ ಎಳೆದು ಒಳಹೋಗಿ ಬಾಗಿಲ ಹಾಕಿಕೊಂಡಳು. ಕಿಟ್ಟಿ ಕೊಸರಾಡುತ ''ಯಾವ್ವಾ, ನಾ ಸಾಲಿಗಿ ಹೋಗತೇನ ಬಿಡ ನನ್ನ ಸರ್‌ಗೋಳ ಬಡಿತಾರ, ನಾ ಸಾಲಿಗಿ ಹೋಗಾಂವ... ಬಿಡ...'' ಅಂತ ಚೀರಿದರೂ ಅವಳು ಕೇಳಲಿಲ್ಲ. ಮುತ್ತವ್ವ ಬರಿ ಪಿಳಿಪಿಳಿ ಕಣ್ಣಬಿಟ್ಟು ನೋಡಿ ನಿಟ್ಟುಸಿರಬಿಟ್ಟಳು, ನನ್ನ ಮಗಾ ಬದಿಕಿದ್ದರೆ ಇದೆಲ್ಲ ಆಗತಿತ್ತಾ... ಅನಿಸಿತವಳಿಗೆ...

ನಿನ್ನಿ ಮೊಲದ ಒಣಿಗಿ ಸಿಂವಿ ಹತ್ತಿತಂತ ಎರಡ ರೊಟ್ಟಿ ಹೆಚ್ಚ ತಿಂದುದಕ್ಕೊ, ಏನ ಮಗಿಗಟ್ಟಲೆ ಶೆರೆ ಕುಡುದುದಕ್ಕೊ ಏನೊ... ಗುರ್ರ್ ಗುರ್ರ್ ನಿದ್ದಿ ಹೊಡೆದು ಬೆಳಗ ಮುಂಜಾಲೆ ಬೇಗ ಏಳಬೇಕೆನ್ನುವ ಖಬರಿಲ್ಲದೆ ಮಲಗಿದ್ದ ಹುಲಿಗೆಪ್ಪ ಗೌಡ. ಸೂರ್ಯ ಪರಮಾತ್ಮಾ ಮ್ಯಾಲಬಂದ ಕುಂಡಿಮ್ಯಾಲ ಕಂಡ್ಯಾಳ ಹಿಡಿದರು ಇನ್ನು ಮಲಗಿದ್ದ ಕುಂಭಕರ್ಣ ನಿದ್ದಿಗಿ ಇಡಿ ವಾಡೆಕ ವಾಡೇನ ಹೌಹಾರಿ ಕಣ್ಣ ಕಿಸಿದು ನೋಡಿತ್ತು, ಹೊಲಸ ಸೂಳಿಮಗನ. ಗುಬ್ಬಿಗೋಳ ಹಿಂಡೊಂದು ಜಗಳಾಡತ ಜಗಳಾಡತ ಕಿಡಕಿಯೊಳಗಿನಿಂದ ಒಳಗ ಬಂದು ಮಾರಿಮ್ಯಾಲ ಪಟಾಪಟಾ ಪಕ್ಕಾ ಬಡೆದ ಹಾರಿ ಹ್ವಾದ ಮ್ಯಾಲ ಕಿಂವ್ಯಾಗ ಕಡ್ಡಿಹಾಕಿ ಅಳಗಾಡಿಸಿದಂಗಾಗಿ ಬುದುಂಗನ ಎದ್ದ ಕುಳಿತ, ಯಾರೋ ಬಡದ ಎಬ್ಬಿಸಿ ಕುಂದರಿಸಿದಂಗಾತು. ಸುತಮುತ ನೋಡಿದ ಯಾರು ಇರಲಿಲ್ಲ. ಮ್ಯಾಲ ಸೂರಿನಂತಾಕಿನ ಸನ್ನ ಕಿಡಿಕ್ಯಾಗಿನಿಂದ ಅಲ್ಲಲ್ಲಿ ಕುಂತ ಕಿಂವ ಚಿಂವ ಅಂತ ಒದರ್ಯಾಡತ ದುಂಬಡಿಯೆಬ್ಬಿಸಿದ್ದವು ಗುಬ್ಬಿಗಳು. ಇವನೌವ್ವನಡಾ... ಚಲೋ ನಿದ್ದಿ ನೀರ ಹಿಡದುವಲ್ಲಾ ಅಂತಂದು ಎದ್ದು ಹೊರಬಂದಾಗ ಆಳಕಾಳಗೋಳ ತಮ್ಮ ತಮ್ಮ ಕೆಲಸದಾಗ ತೊಡಗಿದ್ದರು. ಎರಡು ಕೈ ಮ್ಯಾಲ ಮಾಡಿ ಮೈ ಒಡಮೂರಿ ಆಕಳಿಸಿದರು. ಎರಡು ಕಣ್ಣಾಗ ನೀರ ಬಂದವು. ಅಂದರ ಇನ್ನು ನಿದ್ದಿ ಪೂರ್ತಿ ಆಗಿಲ್ಲಂತರ್ಥ. ಹಿತ್ತಲಕಡೀಗಿ ಬಂದು ದೋತರ ತುದುಯೇರಿಸಿ ಕಾಲಮಡದು ಬಾಯೊಳಗ ಬಂದಿದ್ದ ಉಗುಳ ಹೊರಹಾಕಿ ಅಡಿಗಿಮನೀ ಕಡೆ ಬಂದರು, ಒಲ್ಯಾಗಿನದೊಂದ ಇದ್ದಿ ಚೂರ ಕಟಂ ಕುಟುಂ ಒಡೆದು ಪುಡಿಮಾಡಿ ಬೆರಳ ಹಾಕಿ ಕೆಳಗ ಮ್ಯಾಲ ತಿಕ್ಕಿ ಬಾಯೆಲ್ಲ ಕರ್‍ರಗಾದ ಮ್ಯಾಲ, ಇಸ್ತ್ರಿಮಲ್ಯಾ ತಂದ ಕೊಟ್ಟ ಬಿಸಿ ನೀರಿನಿಂದ ಅರವತ್ತರ ಹರೆಯದ ಕೆಂಪಾನ ದುಂಡಮಾರಿಮ್ಯಾಲ ಉಗರಬೆಚ್ಚಗಿನ ಬಿಸಿನೀರ ಚಿಮಿಕಿಸುತ ಕರಿ ಬಾಯಿ ಉಗುಳಿ ಕೆಂಪಮಾಡಿಕೊಡು ನೆಗಡಿಗಿ ಕಟ್ಟಿದ ಕಫಾ ಪಿತ್ತ ಇದೆಲ್ಲವ ಮುಖ ತೊಳೆಯುವ ಮೂಲಕ ಸ್ವಚ್ಛಮಾಡುತ ಹೊಸ ದಿನಕ ಸಜ್ಜಾಗಲು ತೊಯ್ದಮಾರಿಯ ದಡಿಧೋತರದಿಂದ ಒರಿಸಿಕೊಂಡರು. ಅಟ್ಟರಾಗ ಸಂಗಸೂರ ಪಾರವ್ವ ತಂದಕೊಟ್ಟ ಬೆಲ್ಲದ ಚಾದ ಕಪ್ ತುಟಿಗಿರಿಸಿಕೊಂಡು ಅಸ್... ಹೂ... ಅಸ್... ಹೂ... ಅಂತ ಊದಿ ಚಹಾ ಒಂದ ಗುಟುಕ ಕುಡಿಯುತ್ತಿರುವಾಗಲೆ,

''ಯಪ್ಪಾ, ಗೌರ್‍ಯಾರ ಮುತ್ತವ್ವ ಬಂದಾಳ್ರಿ...'' ಅಂತ ಸುದ್ದಿ ತಂದು ಮುಟ್ಟಿಸಿದ ಈರ್‍ಯಾ.

''ಇವರೌವ್ವನ ಬೆಳಕ ಹರಿಯೋದ ನೋಡತಾರ ನೋಡ ಈ ಊರಮಂದಿ, ಅಂವಾ ಹಂಗ ಮಾಡಿದಾ ಇಂವಾ ಹಿಂಗ ಮಾಡಿದಾ ಇದ ಉಸಾಬರಿ ಕೇಳಕೊಂತ ಕುಂದರೋದಿನ್ನ'' ಅಂತ ಗೊಣಗುತ ಚಹಾ ಕುಡಿದು ನಡಿನಾಗಿನ ಧೋತರ ಗಂಟ ಬಿಚ್ಚಿ, ಮತ್ತೊಮ್ಮಿ ಬಿಗುದ ಕಟ್ಟಿ ಕಾಲ ಎತ್ತರಿಸಿ ಒಂದ ಸೆರಗ ಎಳದು ಸಮಮಾಡಿಕೊಂಡು ಪಡಸಾಲಿಗಿ ಬಂದರು. ದೂರದಿಂದ ಗೌಡರ ಆಗಮನದ ಸೂಚನಾ ಕಂಡುಕೊಂಡ ಮುತ್ತವ್ವ ಮತ್ತು ಅವಳ ಮೊಮ್ಮಗ ಕಿಟ್ಟಿ ಚಕಿತರಾಗಿ ಗೌಡರಿಗೆ ನಮಿಸಲು ಸಿದ್ಧರಾದರು. ವಿನಮ್ರತೆ ಹಾಗೂ ತಮ್ಮ ಅಹವಾಲುಗಳನ್ನು ನಾಜೂಕಾಗಿ ಒಪ್ಪಿಸಿ ಬಂದ ಕೆಲಸ ಯಶಸ್ವಿ ಮಾಡಿಕೊಳ್ಳಲು ಸಿದ್ಧರಾಗಿ ಎದ್ದು ನಿಂತರು. ಹುಲಿಗೆಪ್ಪಗೌಡ ಪಡಸಾಲಗಿ ಬಂದು ಮುತ್ತವ್ವಳನ್ನು ಹಾಗೂ ಅವಳ ಹಿಂಬಾಲಕ ಬಂದಿದ್ದ ಅವಳ ಮೊಮ್ಮಗನೊಮ್ಮಿ ನೋಡಿ ಘನಗಾಂಭೀರ್ಯದಿಂದ ಆರಾಮಕುರ್ಚೀಲಿ ಕುಳಿತುಕೊಳ್ಳುತ ಹೆಡಕಿನ ಮ್ಯಾಲ ಇಳಿಬಿಟ್ಟಿದ್ದ ಬಿಳಿ ಟವಲಿನಿಂದ ಬಾಯಿ ಒರಿಸಿಗೊಂಡು,



''ಏನ ಮುತ್ತವ್ವ, ಮೊಮ್ಮಗನ ಹಿಂಬಾಲ ಕರಕೊಂಡ ನಸಿಗಿಲೆನ ಬಂದದಿ...? ಇಂವ ನಿನ್ನ ಮೊಮ್ಮಗಾ ಹೌಂದಿಲ್ಲ ಮತ್ತ...?'' ಕೇಳಿದರು. ಮುತ್ತವ್ವ ಮುದುಕಿ ಮತ್ತು ಕಿಟ್ಟಿ ಅಲ್ಲಿಂದ ಬುದುಂಗನೆ ಮ್ಯಾಲೆದ್ದು ನಿಂತು ಹಣಿಹಚ್ಚಿ ಸನ ಮಾಡಿ, ''ಹೂಂ ನನಪಾ ನಮ್ಮ ಈಸೂರಪಾನ ಮಗಾ'' ಅಂದಳು. ಗೌಡ ತಾಟಿನೋಳಗಿನ ಎಲಿ ಅಡಿಕಿ ಮಡಿಚಿ ಬಾಯಿಗಿಟ್ಟಕೊಳ್ಳುತ, ''ಯಾಕಬಂದಿದ್ದೆವಾ ...? ಏನ ಕೆಲಸಿತ್ತ ಹೇಳ'' ಅಂತ ಕೇಳಿದ. ಮುತ್ತವ್ವ ಮುದುಕಿ ಬಚ್ಚಬಾಯಿ ಒರಿಸಿಕೊಂಡು ''ಎನಿಲ್ಲೆಪಾ, ನಿನ್ನಿ ಸಾಲ್ಯಾಗ ನಮ್ಮ ಕಿಟ್ಟಿದ ಬಹುಮಾನ ಸನ್ನ ಗೌಡರು ಇಸಗೊಂಡಾರಂತ ಅದನ ತಗೊಂಡ ಹೋಗೊಣಂತ ಬಂದೀವಿ'' ಅಂದಳು. ಗೌಡ ಎಲಿ ಅಡಿಕಿ ಅಗಿಯೊದನ್ನ ಚಣ ನಿಲ್ಲಿಸಿದ... ಕಿವಿ ನಿಮಿರಿಸಕೊಂಡು...

''ಏನಂದಿ... ನಮ ಹುಡುಗ ನಿನ್ನ ಮೊಮ್ಮಗನ ಬಹುಮಾನ ಇಸಗೊಂಡಾನ...? ಯಾಕ ನಿನ್ನ ಮೊಮ್ಮಗನಿಗೇಣ ಬ್ಯಾನಿ ಹಾದಿತ್ತಂತ ಹೊಗಿ ಇಸಕೊಳ್ಳಾಕ? ಎಲ್ಲಿ ಹೋಗಿದ್ದ ...ಸಾಲಿ ಬಿಟ್ಟ ಹುಚ್ಚ ಸೂಳಿಮಗಾ...?'' ಅಂತಂದ ಒಮ್ಮಿಗೆ ಗೌಡರು ಆವೇಶಗೊಂಡದ ನೋಡಿ ಕಿಟ್ಟಿ ಹೆದರಿದ. ಇಲ್ಲಿಗಿ ಯಾಕಾದರು ಬಂದಿನೋ ಅನಿಸತವನಿಗೆ. ಕೈಕಾಲ ನಡಗತೊಡಗಿದವು. ಗೌಡರ ವಿಕರಾಳ ಮುಖದಲಿ ಸಿಟ್ಟಿನೊಂದಿಗೆ ಅವರ ಮೀಸೆಗಳು ಕುಣಿಯತೊಡಗಿದವು. ಕಿಟ್ಟಿ ಹೆದರಿದವನೆ ತನ್ನಜ್ಜಿಯನ್ನು ಬಿಗಿದಪ್ಪಿ ಹಿಡಿದುಕೊಂಡ. ಗೌಡರಿಗೆ ಕೋಪ ಬಂದಿತ್ತು. ಈ ಹೊಲೆ ಮಂದಿ ಮುಂದ ತನ್ನ ಮಗಾ ದಡ್ಡ ಅಂತ ಒಪ್ಪಿಕೊಂಡಂಗಾಯ್ತಲ್ಲಾ ಅಂತ ಕಳವಳ, ಥೂ ಇವನೌವ್ವನ ಹಡಾ ...ಅಂತಂದು ಹಟ್ಟಿಕೆಳಗ ಉಗುಳಿ ಬಲಗೈ ಮುಟುಗಿಯಿಂದ ಎಡ ತೊಡೆ ಮ್ಯಾಲ ನಯವಾಗಿ ಗುದ್ದಿಕೊಳ್ಳುತ ಸಿಟ್ಟನ್ನು ತಹಬದಿಗೆ ತರಲು ಯತ್ನಿಸತೊಡಗಿದರು. ಇದನ್ನೆಲ್ಲವ ಗಮನಿಸುತ್ತಿದ್ದ ಕಿಟ್ಟಿ ಮತ್ತು ಮುತ್ತವ್ವಳ ಮುಖ ಸನ್ನದಾಯಿತು. ಗೌಡರು ಸಿಟ್ಟಿನಾಗ ಏನ ಅಂತಾರೋ ಎನ್ನುವ ಭಯ ಬೇರೆ, ದನಿ ಕ್ಷೀಣಿಸಿ ಗಂಟಲ ಪಸೆ ಒಣಗಿಬಂದು ಮುತ್ತವ್ವ ನಾಜೂಕಿನಿಂದ,

''ಯಪಾ ಅದೇನಾತಂದ್ರ ನಮ್ಮ ಹುಡುಗ ಟೊಪಿಗಿ ಹುಡಿಕ್ಯಾಡಿಕೊಂಡ ಸಾಲಿಗಿ ಹೋಗಾಕ ಯ್ಯಾಳಿ ಆತರಿ, ಸಾಲ್ಯಾಗ ಮಾಸ್ತರಗೋಳ ಇವನ ಹೆಸರಿಡದ ಕರೆದಾಗ ಇರಕ್ಕಿಲ್ಲರ್‍ರೀ... ಇನಾ ಬಂದಿಲ್ಲಂತ ಹುಡುಗ್ರು ಹೇಳ್ಯಾನ ಅಲ್ಲೆ ಮುಂದಗಡೆ ಕುಂತಿದ್ದ ಸನ್ನ ಗೌಡರಿಗಿ ಅವನ ಬದಲಿ ಬಂದ ತಗೋಳಾಕ ಹೇಳಿದರಂತ. ಅವರು ಹೋಗಿ ಇಸಗೊಂಡಾರ. ಅದನ ತಗೋಂದ ಹಾಂಗ ಮನೀಗಿ ಬಂದಾರ. ನಿನ್ನಿ ರಾತರಿನ ಬರಾವರಿದ್ದು ಕತ್ಲಾಗ ಎಲ್ಲಿ ಬೆಳಗ್ಗಿ ಹೋದರಾತಂತ ಬಿಟ್ಟಿವಿರಿ... ಅದನ ಇಸಗೊಂಡ ಹೋಗಾಕ ಬಂದೇವ್ರೀ...'' ಎಂದು ನಡಗುವ ದನಿಯಿಂದ ಮುದುಕಿ ತನ್ನ ಅಳಲನ್ನು ಹೇಳಿತು. ''ಮುತ್ತವ್ವ, ನಿನಗ ಹುಳಿ ಮುಪ್ಪಾ ಕೂಡೆತಿ ಅದಕ ಹರ್‍ಯಾಗಳೆ ಎದ್ದ ತಲಿಕೆಟ್ಟ ಬಂದದಿ. ನನ್ನ ಮಗಾ ನಿನ್ನ ಮೊಮ್ಮಗನಿಗಿಂತ ದಡ್ಡಾ ಅದಾನಂದಿ...? ಖರೆ ಅಂದರ ಆ ಬಹುಮಾನ ನನ್ನ ಮಗನಿಗೆ ಕೊಟ್ಟಾರ. ನಿನಗ್ಯಾರೋ ಸುಳ್ಳ ಹೇಳಿದಾರ ನೋಡ... ಯಾಕಂದರ ಬಹುಮಾನ ಕೊಡಾಕ ನಿನ್ನಿ ಅಧ್ಯಕ್ಷ ಆಗಿ ನನ್ನ ಕರಿಸಿದ್ದರಲ್ಲಾ... ಎಲ್ಲಾ ಹುಡುಗರಿಗಿ ನಾನ ಬಹುಮಾನ ಕೊಟ್ಟಿದಿನಿ... ನಿನ್ನ ಮಗನ ಹೆಸರ ಎಲ್ಲಿ ಹೇಳಲಿಲ್ಲ... ಮತ್ತ ನೀ ಬಂದಾ ಹೇಳತಿ... ನಿನ್ನ ಮೊಮ್ಮಗನ ಬಹುಮಾನ ನನ್ನ ಮಗಾ ತಗೊಂಡಾನಂತ... ಹುಚ್ಚವ್ವಾ... ಹುಚ್ಚವ್ವಾ... [illegible]

ಖರೇಕೊಟ್ಟಿ ಕೇಳಕೊ ಹೋಗ...'' ಅಂದ.

''ಇಲ್ಲರಿ ಯಪ್ಪಾ, ಕಿಳಿಕ್ಯಾತರ ಇಟ್ಟಲ ಮಾಸ್ತರ ಮೂರ ದಿವಸದ ಹಿಂದ ಹೊಳಿ ದಂಡ್ಯಾಗ ಭೇಟಿಯಾಗಿ ಹೇಳಿದ್ದರಿ... 'ಮುತ್ತವ್ವ ನಿನ್ನ ಮೊಮ್ಮಗ ಬಾಳ ಶ್ಯಾಣ್ಯಾ ಅದಾನ ಸಾಲಿ ಬಿಡಸಬ್ಯಾಡವಾ ಚಾರು ಚೂರು ತ್ರಾಸ ಆದರು ಆಗಲಿ, ನಿನ್ನ ಮಗನ ಹೆಸರ ತರತಾನವಾ ನಿನ್ನಿ ಸಂಜಿನಾಗ ಗಾಂಧೀಜಿ ಬಗ್ಗೆ ಭಾಷಣ ಮಾಡಿ ಇಡೀ ಸಾಲಿಗೆ ನಂಬರ ಒನ್ ಬಂದಾನ ಮುಂದಿನ ಮಂಗಳಾರ ಗಾಂಧೀ ಜಯಂತಿ ದಿನ ಅವನಿಗಿ ಫಸ್ಟ್ ಬಹುಮಾನ ಕೊಡತೇವ, ಅಡ್ಡಿಯಿಲ್ಲ ತಲಿ ಬಾಳ ಹಗರೈತಿ, ಗಾಂಧೀ ಜಯಂತಿ ದಿನ ನೀನು ಬಾ ಸಾಲಿಗಿ ಅವ ಬಹುಮಾನ ತಗೋಳೊದ ನೋಡಿಯಂತ...' ಅಂತ ಹೇಳಿದ್ದರು. ಗೌಡ ಈ ಮಾತಿನಿಂದ ತುಸು ಅಧೀರನಾದ, ''ಅಂದರ ಏನ ನಿನ್ನ ಮಾತಿನ ಅರ್ಥ...? ನಾನು ಊರ ಗೌಡ. ಸಾಲಿಯೊಳಗ ಅಂವ್ಯಾಂವ್ರೋ ಕಾಗದ ಕಟಿಗಿ ಬಹುಮಾನ ಕೊಟ್ಟಿದಾನಂತ ಆಸೆಪಡವವನಲ್ಲ ನನ್ನ ಮಗಾ... ನಾನು ಶಿವಾಪೂರ ಗೌಡ ಆದೀನಿ... ಎನೋ ವಯಸ್ಸಾದ ಮುದಿಕಿ ಹಳಿ ಸೀರೋ ಕುಬಸಾನೊ ಬೇಡಾಕ ಬಂದಾಳಂತ ತಿಳದರ ನಮ್ಮ ಮರ್ಯಾದಿಗಿ ಬರಾಬರ ಸುದ್ದಿಯಿಟಗೊಂಡ ಬಂದ ಮಾತಾಡತಿ...? ನೀ ಯಾರ...? ಹಾಂ... ನಿನ್ನ ಗಂಡ ಸತ್ತಾಗ ನಿನ್ನ ಮಗಾ ಸತ್ತಾಗ ನಿಮ್ಮ ಉಸಾಬರಿ ಮಾಡಿದ್ದ ಇನ್ನು ತೀರಿಸಿಲ್ಲ, ಹಾಳಾಗಿ ಹೋಗ್ಲಿ ಬಡವರಂತ ಸದರಾ ಬಿಟ್ರ ಹಿಂಗ ಮರ್ಯಾದಿ ತೆಗಿತಿ...? ಅದೇನೊ ಕಾಗದಾ ಕೊಟ್ಟರಂತ ಈಕಿ ಅದಿಕಾರಲೆ ಬಂದ ಕೇಳಾತಾಳ...? ನಡಿ ಹೊಂಡ ಶ್ಯಾಣ್ಯಾಳದಿ...'' ಎಂದು ಗದರಿದ... ಮುತ್ತವ್ವ ಮನಸಿನೊಳಗೆ ಮರುಗಿದಳು... ಗಂಡಾ ಮಗಾ ಸತ್ತಾಗ ಈ ಗೌಡಾ ಕೊಟ್ಟ ಸಾಲಕ ಊರಮುಂದಿನ ಏರಿ ನೆಲಾ ತನ್ನ ಕಬ್ಜಾ ಮಾಡಿಕೊಂಡಾನಲ್ಲ... ಹುಚನನ್ನ ಹಾಂಟ್ಯಾ... ನನಗ ಅರವು ಮರುವ ಹುಚ್ಚಾ ಮುಪ್ಪಾ ಕೂಡೇತಿ ಅಂತಾನ, ಲಡದು ಬಾಡ್ಯಾ... ಹಳಿ ಸೀರಿ ಕುಬುಸಾ ಇಸಗೊಂಡ ಉಟಗೋಳಕ ನಾನೇನ ಇವನ ರಂಡೀ...? ಸೂಳ್ಯೋ ಮನಸ್ಸಿನಲ್ಲಿಯೆ ಗುಣುಗಿದಳು. ಊರ ಗೌಡ ಅಂದರ ಹಿರಿ ಮಗಾ ಇದ್ದಂಗ ಅವನ ಜೋಡ ಸಿಟ್ಟ ಸೆಡವಾ ಮಾಡಿ ಏನ ಪಡಿಯೊದೈತಿ... ಬೆಚ್ಚಗ ಮಾತಾಡಿ ಬಹುಮಾನ ಇಸಗೊ ಬೇಕು ಅಂತ ಮನಸ್ಸಿನಾಗ ತೀರ್ಮಾನಿಸಿದಳು.

''ಯಪಾ, ಸನ್ನ ಗೌಡ್ರ ಬೇಕಾದರ ಕೇಳ್ರಿ...? ನಾನ್ಯಾಕ ಸುಳ್ಳ ಹೇಳಲಿ... ಓಣ್ಯಾಗಿನ ಹುಡುಗರಲ್ಲ ಹೇಳಾತಾವ, ನಿಮ್ಮ ಕಿಟ್ಟ್ಯಾಗ ಬಹುಮಾನ ಬಂದೈತಿ... ಗೌಡ್ರ ಮಗಾ ತಗೊಂಡಾರ ಇಸ್ಕೋರಿ... ಅಂತ'' ಮುದುಕಿ ಅಂಗಲಾಚಿ ಬೇಡಿಕೊಂಡಿತು. ಗೌಡನಿಗೆ ಮುದುಕಿಯ ಪ್ರತಿ ಮಾತಿನಿಂದ ತನ್ನ ಮಗಾ ದಡ್ಡ ಅಂಬುವ ಹಾಗೂ ಅಣಕಿಸುವುದ ಕಂಡು ಎದಿ ಕೊಯ್ದಂಗಾಗತೊಡಗಿತು. ಇಷ್ಟೆಲ್ಲ ಹ್ಯಾಂವಕ ಬಿದ್ದ ಮ್ಯಾಲ ಇದನ ಬಿಡಬಾರದ ಅಂತ ಗೌಡನು ಒಳಗೊಳಗೆ ಗಟ್ಟಿ ನಿರ್ಧಾರಕ್ಕೆ ಬರತೊಡಗಿದ. ''ನೋಡ ಮುತ್ತವ್ವ ಅದ್ಯಾರೋ ಹೇಳಿದರಂತ ಮುಗುಮ ದಾಗಿನ ಮಾತ ಕೇಳಿಸಿಕೊಂಡ ನನ್ನ ಜೊಡ ವಾದಕ ಬಂದದಿಯೆಲ್ಲ ಬುದ್ಧಿ ಇಲ್ಲ ನಿನಗ...?'' ಕೇಳಿದ ಮುತ್ತವ್ವ ಅತ್ಯಂತ ದೀನಳಾಗಿ ''ಯಪಾ, ಹುಡುಗ ಬಾಳ ಆಸೇ ಇಟಗೊಂಡೈತಿ... ಕರಣಾ ತೋರ್ಸಿ ಕೊಟ್ಟ ಬಿಡರೀ...'' ಅದೆಲ್ಲ ಮುತ್ತವ್ವ ಅಂತ ಏನೋ ಸಮಜಾಯಿಸಿ ಹೇಳಲು ಯತ್ನಿಸಿ ಸೋತು ತಲೆ ಜಾಡಿಸಿದ, ಹೇಗೆ ಪಟ್ಟು ಹಿಡಿಯ ಬೇಕೆನ್ನುವುದು ತಿಳಿಯದೆ ಸೋತು ಮಾತು ಬದಲಿಸಿದ.

''...ಏಯ್ ಹುಡುಗಾ ಭಾಷಣ ಎನಂತ ಮಾಡಿದಿ ಹೇಳಲೆ ನೋಡೊಣ...'' ಅಂದಾಗ ಕಿಟ್ಟಿಗೆ ಒಮ್ಮಿಗೆ ಚಳಿ ಜ್ವರ ಆವರಿಸಿಕೊಂಡವು, ಗೌಡರ ಮುಂದೆ ಹೇಗೆ ಹೇಳಬೇಕೊ ತಿಳಿಯದೆ ಒದ್ದಾಡಿದ. ಮುತ್ತವ್ವ ಮೊಮ್ಮಗನಿಗೆ ಹುರುದುಂಬಿಸುತ... ''ಏಳ ಕೂಸ... ಸಮ್ಮಪ್ಪ ಶ್ಯಾಣ್ಯಾ ಸಾಲ್ಯಾಗ ಮಾಡಿದ ಭಾಷಣ ಇಲ್ಲಿ ಹೇಳ ಗೌಡರು ಕೇಳತಾರಂತ... ಅಂತ ಕೈಹಿಡಿದು ಮೇಲೆಬ್ಬಿಸಿ ಹುರುದುಂಬಿಸಲು ಯತ್ನಿಸಿದಳು. ಕಿಟ್ಟಿಗೆ ಭಯಂಕರ ಹೆದರಿಕೆ... ''ಆಯಿ ನನಗ ಬರಾಂಗಿಲ್ಲ...ನಾ ಇಲ್ಲವಾ... ಬಾ ಮನೀಗಿ ಹೋಗೋಣು...'' ಅಂತ ಕೈಹಿಡಿದ ಎಳೆಯತೊಡಗಿದ...

''ಅಯ್, ನಿನ್ನ ಒಂದೀಟ ಬಾಷನ ಮಾಡಾಕ ಅಟ್ಯಾಕ ಅಂಜತೀ... ನಾ ಹಿಂಬಾಲಿಲ್ಲ...? ಒಂದೇರಡ ನುಡಿ ಹೇಳ ನಮ್ಮವ್ವನ ಗಂಡ ಶ್ಯಾಣ್ಯಾ. ಹೇಳಪಾ ಬರಕ್ಕನ ತಗೊಂದ ಹೋಗೋಣಂತ'' ಅಂತ ರಮಿಸಿ ಪ್ರಯತ್ನಿಸಿದಳು. ಆದರೆ ಹೆದರಿಕೊಂಡಿದ್ದ ಕಿಟ್ಟಿಗೆ ಬಾಯಿಂದ ಅಳು ಬಿಟ್ಟರೆ ಬೇರೇನು ಬರಲಿಲ್ಲ. ಗೌಡರು ಒಳಗೊಳಗೆ ನಗುತ ಖುಷಿಪಟ್ಟರು, ಮುದುಕಿ ಛಲಬಿಡದ ತ್ರಿವಿಕ್ರಮನಂತೆ ಮತ್ತೆ ಕೇಳಿತು.

''ಯಪಾ, ಹುಡುಗ ಹೆದೆರೆತಿ... ಇರ್ಲಿ ಕೊಟ್ಟಬಿಡರಿ... ನಿಮ್ಮ ಕೈ ಮುಗಿತೀನಿ... ಕಾಲಬೀಳತೀನಿ...'' ಅಂತ ಅಲ್ಲಿಂದಲೆ ಉದ್ದಕ ನಮಸ್ಕರಿಸಿತು. ಆದರು ಗೌಡನ ಮನಸ್ಸು ಕರಗಲಿಲ್ಲ.

''ಹೋಗ್ಲಿ ಬಿಡು ಮುತ್ತವ್ವವಾ ಭಾಷಣ ಮಾಡೋದೇನ ಬ್ಯಾಡ. ಇನ್ನೊಂದ ಕೇಳತೀನಿ... ಅದನರ ಮಾಡಿ ತೋರಿಸಲಿ...''

''ಏನೆಪಾ,...?''

''ಅಲ್ಲಿ ಹೊರಗ ಹುಣಚಿ ಗಿಡಾ ಕಾನಾಂಗಿಲ್ಲ, ಅದನ ಮುಟ್ಟು ಬರಬೇಕು ನಾ ಹತ್ತ ಎಣಿಸತಿನಿ ಇದನಾರ ಮಾಡತನ... ಕೇಳ...?'' ಅಂದ ಈಗ ಕಿಟ್ಟಿ ಅವನಜ್ಜಿ ಕೆಳಕ್ಕಿಂತ ಮುಂಚೆ ತಲೆಯಾಡಿಸಿದ. ಸರಿ ಬಾ ಹಂಗಾದರ,... ಅಂತ ಕರೆದು ತಮ್ಮ ತೊಲಬಾಗಿಲ ಬಳಿ ನಿಲ್ಲಾಕ ಹೇಳಿ... ಹೂಂ ಓಡು... ಅಂದರು... ಕಿಟ್ಟಿ ತಲಿ ಕೆಟ್ಟು ಹೆಂಗಾರ ಮಾಡಿ ಹತ್ತ ಮುಗಿಯುವದರೊಳಗ ಓಡಬೇಕಂತ ಮಾಡಿ ರಭಸದಿಂದ ಓಡಿದ... ತನ್ನೆಲ್ಲ ಶಕ್ತಿಯನ್ನು ಉಪಯೋಗಿಸಿಕೊಂಡು ಓಡಿದ... ಓಡಿ... ಗಿಡ ಮುಟ್ಟಿ ಹಿಂತಿರಗಬೇಕಾದರೆ ...ಅದೆಲ್ಲಿದ್ದವು ಗೌಡರ ನಾಯಿಗಳು ಒಂದರ ಹಿಂದೆ ಒಂದರಂತೆ ಏಳು ನಾಯಿಗಳು ಒಮ್ಮಿಗೆ ಕಿಟ್ಟಿಯ ಮೇಲೆ ಆಕ್ರಮಿಸಿದವು. ಅವ ಕೊಸರಾಡಿದತ್ತ ಜಿಗಿಜಿಗಿದು ಹಾರಾಡುತ ಬಾಯಿಗಿ ಸಿಕ್ಕಷ್ಟನ್ನು ರಭಸವಾಗಿ ಕಿತ್ತುಕೊಳ್ಳತೊಡಗಿದವು. ಕಿಟ್ಟಿ ಅವ್ವಾ... ನಾಯಿ..., ಆಯಿ..., ನಾಯಿ..., ಹಚಾ..., ಹಚ..., ಕೂಗಿದ ಕೊಸರಾಡಿದ. ಅವು ಹಸಿವಿನಿಂದ ದುಮ್ಮಿಕ್ಕುತ್ತಿದ್ದವು. ಮುತ್ತವ್ವ ಮೊಮ್ಮಗನ ಪರಿಸ್ಥಿತಿ ನೋಡಿ ಜೀವವೆ ಬಾಯಿಗಿ ಗುದ್ದಿಕೊಂಡ ಬಂದು ಕಿಟ್ಟಿ ನನ್ನಪಾ ಮೊಮ್ಮಗನ ಹಚಾ..., ಯಾರರೆ ಬರ್ರ್ರೋ..., ನನ್ನ ಮೊಮ್ಮಗನ ಬಿಡಿಸರ್ರೊ... ಏಳುತ ಬೀಳುತ ಮೊಮ್ಮಗನ ಬಿಡಿಸಿಕೊಳ್ಳುಲು ಓಡಿಹೋದಳು, ಗೌಡರು ಕಿರುನಗೆ ಬೀರುತ ಒಳನಡೆದರು ಅಷ್ಟೆ...

ಚಿದಂಬರ
ಕೇರಾಫ್ : ಬಸವಣ್ಣೆಪ್ಪಾ ಸ. ಕಂಬಾರ, ಅಂಚೆ-ಘೊಡಗೇರಿ
ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ - ೫೯೧ ೧೦೭

ಮೌಖಿಕ ಪರಂಪರೆಯನ್ನು ಗತ ಅಥವಾ ಪಳೆಯುಳಿಕೆ ಎಂದು, ಲಿಖಿತ ಪರಂಪರೆಯನ್ನು ಸಮಕಾಲೀನ ಹಾಗೂ ಅಧಿಕೃತವೆಂದು ವ್ಯಾಖ್ಯಾನಿಸಲಾಗುತ್ತದೆ. ಲಿಖಿತ ಸಂಪ್ರದಾಯವನ್ನು 'ಸಿದ್ಧ' ಹಾಗೂ 'ಶುದ್ಧ' ಮೌಖಿಕ ಪರಂಪರೆಗಳನ್ನು ಅಶುದ್ಧ ಹಾಗೂ ನಂಬಿಕೆಗೆ ಅನರ್ಹ ಎನ್ನುವ ಚರ್ಚೆಗಳು ಮತ್ತು ಅವುಗಳ ಹಿಂದಿನ ಮನೋಧರ್ಮಗಳನ್ನು ಇಂದು ಪುನರವಲೋಕನ ಮಾಡಬೇಕಿದೆ. ಮೌಖಿಕ ಹಾಗೂ ಲಿಖಿತ ಎನ್ನುವ ಎರಡು ಪರಿಕಲ್ಪನೆಗಳ ಹುಟ್ಟು ಹಿಂದುಮುಂದಾದರೂ ಅವು ಜೊತೆ ಜೊತೆಯಲ್ಲಿಯೇ ಪರಸ್ಪರ ಪ್ರಭಾವಿಸುತ್ತ ಬೆಳೆದುಬಂದಿರುವುದನ್ನು ಅಲ್ಲಗಳೆಯಲಾಗದು. ಇದಕ್ಕೆ ಕನ್ನಡದ ಪ್ರಾಚೀನ ಹಾಗೂ ಮಧ್ಯಕಾಲೀನ ಸಾಂಸ್ಕೃತಿಕ ಪರಿಸರ ಉತ್ತಮ ಉದಾಹರಣೆ ಆಗಿದೆ. ಲಿಖಿತ ಮೂಲದಿಂದಲೇ ನಮ್ಮ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಳ್ಳುವ ನಾವು ಲಿಖಿತಗೊಂಡ ಕೃತಿಗಳೇ ಬಾಯಿಬಿಟ್ಟು ಹೇಳುವ ಶಿಷ್ಟ ಹಾಗೂ ಮೌಖಿಕತೆಯ ಸಹ-ಸಂಬಂಧಗಳನ್ನು ಅಷ್ಟಾಗಿ ಗಮನಿಸಲೇ ಇಲ್ಲ. ಮೌಖಿಕ ಅನುಭವಗಳ ನೂಲುಗಳು ಲಿಖಿತ ಗುಣದಲ್ಲು ಲಿಖಿತ ಅನುಭವಗಳ ನೂಲುಗಳು ಮೌಖಿಕ ಗುಣದಲ್ಲು ಬೆರೆತು ಹೊಸೆದುಕೊಂಡು ಸೃಷ್ಟಿಸಿದ ಸಂಸ್ಕೃತಿಯ ಹೊಸಬಟ್ಟೆಯು ಧರಿಸಿದವನ ಧಿಮಾಕಿನಲ್ಲಿ ಪಾರ್ಶ್ವಿಕ ಅರ್ಥ ಪಡೆಯಿತು. ಅದು ಬದುಕುಮುಚ್ಚುವ ಹೊದಿಕೆಯಾಗದೆ ಬಿಚ್ಚಿ ತೋರಿಸುವ ಶೋಕಿಯಾಯಿತು. ಅಂದರೆ ಮೌಖಿಕಗುಣ ಮಂಕಾಗಿ ಲಿಖಿತಗುಣ ಮುಂದಾಯಿತು. ಪ್ರಭುತ್ವ ಆಧಾರಿತ ಲಿಖಿತ ಪರಂಪರೆ ಹಾಗೂ ಆ ರೀತಿಯ ಆಲೋಚನಾ ಕ್ರಮಗಳು ಮೌಖಿಕ ಅನುಭವಗಳನ್ನು ಅಲಕ್ಷಿಸುತ್ತಾ ನಡೆದವು. ಅವುಗಳ ಪ್ರಾಮಾಣಿಕತೆಯನ್ನೆ ಪ್ರಶ್ನೆ ಮಾಡಿದವು.

ಇದು ಎಲ್ಲಿಯವರೆಗೆ ಹೋಯಿತೆಂದರೆ ಮೌಖಿಕವನ್ನೇ ನೆಚ್ಚಿಕೊಂಡ ಅಲಕ್ಷಿತ ಸಮುದಾಯಗಳಿಗೆ ತಮ್ಮದೇ ಆದ ಬದುಕಿನ ಕ್ರಮ ಹಾಗೂ ಜ್ಞಾನದ ನೆಲೆಗಳು ಇದ್ದಾಗಲೂ ಅವು ಲಿಖಿತ ಪರಂಪರೆ ಅಥವಾ ಸಾಮಾಜಿಕ ಸಂಸ್ಥೆಗಳ ಮೂಲಕವೇ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವಂತಾಯಿತು. ಈಗಾಗಲೇ ಅಧಿಕಾರ ಹಾಗೂ ಸವಲತ್ತುಗಳ ಮೂಲಕ ಅಸ್ತಿತ್ವ ಕಂಡುಕೊಂಡ ಇಂಥ ವರ್ಗಗಳಿಗಾಗಿ ದುಡಿಯಬೇಕಾಯಿತು. ಅಥವಾ ಅವರ ಹಂಗಿನಲ್ಲಿ ಬದುಕಬೇಕಾಯಿತು. ಕಾರಣ ಲಿಪಿ ಮತ್ತು ಭಾಷೆ ಜ್ಞಾನದ ಅಮೂರ್ತ ರೂಪಕ್ಕೆ ಮೂರ್ತರೂಪ ಕೊಟ್ಟು ಅದರ ಎಲ್ಲೆಗಳನ್ನು ನಿರ್ಧರಿಸುತ್ತವೆ. ಭಾಷೆಯ ಮೂಲಕವೇ ನಾವು ಬಹುತೇಕ ಎಲ್ಲ ಜ್ಞಾನವನ್ನು ಪಡೆಯುತ್ತೇವೆ. ಆದರೆ ಈ ಭಾಷೆಯ ಮೂರ್ತಸ್ವರೂಪವನ್ನು ಸಂಸ್ಥೆಗಳು ನಿಯಂತ್ರಿಸುತ್ತವೆ. ಪರಿಣಾಮತಃ ಸಾಂಸ್ಥಿಕ ನಿಯಂತ್ರಣ ವಿಲ್ಲದ ಭಾಷೆಯಿಲ್ಲ; ಭಾಷೆ ರೂಪಿಸದ ಜ್ಞಾನವಿರುವುದಿಲ್ಲ. ಕಾರಣ ಜ್ಞಾನ-ಅಧಿಕಾರ-ನೇರಸಂಬಂಧ ಹೊಂದಿದ ಸಂಸ್ಥೆಗಳು ತಮ್ಮ ಸ್ಥಾನ ಹಾಗೂ ಅಧಿಕಾರ ಉಳಿಕೆಗಾಗಿ ಎಲ್ಲ ಕ್ಷೇತ್ರಗಳಲ್ಲೂ ಜ್ಞಾನವನ್ನು ರೂಪಿಸುವ ಡಿಸ್‌ಕೋರ್ಸ್‌ಗಳನ್ನು ಸೃಷ್ಟಿಸುತ್ತವೆ. ಆ ಪ್ರಕಾರ ಯಾರು ಮಾತನಾಡಬೇಕು, ಯಾರು ಕೇಳಬೇಕು ಎನ್ನುವ ಪ್ರಮೇಯಗಳನ್ನು ಹಡೆಯುತ್ತವೆ. ಹೀಗಾಗಿ ಅಕ್ಷರಿಕವಲ್ಲದ ಸಂವೇದನೆಗಳು ಸ್ವತಂತ್ರವಾಗಿದ್ದರೂ ಅಕ್ಷರದ ಸಾಂಸ್ಥೀಕರಣದ ನೆಲೆಗಳಿಗೆ ಅಧೀನವಾಗಿಸಿಕೊಂಡಿದ್ದು ಕಾಣುತ್ತದೆ. ಆ ಮೂಲಕ ತನ್ನ ಅಧಿಕೃತತೆಯನ್ನು ಕಂಡುಕೊಳ್ಳುವ ಅನಿವಾರ್ಯತೆಗೆ ಸಿಕ್ಕಿಕೊಳ್ಳುತ್ತವೆ.

ಮೌಖಿಕತೆ ಎನ್ನುವುದು ಜನರ ಬದುಕಿನ ಆತ್ಮಕಥನವಾದರೆ ಅಲಿಖಿತತೆ ಎನ್ನುವುದು ಹೆಚ್ಚಿನ ಸಂದರ್ಭದಲ್ಲಿ ಮಹಾನ್ ಪಂಡಿತರಿಂದ ವೈಭವೀಕೃತಗೊಂಡ ಮಹಾನ್ ಸಾಮ್ರಾಟರ ಹಾಗೂ ಬೃಹತ್ ಸ್ಮಾರಕಗಳ ಕಥನವಾಗಿ ರೂಪಗೊಂಡಿತು. ಲಿಖಿತ ಪರಂಪರೆ ನೆಲೆಗಟ್ಟಿದಂತೆಲ್ಲಾ ಸಂಸ್ಕೃತಿಯ ವ್ಯಾಪ್ತಿ ಕುಗ್ಗುತ್ತ ಹೋಯಿತು. ಅಕ್ಷರವು ಅನುಭವವನ್ನು ತಲೆಮಾರಿಗೆ ದಾಟಿಸುತ್ತ ಹೋದಂತೆ ಅಕ್ಷರದಾಚೆಯಿರುವ ಸಮುದಾಯವನ್ನು ಅಸ್ಪೃಶ್ಯಗೊಳಿಸುತ್ತ ಹೋಯಿತು. ಅಕ್ಷರಕ್ಕೆ ದಕ್ಕುವ ಅಧಿಕಾರ ಹಾಗೂ ಸವಲತ್ತುಗಳು ಇಂಥ ಸಾಮಾಜಿಕ ಅಸ್ಪೃಶ್ಯತೆಗೆ ಕಾರಣವಾಗಬಲ್ಲವು. ಧಾರ್ಮಿಕ ಪ್ರಭುತ್ವ, ರಾಜಪ್ರಭುತ್ವ ಹಾಗೂ ವಸಾಹತು ಪ್ರಭುತ್ವಗಳು ಇಂಥ ಅಧಿಕಾರ ಹಾಗೂ ಸವಲತ್ತುಗಳ ಮೇಲೆಯೇ ನಿಂತಿರುವಂಥವು. ಹೀಗಾಗಿ ಹೆಚ್ಚಿನ ಸಂದರ್ಭದಲ್ಲಿ ಅಕ್ಷರ ಇಂಥ ವರ್ಗಗಳ ಚರಿತ್ರೆಯನ್ನು ಸೆರೆಹಿಡಿಯಿತು. ಈ ಪ್ರಕ್ರಿಯೆಯಿಂದ ವಂಚಿತವಾಗಿ ಅಂಚಿನಲ್ಲಿ ಉಳಿದ ಎಷ್ಟೋ ಪ್ರತಿಭಾವಂತ ಅನುಭವಗಳು ದಾಖಲಾಗದೆ ಉಳಿದವು. ಆದರೂ ಮೌಖಿಕ ಪ್ರಜ್ಞೆಯ ವಿಸ್ತಾರ ಜಗತ್ತು ತನ್ನ ಚರಿತ್ರೆಯನ್ನು ಒಂದಿಲ್ಲೊಂದು ರೀತಿಯಲ್ಲಿ ರೂಪಿಸಿಕೊಳ್ಳುತ್ತ ಬದುಕುಳಿಯಿತು. ಅಡಗಿಸುವವರ ವಿರುದ್ಧ ಧ್ವನಿ ಎತ್ತುತ್ತ ಬಂದಿತು. ಆ ಧ್ವನಿಯೇ ಅದರ ಅಸ್ತಿತ್ವವೂ ಆಯಿತು.

ವಿಶೇಷವಾಗಿ ದೇವಾಲಯ ಹಾಗೂ ಅರಮನೆಕೇಂದ್ರಿತ ವ್ಯವಸ್ಥೆಗಳು ಅಲಕ್ಷಿತ ಸಮುದಾಯಗಳ ದುಡಿಮೆ ಹಾಗೂ ನಂಬಿಕೆಯ ಮೇಲೆಯೇ ತಮ್ಮ ಯಜಮಾನಿಕೆಯನ್ನು ಸ್ಥಾಪಿಸಿಕೊಂಡವು. ಇಂಥ ನೆಲಗಳಿಗೆ ನಿಷ್ಠೆದೋರಿದ ಶ್ರಮಿಕವರ್ಗಗಳ ಆತ್ಮಕಥನಗಳ ಮೇಲೆ ಅಥವಾ ಅವುಗಳ ಅನುಭವ ಕಥನಗಳಿಗೆ ಯಜಮಾನಿಕೆಯ ಹಲವಾರು ಸಂಗತಿಗಳು ನುಸುಳಿಕೊಂಡು, ಶ್ರಮಿಕವರ್ಗಗಳ ಸ್ವಾನುಭವವನ್ನು ಅನುಮಾನಿಸುವಂತಾದವು. ಅಧಿಕೃತತೆಯನ್ನು ಪಡೆಯುವ ಹಂಬಲದಿಂದ, ಶ್ರಮಿಕವರ್ಗಗಳು ಲಿಖಿತ ಪರಂಪರೆಯ ಹಲವು ಸಾಕ್ಷಿಗಳನ್ನು ಮೈಗೂಡಿಸಿಕೊಂಡವು. ಈ ಪ್ರಕ್ರಿಯೆಯಲ್ಲಿ ಪರಸ್ಪರ ಕೊಟ್ಟು-ಪಡೆಯುವ ಅಥವಾ ಸೌಜನ್ಯವೆಂದೆನಿಸುವ ಸಂಗತಿಗಳಿಗಿಂತ ಅಧಿಕಾರಸ್ಥ ನೆಲೆಗಳೇ ಹೆಚ್ಚು ಕಂಡುಬರುತ್ತವೆ. ಅಕ್ಷರದ ದರ್ಪ ಆಂತರಿಕ ಸಾಕ್ಷಿಗಿಂತ ಬಾಹ್ಯಪ್ರಜ್ಞೆಗೆ ಹೆಚ್ಚು ಆದ್ಯತೆ ನೀಡಿತು. ಇಂಥ ಹಲವಾರು ಕಾರಣಗಳು ಮೌಖಿಕ ಪರಂಪರೆಯ ವಿವಿಧ ಕಥಾನಕಗಳಲ್ಲಿ ಅಚ್ಚಳಿಯದೆ ಕಾಣಸಿಗುತ್ತವೆ.

ಮೌಖಿಕ ಪರಂಪರೆಯ ಪ್ರಮುಖ ಪ್ರದರ್ಶನ ಕಲೆಗಳಾದ ಭಜನೆ, ಗೀಗಿ, ಡೊಳ್ಳು, ಲಾವಣಿ, ಎಲ್ಲಮ್ಮನ ಹಾಡು, ಗೊಂದಲಿಗರ ಹಾಡು, ರಿವಾಯತ್ ಹಾಡು, ಬಯಲಾಟ ಇತ್ಯಾದಿ ಪ್ರಕಾರಗಳಲ್ಲಿ ಈ ತರಹದ ಸಂಗತಿಗಳನ್ನು ಕಾಣಬಹುದು. ಇದನ್ನು ಮೀರಿಯೂ ಬರವಣಿಗೆಯ ಪರಿಕರಗಳಾದ ಹಸ್ತಪ್ರತಿಗಳ ಪುಷ್ಪಿಕೆ ಭಾಗದಲ್ಲೂ ಇಂಥ ಅಧೀನ

ಡಾ|| ವೀರೇಶ ಬಡಿಗೇರ



# ಜಾನಪದ ಕಥಾನಕಗಳಲ್ಲಿ ಲೇಖನ ಸಾಮಗ್ರಿಗಳ ಬಳಕೆ

ನೆಲೆಗಳು ಲಿಪಿಕಾರರನ್ನು ಬಾಧಿಸಿರುವುದು ಕಂಡುಬರುತ್ತದೆ.

ಜಾನಪದ ಸಾಹಿತ್ಯ ಪ್ರಕಾರಗಳಲ್ಲಿನ ಸವಾಲು- ಜವಾಬು ಸ್ವರೂಪದ ಹಾಗೂ ಕಥನ ಪ್ರಧಾನ ಹಾಡುಗಳಲ್ಲಿ ಬರವಣಿಗೆಯ ಪರಿಕರಗಳ ಉಲ್ಲೇಖಗಳು ಕಂಡುಬರುತ್ತವೆ. ಇದೊಂದು ವಿಚಿತ್ರವೆನಿಸಿದರೂ ಸತ್ಯ ಸಂಗತಿ. ಹೆಚ್ಚಿನ ಸಂದರ್ಭದಲ್ಲಿ ಮೌಖಿಕ ಪಾತಳಿ ಹಾಗೂ ಬರಹ ಪಾತಳಿ ಎರಡೂ ಪರಸ್ಪರ ಕೊಟ್ಟು ಪಡೆದುಕೊಂಡ ನೆಲೆಗಳನ್ನು ಇದು ಪ್ರತೀಕಿಸುತ್ತದೆ.

**ವಾಲೆಯ ಉಲ್ಲೇಖ :** ಕೆರೆಹೊನ್ನಮ್ಮ ಲಾವಣಿಯಲ್ಲಿ ಮಳತೆ ಮಲ್ಲೆಗೌಡರು ತನ್ನ ಎರಡು ಗಂಡುಮಕ್ಕಳಿಗೆ ಹೆಣ್ಣು ಕೇಳಲು ಆನೇಕ್ವಾಟೆ ಅರಸ ರಾಯರಿಗೆ ವಾಲೆ ಬರೆದು ಕುಳವಾಡಿಯ ಕೈಯಲ್ಲಿ ಕಳಿಸುವ ಸಂದರ್ಭ ಬರುತ್ತದೆ. ಕುಳವಾಡಿಯ ಕರೆಸಿ ಊಟ ಮಾಡಿಸಿ...

ಊಟ ಮಾಡಿದವನಿಗೆ ಇಳ್ಯಾವ ಕೊಡುತಾರೆ
ಅವರಾಗ ಮಲ್ಲೆಗೌಡರು ಮಾರುದ್ದ ವಾಲೆಯ
ಅವರು ಬ್ಯಾಗನೇ ತೆಗೆದವರೆ
ಕರಕರನೆ ಅಕ್ಷರವಾ ಏನಂತ ಬರೆದವರೆ

ಕ್ವಾಟೆಯ ಸೂರರೇ ಭಾವರಸರೇ
ನಾ ಬುಧವಾರ ಸಾಯಂಕಾಲ ನಾ ಹೆಣ್ಣಿಗೆ ಬರತೀನಿ

..............................................................

ನನಗೊಂದು ಮಾತಿನಲಿ
ನನಗೆ ಹೆಣ್ಣ ಕೊಡಬೇಕ
ಹಾಗಂತ ಬರೆದಾರು ಕೊಳ್ಳಪ್ಪ ಕುಳವಾಡಿ
ನೀ ಕ್ವಾಟೆಯೂರಿಗೆ ಹೋಗಿ
ನಿನ್ನ ಒಡೆಯ ಅರಸರಾಯಂಗೆ
ಈ ವಾಲೆಯ ಕೊಡುಹೋಗು
ಆಗ ಕುಳವಾಡಿ ವಾಲೆ ತಗೊಂಡು
ಕ್ವಾಟೆಯೂರಿಗೆ ಅವನು
ಓಡೋಡಿ ಹೋಗುತಾನೆ

..............................

..............................

ಈ ವಾಲೆಯ ತೆಗಿದಾನೋ
ಅವರ ಮುಂದಕೆ ಮಡಗಿದಾನೋ
ಅವರಾಗ ಅರಸರಾಯರು
ವಾಲೆಯ ತಕ್ಕೊಂಡು ಒಳಗಿರುವ ಹೆಂಗಸೆ
ಕುಳವಾಡಿಗೆ ಊಟಕೆ ಹಾಕೆ
ಆಗ ತಾಯಿ ಅವನಿಗೆ ಊಟಕೆ ಇಕ್ಕುತಾರೆ

ಊಟ ಮಾಡಿದವನಿಗೆ ಅವರು ಇಳ್ಯಾವ ಕೊಡುತಾರೆ
ಅವರಾಗ ಅರಸರಾಯರು ಹ್ವಾದಂತ ವಾಲೆಯ
ಅವರು ಓದಿ ನೋಡುತಾರೆ
ಹೇ ಒಳಗಿರುವ ಹೆಂಗಸೆ ನೀ ಈಚೆಗೇ ಬಾರೆಣೆ
ಹೇ ಮಳೆತ ಮಲ್ಲೆಗೌಡರು
ಬರದಿರುವ ವಾಲೆಯ ನೋಡು

ಅವರು ಬರೆದಿರುವ ವಾಲೆಯ
ನನಗೆ ಹೇಳಕೆ ಬಾಯೇ ಬರದು
ಈ ಬುಧವಾರ ಸಾಯಂಕಾಲ
ಅವರು ಹೆಣ್ಣಿಗೆ ಬತ್ತಾರಂತೆ

..............................

..............................

ಇದಕೇನು ಉತ್ತರವಾ
ನಾ ಹೇಳಿ ಕಳುಹಿಸಲಿ ಹೆಂಗಸೇ

..............................

ಅವರ ಸಕುನ ಸಾಲಾವಳಿ
ಚೆಂದಾಗಿ ಕೇಳಿಸಿಕೊಂಡು
ಅವರಿಗೆ ಒಳ್ಳೇದು ಬಂದಾರೆ
ಅವರು ಬರಲ್ಹೇಳಿ

ಆಗ ಅರಸರಾಯರು ಮತ್ತೊಂದು ವಾಲೆಯ
ಏನಂತ ಬರೆದವರೆ
ನಿಮ್ಮ ಸಕುನ ಸಾಲಾವಳಿ
ಚೆಂದಾಗಿ ಕೇಳಿಸಿಕಳ್ಳಿ
ನಿಮಗೆ ಒಳ್ಳೇದು ಬಂದರೆ
ನೀವು ಹೆಣ್ಣಿಗೆ ಬರಬಹುದು
ಅಂತೇಳಿ ಅವರು ಅಕ್ಷರವಾ
ಕರಕರನೇ ಬರೆದವರೇ
ಕೊಳ್ಳಪ್ಪ ಕುಳುವಾಡಿ
ನೀ ವಾಲೆಯ ತಕ್ಕೊಂಡು ಹೋಗೋ
ನಿನ್ನ ಒಡೆಯ ಮಲ್ಲೆಗೌಡರಿಗೆ
ಈ ವಾಲೆಯ ಕೊಡೊ

ಆಗ ಕುಳುವಾಡಿ ವಾಲೆಯ ತಕ್ಕೊಂಡು
ಮತ್ತೇ ಊರಿಗೆ ಓಡಿ ಬಂದನಲ್ಲಾ

ಬಂದ ಕುಳುವಾಡಿಯ ಯೋಗ ಕ್ಷೇಮ ವಿಚಾರಿಸಿ

ಊಟಕ್ಕಿಕ್ಕಿಸಿ ಮಲ್ಲೇಗೌಡರು ವಾಲೆಯ ಓದಿ ನೋಡುತಾರೆ. ಹೆಣ್ಣು ಕೊಡಲು ಒಪ್ಪಿದ ವಿಷಯ ತಿಳಿದು ಹಿಗ್ಗಿ ಹೆಗ್ಗೋಡಾಗುತ್ತಾರೆ.

ನಂತರ ಅಯ್ಯನವರ ಕರೆಸಿ ಪಂಚಾಂಗ ತೆಗಿಸಿ ಸಾಲಾವಳಿ ಕೇಳುತ್ತಾರೆ. ಆಗ ಗಂಡು ಹೆಣ್ಣಿನ ಜಾತಕ ಹೊಂದುವುದಿಲ್ಲ.

*ಗಂಡು ಹುಲ್ಲೆಕಾರ*
*ಹೆಣ್ಣು ರಾಕ್ಷಸಿ*
*ಇದುವೆನೆ ಮಲ್ಲೇಗೌಡರೇ*
*ಗಣಕೂಟ ಹೊಂದಿಲ್ಲ*
*ಆ ಕಟ್ಟು ಬ್ಯಾಡಿ ಸ್ವಾಮಿ*
*ನೀವು ತೆಗಿಯಿರಿ ಇನ್ನೊಂದು ಕಟ್ಟಾ*
*ಅವರಪ್ಪಾಜಿ ಕಾಲದ ಮುಪ್ಪಿನ ಪಂಚಾಂಗ*
*ಆ ಮುಪ್ಪಿನ ಪಂಚಾಂಗ*
*ಅವರು ತೆಗೆದು ನೋಡುತಾರ*
*ಈ ಹೆಣ್ಣಿಗೂ ಗಂಡಿಗೂ*
*ದೇವಗಣ ಹೊಂದಿದವು*
*ಸನಿಪೂಜೆ ಲಗ್ನ ಒದಗಿ ಬಂದಿದವೊ*
*(ಕೆರೆಹೊನ್ನಮ್ಮ, ಪುಟ ೧೬)*

– ಇಡೀ ಹಾಡಿನಲ್ಲಿ ಓಲೆಗರಿ ಹಾಗೂ ಬರವಣಿಗೆಯ ಸಂಗತಿಗಳು ಸಂಬಂಧ ಬೆಸೆಯುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಕುಳುವಾಡಿ ಮಧ್ಯಸ್ಥಿಕೆಯಲ್ಲಿ ನಡೆಯುವ ಸಂಬಂಧ ಸಂವರ್ಧನೆ ನಂಬಿಕೆಯನ್ನು ಸ್ಥಿರೀಕರಿಸುವತ್ತ ಆಸಕ್ತಿ ವಹಿಸುತ್ತದೆ. ವಿಶೇಷವಾಗಿ ಹೆಣ್ಣು-ಗಂಡು, ನೋಡುವ, ನಿಶ್ಚಯಿಸುವ ಸಂಗತಿಗಳು ತುಂಬ ನಂಬಿಕೆ ಯುಕ್ತ ಜಗತ್ತನ್ನು ಅಪೇಕ್ಷೆಪಡುತ್ತವೆ. ಹಾಡಿನಲ್ಲಿ ಬರುವ ಇಬ್ಬರು ಗೌಡ ಹಾಗೂ ಗೌಡಿತಿಯರು ಸಾಕ್ಷರರಲ್ಲ ದಿದ್ದರೂ ಅಕ್ಷರ ಬಲ್ಲವರ ಸಹಾಯದಿಂದ ಓಲೆ ವಿನಿಮಯ ಮಾಡಿಕೊಳ್ಳುವ ರೀತಿ ಬೆರಗು ಹುಟ್ಟಿಸು ವಂಥದ್ದು. ಅಂದರೆ ಮಾತಿಗಿಂತ ಬರವಣಿಗೆಗೆ ಇರುವ ಅಧಿಕೃತತೆ ಹಾಗೂ ಮಾನ್ಯತೆಯನ್ನು ಸ್ಪಷ್ಟಗೊಳಿಸುತ್ತದೆ. ಬರೆಯುವವ ಬೇರೊಬ್ಬ, ತಲುಪಿಸುವವ ಇನ್ನೊಬ್ಬ, ವಿಷಯ ತಿಳಿದುಕೊಳ್ಳುವವರು ಮಗದೊಬ್ಬರು. ಆವಾಗ ಏನೆಲ್ಲಾ ಅವಾಂತರಗಳು ನಡೆಯಬಹುದು, ತಪ್ಪು ವ್ಯಾಖ್ಯಾನಗಳು ಆಗಬಹುದು. ಯಾಕೆಂದರೆ ಬರೆಹ ಹಾಗೂ ಓದಿನ ಈ ಪರಿಕ್ರಮಗಳು ಒಂದು ಊರು, ಒಂದು ಕುಟುಂಬದ ಸಂಬಂಧಗಳ ಬೆಸುಗೆಗೆ ಕಾರಣ ವಾಗುವಾಗ ತಮಗನುಕೂಲವಾಗುವ ಸಂಗತಿಗಳನ್ನು ಆಯ್ದುಕೊಳ್ಳುವ ಅಪಾಯಗಳಿರುತ್ತವೆ. ಓದಿನ ಸ್ವಾರ್ಥ ತನಗಳೂ ಇಂಥಲ್ಲಿ ಪ್ರಮುಖ ಕಾರಸ್ಥಾನ ವಹಿಸುತ್ತವೆ. ಆದಾಗ್ಯೂ ಪ್ರಸ್ತುತ ಲಾವಣಿಯಲ್ಲಿ ಅದೊಂದು ನಿಸ್ವಾರ್ಥ ಕ್ರಮವಾಗಿ ಬಳಕೆಗೊಂಡಿದೆ. ಗಂಡು ಹೆಣ್ಣಿನ ಜಾತಕ ನೋಡುವುದು, ಅದು ಕೂಡಿಬರದಿದ್ದಾಗ ಅಪ್ಪನ ಕಾಲದ ಮುಪ್ಪಿನ ಪಂಚಾಂಗ ತೆಗೆದುನೋಡಿ ಲಗ್ನ ಕೂಡಿಸುವುದು ಕುತೂಹಲಕರ ಸಂಗತಿಯಾಗಿದೆ. ಒಂದು ಜಾತಕ ಅಥವಾ ಒಂದು ಪಂಚಾಂಗ ಮಾತ್ರ ಅಧಿಕೃತವಲ್ಲ. ಅನುಕೂಲಕ್ಕಾಗಿ ಮತ್ತೊಂದು ಪಂಚಾಂಗ, ಅಂದರೆ ತಂದೆಯ ತಲೆಮಾರಿನ ಪಂಚಾಂಗವನ್ನು ಹೆಚ್ಚು ನಂಬಿಕೊಳ್ಳುವುದು ಮತ್ತೆ ಬರವಣಿಗೆಯ ಅಸ್ಥಿರತೆಯನ್ನು ತೋರಿಸುತ್ತದೆ. ಅಂದರೆ ನಂಬಿಕೆಯುಕ್ತ ಜನಪದ ಬದುಕು ಹೊಸ ತಲೆಮಾರಿಗಿಂತ ಹಳೆತಲೆಮಾರನ್ನೇ ತನ್ನ ವಿಶ್ವಾಸದ ಜಗತ್ತನ್ನಾಗಿ ಸ್ವೀಕರಿಸುತ್ತದೆ ಮತ್ತು ಪಾಲಿಸುತ್ತದೆ. ಅಕ್ಷರ ಆದರ್ಶ ಹಾಗೂ ಅಧಿಕೃತತೆ ಎನ್ನುವ ಮೌಲ್ಯಗಳು ಮೌಲೀಕರಣ ಗೊಳ್ಳುವುದರ ಜೊತೆಗೆ ಅಪಮೌಲೀಕರಣಗೊಳ್ಳುವ ನೆಲೆಗಳನ್ನು ಇಲ್ಲಿ ಕಾಣುತ್ತೇವೆ. ಡಾ॥ ಚಂದ್ರಶೇಖರ ಕಂಬಾರರು ಸಂಪಾದಿಸಿದ (೧೯೭೩) 'ಮಾತಾಡು ಲಿಂಗವೆ' ಎನ್ನುವ ಸಂಗ್ರಹದಲ್ಲಿ ಬರುವುದಿದು :

*ಆರು ಮಾರುದ್ದ ವಾಲೆಯ ವೋದೋಕೆ*
*ಅಡಿಗಡಿಗೆ ನಿರೂಪ ಬರೆವೋರೇ। ಸಿದ್ರಾಮಯ್ಯ*
*ದೊಡ್ಡೋನು ಕುಂಬುಳಕೆ ದಯವಾದ*

*ಹತ್ತುಮಾರದ ಹೊತ್ತಿಗೆಯ ವೋದೋಕೆ*
*ಹೆಚ್ಚಿನ ನಿರೂಪ ಬರೆವೋರೇ। ಸಿದ್ರಾಮಯ್ಯ*
*ದೊಡ್ಡೋನು ಕುಂಬುಳಕೆ ಯಜಮಾನ*
*(ಪುಟ ೨೮; ೧೯೭೩)*

– ಸಿದ್ರಾಮಯ್ಯನೋರು ಆರು ಮಾರುದ್ದದ ಓಲೆಯ ಗರಿ ಹಾಗೂ ಹತ್ತು ಮಾರುದ್ದದ ಹೊತ್ತಿಗೆ ಬರೆಯು ವುದಲ್ಲದೆ ಓದಿಗೆ ಸುಗಮವಾಗಲು ಅಡಿಯಲ್ಲಿ ಹೆಚ್ಚಿನ ನಿರೂಪ ಬರೆಯುವ ಸಂಗತಿ ಕುತೂಹಲ ತರಿಸುವಂಥವು. ಈತನೊಬ್ಬ ಟೀಕಾಕಾರನು ಆಗಿರಬಹುದು. ಮಧ್ಯಕಾಲೀನ



ಕರ್ನಾಟಕದಲ್ಲಿ ಟೀಕಾಪ್ರಕಾರದ ಸಾಹಿತ್ಯವೇ ಬೆಳೆದು ಬಂದಿರುವುದನ್ನು ಕಾಣಬಹುದು.

ಆರು ಮಾರುದ್ದ ವಾಲೆ ಹತ್ತು ಮಾರುದ್ದದ ಹೊತ್ತಿಗೆ ಆಕೃತಿಯಲ್ಲಿ ಈ ಅಳತೆ ಸಾಧ್ಯವಿಲ್ಲದಿದ್ದರೂ ಬರವಣಿಗೆಯ ದೀರ್ಘತೆ ಅಧಿಕೃತತೆ ಮತ್ತು ಭವ್ಯತೆಯನ್ನು ಕುರಿತು ಇವು ಹೇಳುತ್ತವೆ. ಸಾಮಾನ್ಯವಾಗಿ ಹೆಚ್ಚಿನ ಜಾನಪದ ಹಾಡುಗಳಲ್ಲಿ ಪ್ರಾಸಬದ್ಧವಾಗಿ ಬರವಣಿಗೆಯ ಈ ಸಾಮಗ್ರಿಗಳ ಅಳತೆಗಳು ಹಾಡಿನಂತೆ ಹಿಗ್ಗುತ್ತ ಹೋಗುವುದು ವಿಶೇಷ. ನಿರ್ದಿಷ್ಟ ಮಾನಕಗಳು ಆ ಸಾಮಗ್ರಿಗಳಿಗಿರುವುದಿಲ್ಲ. ಅದೊಂದು ಸಾಂಕೇತಿಕ ಭಾವದಿಂದ ಕೂಡಿರುವ ಸಂಗತಿಯಾಗಿದೆ.

ಓಲೆಗರಿ ಹಾಗೂ ಕಾಗದದ ಬಳಕೆಗಳು ಒಂದು ಕಡೆ ನಂಬಿಕೆ ಹಾಗೂ ಅಕ್ಷರ ಸಂಸ್ಕೃತಿಯ ಪ್ರತೀಕಗಳಾದಂತೆ ಅಕ್ಷರ ಸಂಸ್ಕೃತಿಯ ಹುಸಿತನಗಳನ್ನು ತೋರಿಸುವ ಸಂಗತಿ ಗಳಾಗಿಯೂ ಜಾನಪದ ಹಾಡುಗಳಲ್ಲಿ ಮೂಡಿಬಂದಿರು ವುದು ವಿಶೇಷ. ಡಾ॥ ಚಂದ್ರಶೇಖರ ಕಂಬಾರರು ಸಂಪಾದಿಸಿದ 'ಮಾತಾಡು ಲಿಂಗವೆ' ಸಂಕಲನದಲ್ಲಿ 'ಗುರುತರಿಯದ ಅಳಿಯ' ಎನ್ನುವ ಹಾಡೊಂದರಲ್ಲಿ ಹೀಗಿದೆ :

*ಪಂಚಾಂಗ ಹೇಳೆಂದರೆ ನಮ್ಮಳಿಯ*
*ಪಂಚಪಾತ್ರೆ ತಂದಿಟ್ಟನೆ*
*ಪಂಚಾಂಗ ಎಂಬೋದು ಗುರುತರಿಯದಳಿಯಾಗೆ*
*ಕೊಡಬೌದೆ ಈ ಮಗಳ*

*ತಾಳಿ ತಾರೆಂದರೆ ನಮ್ಮಳಿಯ*
*ತಾಳೆಗರಿಯ ತಂದಿಟ್ಟನೆ*
*ತಾಳಿಯೆಂಬುದು ಗುರುತರಿಯದಳಿಯಗೆ*
*ಕೊಡಬೌದೆ ಈ ಮಗಳ (ಪುಟ ೧೨೦; ೧೯೭೩)*

ಪಂಚಾಂಗ ಹಾಗೂ ಓಲೆಗರಿಗಳು ಕೆರೆಹೊನ್ನಮ್ಮನ ಲಾವಣಿಯಲ್ಲಿ ಬೀಗತನಕ್ಕೆ ಕಾರಣವಾದರೆ ಈ ಹಾಡಿನಲ್ಲಿ ಅದು ಅನಕ್ಷರಸ್ಥ ಹಾಗೂ ಮತಿಹೀನ ಅಳಿಯನಿಗೆ ಮಗಳ ಮದುವೆ ಮಾಡಿಕೊಡಬಹುದೆ, ಎನ್ನುವ ಅನುಮಾನಗಳಿಗೆ ಕಾರಣವಾಗುತ್ತದೆ. ಅಕ್ಷರಸ್ಥ ಸಂಸ್ಕೃತಿ ಬೀಗತನಕ್ಕೆ ಬೇಡುವುದು ಭೌತಿಕ ಆಸ್ತಿಯನ್ನಲ್ಲ, ಬೌದ್ಧಿಕ ಆಸ್ತಿಯನ್ನು ಎನ್ನುವ ಸಂಗತಿ ಗಮನಾರ್ಹವಾದುದು.

ಡಾ॥ ಕಾಳೇಗೌಡ ನಾಗವಾರರು ಸಂಪಾದಿಸಿದ 'ಬಯಲುಸೀಮೆ ಲಾವಣಿಗಳು' ಎನ್ನುವ ಸಂಕಲನದ ಜಾಗಾಲೆ ಲಾವಣಿಯಲ್ಲಿ ಕಾಗದ ಹಾಗೂ ಓಲೆಯ ಉಲ್ಲೇಖಗಳು ಬರುತ್ತವೆ.

*ಆನೆ ಮ್ಯಾಲೆ ಬಂದಾವಲ್ಲೋ*
*ಆರುಸಾವಿರ ಕಾಜಗ।ಸುವ್ವಿಬ್ಬನಾರಿ*
*ಆರು ಸಾವಿರ ಕಾಜಗ ಬಂದು*
*ಅವನರಮನೇಲಿ ತಂಗವೆ*
*ಒಂಟಿಮ್ಯಾಲ ಬಂದಾವಲ್ಲೋ ಎಂಟು ಸಾವಿರ ಕಾಜಗ*
*ಎಂಟು ಸಾವಿರ ಕಾಜಗ ಬಂದಿ*
*ಅವರ ಮಂಟಪದಲ್ಲಿ ತಂಗವೆ*
*ಮಂಚದ ಮ್ಯಾಲ ಕೂತ ರಂಗಯ್ಯ*
*ಓದಿನೋಡಿದ ಕಾಜಗನ*
*ಓದಿನೋಡಿದ ರಂಗಯ್ಯನೋರ್ಗೆ*
*ಕಣ್ಣೇಲಿ ನೀರು ಕಡುದಾವೋ*
*(ಪುಟ ೯೬-೯೭; ೧೯೭೩)*

ಕಾಗದವನ್ನು ಆನೆ ಹಾಗೂ ಒಂಟೆಮೇಲೆ ಹೇರಿಕೊಂಡು ಬರುವ ಸಂಗತಿಯೇ ಬಹಳ ಕುತೂಹಲದಾಯಕವಾದದ್ದು. ತಾಳೆಗರಿ ಹೇರಿಕೊಂಡು ಬರುವ ಉಲ್ಲೇಖಗಳು ಜಾನಪದ ಹಾಡುಗಳಲ್ಲಿ ಸಿಗುವುದೇ ಇಲ್ಲವೆಂದರೂ ಆದೀತು. ಕಾರಣ ಅದು ಸ್ಥಳೀಯವಾಗಿ ಸಿಗುವ ಮೂಲಸಾಮಗ್ರಿಯಾಗಿತ್ತು. ಪೂರ್ವಕಾಲದಿಂದಲೂ ದಕ್ಷಿಣ ಭಾರತ, ಅದರಲ್ಲೂ ಕರ್ನಾಟಕ ತಾಳೆಗರಿಗಳು ಯಥೇಚ್ಛವಾಗಿ ಸಿಗುವ ರಾಜ್ಯ ವಾಗಿತ್ತು. ಕಾಗದ ಭಾರತಕ್ಕೆ ಹೊರಗಿನಿಂದ ಬಂದಿತು. ಅದೂ ಈಶಾನ್ಯ ಭಾರತದಿಂದ. ಆನೆ ಹಾಗೂ ಒಂಟೆಯ ಬಳಕೆ, ಕಾಗದದ ಆಗಮನ, ಇವೆಲ್ಲ ಒಂದು ಚಾರಿತ್ರಿಕ ಸಂಕಥನವನ್ನು ಕಟ್ಟಿ ಬೆಳೆಸುತ್ತವೆ.

ಕಾಗದ ಆಮದು ಮೊಗಲರಿಂದ ಮೊದಲಾಯಿತು. ಕಾಗದದ ಪರಿಚಯವಾದುದೇ ಈ ಯುಗದಲ್ಲಿ ಎಂಬುದು ಗಮನಾರ್ಹ. ಜಾನಪದ ಸಂಸ್ಕೃತಿ ವಿಶಿಷ್ಟ ಎನಿಸುವುದೇ ಇಂಥ ಅಪರೂಪದ ನೆನಪುಗಳ ಬುತ್ತಿಯಿಂದಾಗಿ. ಯಾವುದೇ

ಸಂಗತಿಗಳನ್ನು ಬರೀ ವಸ್ತುವಾಗಿ ಪರಿಗಣಿಸದೆ ಒಂದು ಚಾರಿತ್ರಿಕ ಸಂಗತಿಯನ್ನಾಗಿ ಪರಿಭಾವಿಸುತ್ತದೆ. ಕಾಗದದ ಆಗಮನದ ರೀತಿ, ಅದನ್ನು ಓದುವ ರಂಗಯ್ಯನ ಕಲ್ಪನೆ ತುಂಬ ಅರ್ಥಗರ್ಭಿತವಾದುವು. ರಂಗಯ್ಯ ಆರು ತಿಂಗಳ ಮಗುವಾಗಿದ್ದಾಗ ಮೂರು ತಿಂಗಳ ಜಾಗಾಲೆ ಯನ್ನು ಮಾಡಿರುತ್ತಾರೆ. ದಂಡಿಗೆ ಹೋಗಲು ಹಾಳು ದಾಳಿಂಬೆ ಕೋಟೆಯ ಅವರ ಸೋದರ ಮಾವಂದಿರು ಓಲೆ ಕಳಿಸುತ್ತಾರೆ. ಈ ಪತ್ರವನ್ನು ಓದಿದ ರಂಗಯ್ಯನಿಗೆ ಕಣ್ಣಲ್ಲಿ ನೀರು ಬರುತ್ತದೆ.

ಮೇಲ್ಕಾಣಿಸಿದ ಲಾವಣಿಯ ಒಟ್ಟು ಚೌಕಟ್ಟು ಸಂಸ್ಕೃತಿ ಅಧ್ಯಯನದ ದೃಷ್ಟಿಯಿಂದ ಮಹತ್ವವಾದುದು. ಲಿಖಿತ ಆಕರ ಗಳಿಂದಲೇ ಚರಿತ್ರೆಯನ್ನು ಕಟ್ಟಿಕೊಳ್ಳುವ ತಲಬಿರುವ ಸಮಾಜ ದಲ್ಲಿ ಇಂಥ ಸಂಗತಿಗಳು ಚರಿತ್ರೆಯ ಹೊಸವ್ಯಾಖ್ಯಾನಗಳಿಗೆ ಪ್ರೇರಣೆ ನೀಡುತ್ತವೆ. ಇಲ್ಲಿನ ಸೂಕ್ಷ್ಮತೆ ಗಮನಾರ್ಹವಾದುದು.

ಜಾನಪದ ಹಾಡುಗಳಲ್ಲಿ ಇನ್ನೊಂದು ಪ್ರವೃತ್ತಿ ಎದ್ದು ಕಾಣುತ್ತದೆ. ಅದೆಂದರೆ ಮೌಖಿಕವಾದ ಹಾಡುಗಾರಿಕೆಯೂ ಕೂಡ ಲಿಖಿತ ಪರಂಪರೆಯನ್ನು ಅವಲಂಬಿಸುವ ಲಕ್ಷಣ.

ಹತ್ತು ಮಾರುದ್ದದ ಹೊತ್ತಿಗೆ ತಗುದು
ಎತ್ತೀರೆ ಇದರ ಮೊದಲಿಂದ
ಆರು ಮಾರುದ್ದದ ವಾಲೀಯ ತಕ್ಕಂಡು ಓದಿರೆ
ಇದರ ಮೊದಲಿಂದ
ವಾಲಿ ನನ್ನ ಕಿವಿಯ ಸರಸ್ವತಿ ತಾಯಿ ನೀನು ಬರದೆನ್ನ
ಪದವ ಬರಕೊಡಿರಿ
ಪತ್ತಾರ ಮನಿಯಾಗ ಹೊತ್ತಿಗಿಯೊಳಗಿರುವ ತಪ್ಪು
ನನಕಿವಿಯ ಸರಸ್ವತಿ
ತಾಯಿ ನೀನು ತಪ್ಪೀದ ಪದವ ಬರಕೊಡ
ತಪ್ಪೀದ ನನ ಪದವ ಹೊತ್ತಿಗಿಯೊಳಗಾಗಿ
ಹೊತ್ತಿಗೆಯ ತಂದು ಕೊಡುವೋ ಬೆನಕಣ್ಣ
ಚಿತ್ತುಳ್ಳ ಅಕ್ಕಯಗೆ ಪದವ ಬರಕೊಡೋ

ಇಷ್ಟೇ ಅಲ್ಲದೆ 'ಯಾಕ ಹಾಡತಿ ಅಡಮುಟ್ಟ ಹಾಡ ತರ್ಕಶಾಸ್ತ್ರದಾಗ ನೀ ಕಲಿತಿಲ್ಲ', 'ಮುತ್ತಿನಂಥ ಮಾತೊಂದು ಹೊತ್ತಿಗಿ ತಗದ ಹೇಳತೀನಿ ಪಟಿಂಗರ ಗೆಳೆತನ ಮಾಡಬಾರ್ದು', 'ಮೂಢ ನೀ ಹಾಡಿ ಕೆಡಬೇಡ। ನೋಡ ನೀನು ಹುಡಕ್ಯಾಡ ಗ್ರಂಥ।', 'ಯಲ್ಲವ್ವ ರಂಡಿ ಆದರ ಬಸವ್ಯಾಕ ಬಳಿ ಒಡಿತಾಳ, ಅಕಿಗಿ ಇಕಿಗಿ ಯಾತರ ಸಂಗತಿ, ಆಕಿ ರೆಂಡಿ ಯಾದರ ಇಕಿದೇನು ಹೋಗತದ, ಯಾವ ಶಾಸ್ತ್ರದಾಗ ಬರದೈತಿ' – ಇತ್ಯಾದಿ ಸಾಲುಗಳು ಲಿಖಿತ ಮೂಲವನ್ನು ಅವಲಂಬಿಸಿ ತನ್ನ ವಿದ್ವತ್ತನ್ನು ಅಧಿಕೃತಗೊಳಿಸಿಕೊಳ್ಳುವ ಸಂಗತಿಗಳನ್ನು ಮನಸ್ಸಿಗೆ ತರುತ್ತವೆ.

'ತಪ್ಪು ನನ ಕಿವಿಯ ಸರಸ್ವತಿ ತಾಯಿ ತಪ್ಪೀದ ಪದವ ಬರಕೋಡ' ಎನ್ನುವ ಮಾತೇ ಬರವಣಿಗೆಯನ್ನು ಲೌಕಿಕ ಗೊಳಿಸುತ್ತದೆ. ಸರಸ್ವತಿ ದೇವತೆಯಾಗಿದ್ದರೂ ಅವಳಿಂದ ಅಕ್ಷರವನ್ನು ಬರೆಸಿಕೊಳ್ಳುವ, ಕಲಿತುಕೊಳ್ಳುವ ಕ್ರಿಯೆಯೇ ಬರವಣಿಗೆಯ ಅಲೌಕಿಕ ಆವರಣವನ್ನು ಘಾಸಿಗೊಳಿಸುತ್ತದೆ. ಜಾನಪದ ಸಂಸ್ಕೃತಿಗೆ ಅಮೂರ್ತ ಹಾಗೂ ಅಲೌಕಿಕ ಕಾಣ್ಕೆ ಬಹಳ ಮುಖ್ಯ. ಅದಕ್ಕೆ ಎಲ್ಲವನ್ನು ಮನುಷ್ಯೀಕರಿಸುವ ಪ್ರಯತ್ನ ಮಾಡುತ್ತದೆ. ಇಂಥ ಕಾಗದದ ಅನುಭವ ಹಾಗೂ ಅರಿವಿನಿಂದ ಹುಟ್ಟಿದ ಜಾನಪದ ಹಾಡಿನ ಸಂಸ್ಕೃತಿ ಗ್ರಂಥಾಧಾರಿತ ಚಿಂತನ ಕ್ರಮಗಳನ್ನು ಅಧಿಕೃತವೆಂದು ತಿಳಿಯುವ ಬಗೆ ವಿಸ್ಮಯ ಹುಟ್ಟಿಸುತ್ತದೆ.

ಹಾಡಿನಿಂದ ಬರಹಕ್ಕೆ ಬರಹದಿಂದ ಹಾಡಿಗೆ ಪಲ್ಲಟ ಗೊಳ್ಳುವ ಸ್ಥಿತಿ ಮೌಖಿಕವಾಗಿ ಮೈದಳೆದದ್ದನ್ನು ಲಿಖಿತ ಗೊಳಿಸುವ, ಲಿಖಿತಗೊಂಡದ್ದನ್ನು ಆಧರಿಸಿ ಮತ್ತೆ ಮೌಖಿಕ ಪಾತಳಿಗೆ ತರುವ ಇಲ್ಲಿನ ಕ್ರಿಯೆಗಳು ಅಧ್ಯಯನಯೋಗ್ಯ ವಾದಂಥವು. ಆ ಕಾಲದಲ್ಲಿ ಅಕ್ಷರಸ್ಥರಾಗಿದ್ದ ಬ್ರಾಹ್ಮಣರು ಹಾಗೂ ಪತ್ತಾರರು (ವಿಶ್ವಬ್ರಾಹ್ಮಣರು) ಹಳ್ಳಿಗಳಲ್ಲಿ ಓದು ಬರಹ ಬಲ್ಲವರೆಂದರೆ ಇವರೇ. ಅಕ್ಷರ ಬಲ್ಲವರಾದ ಇವರಲ್ಲಿ ಇರುವ ಹೊತ್ತಿಗೆಗಳು ಆ ಊರಿನ ಪ್ರಮಾಣ ಗ್ರಂಥಗಳಾಗಿದ್ದವು.

ಮಾತು ಬರಹಗಳು ಇಲ್ಲಿನ ಹೊಂದಾಣಿಕೆಗಳು ಹಲವು ರೀತಿಯ ಪ್ರಶ್ನೆಗಳನ್ನು ಹಾಗೂ ಉತ್ತರಗಳನ್ನು ಗರ್ಭೀಕರಿಸಿಕೊಂಡಿವೆ. ತನ್ನ ಅನುಭವ ಹಾಗೂ ನೆನಪಿನ ಮೇಲೆ ಕ್ರಿಯಾಶೀಲಗೊಳ್ಳುವ ಜಾನಪದ ಕಥಾನಕಗಳಿಗೆ ಮೂಲವಾಗಿ ಅಧಿಕೃತ ಆಕರವೊಂದಿದೆ. ಅದು ಅಕ್ಷರ ಬಲ್ಲ ಹಾರುವರ ಹಾಗೂ ಪತ್ತಾರರ ಮನೆಯಲ್ಲಿದೆ ಎನ್ನುವ ನಂಬಿಕೆ ಎಲ್ಲ ಹಾಡುಗಳಲ್ಲಿ ಸಾಮಾನ್ಯವಾಗಿ ಕಾಣುತ್ತದೆ. ಇದು ಪಠ್ಯವೊಂದರ ಅಧಿಕೃತತೆಯನ್ನು ಮಾನ್ಯಮಾಡುವ ಕ್ರಮವೇ ಆಗಿದೆ. 'ಓದಿನೋಡು ದೇವಿಪುರಾಣ ಅಕಿಲಿಂದ ಆಗೈತಿ ಸೃಷ್ಟಿ ನಿರ್ಮಾಣ' ಎನ್ನುವ ಹಲವಾರು ಉಲ್ಲೇಖಗಳು ನಾಲಿಗೆಗಿಂತ ಲಿಖಿತ ಸ್ವರೂಪಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ನೀಡುತ್ತವೆ. ಲಿಖಿತ ಪಠ್ಯವನ್ನು ಶ್ರವಣ ಪರಂಪರೆಯ ನಡುವಿನ ಕೊಂಡಿಯೆಂದು ಲಿಖಿತ ಕಾವ್ಯ ಪರಂಪರೆ ತಿಳಿದಂತಿದೆ. ತಾನು ಹಾಡುವ ಕೇಳುವ, ಕಥನಕ್ಕೆ ಲಿಖಿತ ಆಕರವೊಂದು ಇದೆಯೆಂದು ಮೌಖಿಕ ಕಾವ್ಯಪರಂಪರೆ ಪೂರ್ವಕಲ್ಪಿತವಾಗಿಯೇ ಪರಿಭಾವಿಸಿ ಕೊಂಡಿದೆ. ಇದು ಬರೀ ಮೌಖಿಕ ಪರಂಪರೆಯ ಮಾತಾಗದೆ ಇಂಥ ಹಾಡಿನ ಕ್ರಿಯೆಗಳು ಪ್ರಚಲಿತವಿದ್ದ ಅವು ಮೂಲವೊಂದಕ್ಕೆ ಅಧೀನವಾಗಿದ್ದ ಸಮಾಜ ವೊಂದರ ನೈಜ ಚಿತ್ರಣವೇ ಇದಾಗಿದೆ. ಒಟ್ಟಿನಲ್ಲಿ ಮೌಖಿಕ ಸಂಸ್ಕೃತಿ ಎಂಬುದು ಒಂದು ಪ್ರದೇಶದಲ್ಲಿ ವಾಸಮಾಡುವ ಸಮುದಾಯಗಳ ಸಮಗ್ರ ನಡವಳಿಕೆಗಳನ್ನು ರೂಪಿಸುವ ಕ್ರಿಯೆಯಾಗಿರುವ ಕಾರಣ ಆ ಮೂಲಕ ಪ್ರಕಟವಾಗುವ ಆಕೃತಿಗಳ ಮೂಲಕವೇ ಅದರ ಜ್ಞಾನಮೂಲಗಳನ್ನು ಶೋಧಿಸಬೇಕಾಗುತ್ತದೆ. ಆಗ ರೂಢಿಗತವಾದ ಅಧ್ಯಯನದ ವೈಧಾನಿಕತೆ ಹಾಗೂ ಪರಿಭಾಷೆಗಳಿಗಿಂತ ಭಿನ್ನವಾದ ಪರಿಕಲ್ಪನೆಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ.

ಮೌಖಿಕ ಹಾಗೂ ಲಿಖಿತ ಆಕರಗಳ ಹಾಗೂ ಅವುಗಳನ್ನು ಕುರಿತು ನಡೆದ ಅಧ್ಯಯನಗಳಲ್ಲಿ ಒಡೆದು ಕಾಣುವ ಸಂಗತಿಗಳೆಂದರೆ ಜನಪದ ಜೀವನದರ್ಶನ ಗಳನ್ನು 'ಭಾರತೀಯ ಸಂಸ್ಕೃತಿ' ಎನ್ನುವ ಪರಿಕಲ್ಪನೆ ಯೊಳಗಿಟ್ಟು ವಾಖ್ಯಾನಿಸಿದ್ದು, ಇಲ್ಲವೆ ಸಮಾಜ ಸ್ವೀಕರಿಸಿದ ದರ್ಶನಗಳೊಂದಿಗೆ ಘರ್ಷಣೆ ನಡೆಸಿದ ರೀತಿಯನ್ನು ಪತ್ತೆ ಮಾಡುತ್ತ ಹೋಗುವುದು. ಜನಪದ ಹಾಗೂ ಶಿಷ್ಟ ಸಂಸ್ಕೃತಿಗಳು ಎರಡು ಬೇರೆಬೇರೆ ಎನ್ನುವ ಚರ್ಚೆಗಳು ನಡೆದರೂ ಪರಿಕಲ್ಪನಾತ್ಮಕವಾಗಿ ನಡೆದ ವ್ಯಾಖ್ಯಾನಗಳು ಇಂಥ ವ್ಯತ್ಯಾಸವನ್ನು ಸಮಾಗಮ ಗೊಳಿಸಿದಂತೆ ತೋರುತ್ತದೆ. ಮೌಖಿಕ ಸಂಪ್ರದಾಯವೂ ಮೂಲವಾಗಿ ನಂಬಿಕೆಯುಕ್ತ ಬದುಕನ್ನು ನಿರ್ಮಿಸುತ್ತ ಬಂದರೆ ಇನ್ನೊಂದೆಡೆ ಅಕ್ಷರ ಪ್ರಧಾನ ಸಂಸ್ಕೃತಿಯು ಅಷ್ಟೇ ಪ್ರಬಲವಾದ ಸಂಪ್ರದಾಯವನ್ನು ರೂಪಿಸುತ್ತ ಬಂದಿದೆ. ಮೌಖಿಕ ರೂಪಿ ಸಂಸ್ಕೃತಿಯು ಆಚರಣೆ ಹಾಗೂ ನಂಬಿಕೆ ಪ್ರಧಾನವಾದುದಾದರೆ ಬರಹ ಸಂಸ್ಕೃತಿ ಅಧಿಕಾರ ಹಾಗೂ ಆಧಾರ (ಸಾಕ್ಷಿ) ಸ್ವರೂಪಿಯಾದುದಾಗಿದೆ. ನಂಬಿಕೆಯಲ್ಲಿ ಕ್ಷಮಾಗುಣವಿದ್ದರೆ ಸಾಕ್ಷಿಯಲ್ಲಿ ಶಿಕ್ಷಾಗುಣವಿರುವಂತಿದೆ. ಇಂಥ ಬಾಯಿಮಾತಿನ ಸ್ವರೂಪಿಯಾದ ಸಂಪ್ರದಾಯ ದೊಳಕ್ಕೆ ಸಾಕ್ಷಿ ಪ್ರಜ್ಞೆಯಿರುವ ನೆಲೆಗಳು ಸೇರಿಕೊಂಡಿರುವುದು ಕುತೂಹಲಕರವಾದಂಥದ್ದು. ವಿಶೇಷವಾಗಿ ಸಾರ್ವಜನಿಕ ಪ್ರದರ್ಶನ ರೂಪಿಯಾದ ಸವಾಲು ಜವಾಬು ರೂಪದ ಕಲೆಗಳಲ್ಲಿ ಪ್ರಭುತ್ವದ ಅಧೀನಕ್ಕೊಳಪಟ್ಟು ನಡೆಯುವ ಕ್ರಿಯಾತ್ಮಕ ನೆಲೆಗಳಲ್ಲಿ ಲಿಖಿತ ಮೂಲವಾದ ಬಾಹ್ಯಸಾಕ್ಷಿ ಗಳಿಗೆ ಹೆಚ್ಚು ಮಹತ್ವವಿದೆ. ವಿಶೇಷವಾಗಿ ಕೌಟುಂಬಿಕ ಹಾಗೂ ಸಾಮುದಾಯಿಕ ಮಟ್ಟದಲ್ಲಿ ನಡೆಯುವ ಸ್ತ್ರೀಪ್ರಧಾನ ಆಚರಣೆ ಹಾಗೂ ಹಾಡುಗಳಲ್ಲಿ ಲಿಖಿತ ಸಾಕ್ಷಿಗಳಿಗೆ ಅಂಥ ಮಹತ್ವವಿಲ್ಲ ಎನ್ನುವುದು ಗಮನಾರ್ಹ. ಇಂದಿನ ಕೌಟುಂಬಿಕ ಚಿತ್ರಣಗಳನ್ನು ಗಮನಿಸಿದಾಗಲೂ ತಾಯಿ ಮಕ್ಕಳ ವಿಷಯದಲ್ಲಿ ಹೆಚ್ಚು ನಂಬಿಕೆ ಇರುವಂಥವಳು ಹಾಗೂ ಕ್ಷಮಾಶೀಲೆಯಾದರೆ ತಂದೆ ಅಧಿಕಾರ, ಅಧಿಕೃತತೆ ಹಾಗೂ ಶಿಕ್ಷೆಯತ್ತ ಒಲವು ತೋರುವುದು ಸಮಾನ್ಯ. ಮಾತೃ ಹಾಗೂ ಪಿತೃಪ್ರಧಾನವಾದ ಈ ಎರಡೂ ಮಾರ್ಗಗಳ ಮಧ್ಯ ವಿರೋಧವಿರುವಂತೆ ಅನೇಕ ಹೊಕ್ಕು ಬಳಕೆಗಳು, ಸಂಕರಗಳು ಸಮನ್ವಯಗಳು ನಡೆದದ್ದೂ ಇದೆ. ಈ ಮಾತನ್ನು ನಮಗೆ ಲಭ್ಯವಾಗುವ ಅನೇಕ ಮೌಖಿಕ ಆಕೃತಿಗಳು ಸಾಬೀತುಪಡಿಸುತ್ತವೆ. ಈ ಬಗೆಯ ಅನುಸಂಧಾನ ಹಾಗೂ ಅಂತಃಕಲಹದ ಹೊರತಾಗಿಯೂ ಈ ಎರಡೂ ಪರಂಪರೆಗಳು ತಮ್ಮ ಅನನ್ಯತೆಯನ್ನು ಉಳಿಸಿಕೊಂಡು ಬಂದಿವೆ. ಆದರೂ ಇಂದಿನ ದಿನಗಳಲ್ಲಿ ಮೌಖಿಕತೆಗಿಂತ ಹೆಚ್ಚು ಲಿಖಿತ ಪರಂಪರೆಗೆ ಹೆಚ್ಚು ಸಾಮಾಜಿಕ ಅನನ್ಯತೆ ಇರುವುದು ಸುಳ್ಳಲ್ಲ. ಮಾತೃ ಹಾಗೂ ಪಿತೃಪ್ರಧಾನ ಎನ್ನುವ ಪರಿಕಲ್ಪನೆಗಳಲ್ಲಿ ಭಿನ್ನತೆಯಿದ್ದಂತೆ ಮೌಖಿಕ ಪರಂಪರೆ ಯೊಳಗೆ ಕೃಷಿಮೂಲ ಹಾಗೂ ಕೃಷಿಪೂರಕ ಹಾಗೂ ಕೃಷಿ ಯೇತರ ಸ್ಥಿರ ಹಾಗೂ ಚರಸ್ವರೂಪಿ ಸಮುದಾಯಗಳಲ್ಲಿಯೇ ಹಲವು ರೀತಿಯ ಭಿನ್ನತೆಗಳಿರುವುದು ಗಮನಾರ್ಹ. ಹೀಗೆ ಮೌಖಿಕ ಹಾಗೂ ಲಿಖಿತರೂಪಿ ಸಂಕೇತಗಳನ್ನು ಈ ಕನ್ನಡ ಸಂಸ್ಕೃತಿಗಳು ಪರಿಭಾವಿಸಿದ ರೀತಿ ಕುರಿತು ಚರ್ಚಿಸುವುದು ಈ ಲೇಖನದ ಮುಖ್ಯ ಉದ್ದೇಶವಾಗಿದೆ.



**ಡಾ॥ ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಸುಮ್ನಿರೋದೊಂದ್ರೆ ಸುಮ್ನೆನ?

"ಸುಮ್ನಿರೋಕೆ ಏನ್ ತಗೊಳ್ತಿ?"

ಕೀಟಲೆ ಹೈಕಳಿಗೆ ಮನೆಯ ಹಿರಿಯರು ಹಾಗೆ ತಾಕೀತು ಮಾಡುವುದನ್ನು ನೀವು ಗಮನಿಸಿಯೆ ಇರುತ್ತೀರಿ. ಹುಡುಗರ ಮಾತಿರಲಿ ವಯಸ್ಕರಿಗೂ ಸುಮ್ಮನಿರುವುದು ಬಲು ತ್ರಾಸವೆ. ಏನಾದರೂ ಮಾಡು, ಸುಮ್ಮನಂತೂ ಇರಬೇಡ ತಮ್ಮಾ ಎನ್ನುವ ಬುದ್ಧಿವಾದವನ್ನು ಅವರು ಪಾಲಿಸುತ್ತಾರೆ. ಆದರೆ ಅದರ ಪರಿ ಭಿನ್ನ, ವೈವಿಧ್ಯಮಯ. ನಿನ್ನೆ ಶಹರಿನಲ್ಲಿ ಚಾಪೆ ಮಾರಾಟಗಾರ ಗಿರಾಕಿಯೊಬ್ಬನಿಗೆ ಹೇಳುತ್ತಿದ್ದ: "ಐನಾತಿ ಮಾಲಿದು. ಶಾನೆ ದಿನ ಬಾಳಿಕೆ ಬತ್ತದೆ. ಆದ್ರೆ ಕೈ ಕೆಲಸ ಮಾಡ್ಬಾರ್ದು ಮಾತ್ರ..." ಕೈ ಕೆಲಸ ಅಂದರೆ ಚಾಪೆಯ ಮೇಲೆ ಕೂತು ಅದರ ಒಂದೊಂದೆ ಕಡ್ಡಿ ಮುರಿಯುವುದು, ದಾರ ಸಡಿಲಿಸುವುದು. ನೆನಪಾಗುತ್ತದೆ. ನಾನು ಮೈಸೂರಿನ ಬನುಮಯ್ಯ ಪ್ರೌಢಶಾಲೆ ವಿದ್ಯಾರ್ಥಿಯಾಗಿದ್ದಾಗ ನಮ್ಮ ಗಣಿತ ಮಾಸ್ತರರಾಗಿದ್ದ ಶ್ರೀ ಎಂ. ಎನ್. ತಿರುಮಲಾಚಾರ್ "ನೋಡಿ, ಜ್ಯಾಮೆಟ್ರಿ ಪೆಟ್ಟಿಗೆ ಜೋಪಾನವಾಗಿಟ್ಕೊಳ್ಳಿ. ಸ್ಕೇಲ್ ಬರ್‍ತಾಬರ್‍ತಾ ತಿನ್ನೋರೂ ಉಂಟು, ಅದಕ್ಕೇ ಹೇಳಿದ್ದು" ಎನ್ನುತ್ತಿದ್ದರು ಆಗಾಗ. ನಮ್ಮ ತರಗತಿಯಲ್ಲಿ ಉಗುರು ಕಚ್ಚುವವರು (ಅವರದೆ!), ತಲೆಕೂದಲು ಕೀಳುವವರು, ಡೆಸ್ಕನ್ನು ಕಂಡೂಕಾಣದಂತೆ ಜೋಕಾಲಿಯಾಡಿಸುವವರು, ಅಕ್ಕಪಕ್ಕದವರಿಗೆ ಶಾಯಿ ಸಿಂಪಡಿಸುವವರು, ನೋಟ್‌ಬುಕ್ಕನ್ನು ಬೀಸಣಿಗೆ ಮಾಡಿಕೊಂಡು ಗಾಳಿ ಹಾಕಿಕೊಳ್ಳುವವರು, ಸಾಕುಪ್ರಾಣಿಗಳ ಧ್ವನಿ ಅನುಕರಿಸುವವರು ಗಣನೀಯ ಸಂಖ್ಯೆಯಲ್ಲೇ ಇದ್ದರು. ಮಾಸ್ತರರು ಹೆಡ್‌ಮಾಸ್ತರರಲ್ಲಿ ದೂರು ಹೇಳಿಕೊಂಡರೆ "ಅಯ್ಯೊ, ನೀವು ಸುಮ್ನಿದ್ಬುಡಿ. ಅದೇ ಉಪಾಯ. ಏಕೆ ಅಂದ್ರೆ ಹುಡುಗರು ಆ ಚಟ ಬಿಟ್ರೆ ಕ್ಲಾಸ್ನಲ್ಲಿ ಗಲಾಟೆ ಜಾಸ್ತಿನೇ ಮಾಡ್ತಾರೆಯೆ ಹೊರತು ಮತ್ತೇನೂ ಪ್ರಯೋಜನವಿಲ್ಲ" ಅಂತ ಹೆಚ್. ಎಂ. ಪ್ರತಿಕ್ರಿಯಿಸುತ್ತಿದ್ದರು. ನಿಜವೆ, ಒಂದು ದುರಭ್ಯಾಸ ಬಿಡಿಸಿದರೆ ಆ ಜಾಗ ಎಲ್ಲಿ ಖಾಲಿಯಿರುತ್ತೆ? ಇನ್ನೊಂದು ವಕ್ಕರಿಸಿಯೆ ತೀರುತ್ತೆ. ನನ್ನ ಅಣ್ಣನ ಮಗ ಶೀನ ಒಂಭತ್ತರ ಪೋರ. ಸುಮ್ಮನಿರಲಾರ. ತಾತನ ನಸ್ಯದ ಡಬ್ಬಿಯನ್ನು ಅಪಹರಿಸಿ ಅದನ್ನು ಚೆಂಡಿನಂತೆ ಗೋಡೆಯತ್ತ ಬೌಲ್ ಮಾಡುತ್ತಾನೆ. ನಸ್ಯದ ವರ್ಷ ಮನೆಯಲ್ಲಿ. ಸೊಳ್ಳೆ ಕೊಂಚ ಕಡಿಮೆಯಾಗಿರಬಹುದೆಂಬ ನಿಮ್ಮ ಅಂದಾಜು ಸ್ವಲ್ಪಮಟ್ಟಿಗೆ ಸರಿಯೆ!



ದೊಡ್ಡವರು ಏನಾದರೊಂದು ವಿಷಯವನ್ನು ಸದಾ ಗ್ರಾಸವಾಗಿಸಿಕೊಳ್ಳುತ್ತಾರೆ ಚರ್ಚೆಗೆ, ಹರಟೆಗೆ. ಏನೋ ಇದ್ದೇ ಇರ್ಬೇಕು ಹೇಳಿ... ಪರವಾಗಿಲ್ಲ ಹೇಳಿ ಅಂತ ಅವರಿವರನ್ನು ಮಾತಿಗೆಳೆಯುತ್ತಾರೆ. ಅಂದಹಾಗೆ ಸುಮ್ಮನಿರುವುದೆಂದರೆ ಬಾಯಿಗೆ ಅಲರ್ಜಿ. ಬಸ್ಸು, ರೈಲು, ವ್ಯಾನು ಮುಂತಾದ ಸಾರ್ವಜನಿಕ ವಾಹನಗಳಲ್ಲಿ ಪ್ರಯಾಣಿಸುವವರು ಕೇಳಬೇಕೆ? ಒಂದು ಕಾಲದಲ್ಲಿ ಅಂದರೆ ಎರಡು ಅಥವಾ ಎರಡೂವರೆ ದಶಕಗಳ ಹಿಂದೆ ಸಿಗರೇಟು, ಬೀಡಿ, ಚುಟ್ಟಾ ಹಿಡಿದಿರುತ್ತಿತ್ತು ಅದು. ಈಗ ಅದು ಹತೋಟಿಗೆ ಬಂದಿತೆಂದು ನಿಟ್ಟುಸಿರು ಬಿಡುವುದರಲ್ಲೇ ಹಿಡಿಯಿತದು ಮೊಬೈಲ್ ಎನ್ನುವ ಮಾರಿಯನ್ನು. ಹಲೋ... ಹಲೋ... ಈಗಂತು ಎಲ್ಲೆಲ್ಲೂ. ಪರರ ಏಕಾಂತದ ಅಪಹರಣ ಅವ್ಯಾಹತ. ಟೆಲಿಫೋನ್ ಕಂಡುಹಿಡಿದ ಗ್ರಹಾಂ ಬೆಲ್ ಕುರಿತು "ಅಯ್ಯಾ, ಯಾಕಾದರೂ ಬೇಕಿತ್ತಪ್ಪ ನಮಗೆ ಫೋನ್" ಅಂತ ಪ್ರಲಾಪಿಸುವಂತಹ ಸ್ಥಿತಿಗತಿ ಒದಗಿದೆ. ಏನು ಬಂದಿರಿ ಅಂದರೆ ಸುಮ್ಮನೆ ಬಂದೆ ಅನ್ನುವವರಿಗೆ ಅಪರೂಪವೆ? ಸುಮ್ಮನೆ ಎನ್ನುವುದು ನಮ್ಮ ನಿತ್ಯಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತುಹೋಗಿದೆ. ಹೋಟೆಲ್ಲಿನಲ್ಲಿ ಗೆಳೆಯರು ಕಾಣಿಸಿಕೊಂಡಾಗಲೂ ಅದೇ ಉತ್ತರವೆ. ಯಾರಾದರೂ ಹಾಗೆ ಹೋಟೆಲ್ಲಿಗೆ ಬರುತ್ತಾರೆಯೆ? ಏನನ್ನಾದರೂ ತಿನ್ನಲು, ಕುಡಿಯಲು ತಾನೆ? ಈ 'ಸುಮ್ಮನೆ' ತಂತ್ರ ಪ್ರೇಮಿಗಳಿಗೆ ಬಹು ನೆರವಾಗುತ್ತದೆ. ಪ್ರಿಯೆ (ಪ್ರಿಯ) ಕಾಣುವ ಸಲುವಾಗಿಯೆ ಗ್ರಂಥಾಲಯಕ್ಕೊ, ಶಾಪಿಂಗಿಗೊ, ಬಸ್ ನಿಲ್ದಾಣಕ್ಕೊ ಪ್ರಿಯ (ಪ್ರಿಯೆ) ಬಂದಿದ್ದರೂ ಅದು 'ಸುಮ್ಮನೆ' ಆಗಿರುತ್ತದೆ! ನನಗೆ ಹಾಡಲು ಬರೊಲ್ಲ, ಸುಮ್ಮನೆ ಹಾಡ್ತೀನಿ ಅಷ್ಟೆ ಎನ್ನುವ ಗಾನಪಟುಗಳೂ ಇರುತ್ತಾರೆ. ಅಂಥವರು ಸುಮ್ಮನೆ ಕೇಳುಗರ ಸಹನೆಯನ್ನು ಪರೀಕ್ಷಿಸುತ್ತಾರೆ. ಇದೇ ನಮೂನೆಯಲ್ಲಿ ನಂಗೆ ಮೈಸೂರು ಪಾಕ್ ಮಾಡೋದು ಖಂಡಿತ ಬರೋಲ್ಲ... ಸುಮ್ನೆ ಪಾಕ ಇಳಿಸಿದೆ ಮಾತ್ರ ಎಂದು ಉದ್ಗರಿಸುವವರು ಎಂತಹ ಶಿಕ್ಷೆ ನೀಡಬಹುದು – ತಿನಿಸು ಪ್ರಿಯರಿಗೆ: ನಿಮ್ಮ ಊಹೆಗೆ ಬಿಟ್ಟಿದ್ದು. ಸಂಗೀತ ಕಚೇರಿಗಳಲ್ಲಿ ಸುಮ್ಮನೆ ಕೂರಲಾಗದೆ ತಪ್ಪುತಪ್ಪಾಗಿ ತಾಳ ಹಾಕುವ ವರ್ಗವೂ ಇದೆ. ಅವರಿಂದ ಅಷ್ಟರಮಟ್ಟಿಗೆ ಉಪದ್ರವವನ್ನು ಹಾಡಲೆಂದು ಉತ್ಸಾಹದಿಂದ ಬಂದಿರುವ ಗಾಯಕರು ಅನುಭವಿಸುತ್ತಾರಲ್ಲ! ಇದೆಂತಹ ದುರ್ದೈವ!

ಕನಕಲಕ್ಷ್ಮಜ್ಜಿ ಪಕ್ಕದ ಮನೆಯ ಔಟ್‌ಹೌಸ್‌ನಲ್ಲಿ ಒಂದೇ ಇದೆ. ಮಕ್ಕಳೆಲ್ಲ ವಿದೇಶಗಳಲ್ಲಿ ನೆಲೆಸಿದ್ದಾರೆ. ಅಜ್ಜಿ ನಮ್ಮ ಮನೆಗೆ ಆಗಾಗ ಬಂದು ಕುಶಲ ವಿಚಾರಿಸುತ್ತಿರುತ್ತದೆ. "ಅಪ್ಪ, ಮಿಕ್ಸಿ ರೆಡಿ ಮಾಡು. ನಾನು ಸುಮ್ನೆ ಒಂದಷ್ಟು ಚಟ್ನಿ ಮಾಡ್ಕೊಂಡು ಹೋಗ್ತೀನಿ" ಅನ್ನೋದು ಮಾಮೂಲು. ನಮ್ಮ ಆಫೀಸ್ ಸಹೋದ್ಯೋಗಿ ಸಂಪಂಗಿಯನ್ನು ನಾವೆಲ್ಲ ಮುತ್ತಿ ಸಿಹಿ, ಖಾರ, ಕಾಫಿ ಸೇವಾರ್ಥಕ್ಕಾಗಿ ಒತ್ತಾಯಿಸಿದೆವು. ಕಾರಣ ಆತ ಮನೆ ಕಟ್ಟಿಸುತ್ತಿದ್ದ. "ಮನೇನೂ ಇಲ್ಲ... ಎಂಥದ್ದು ಇಲ್ಲ ಸುಮ್ನೆ ಒಂದು ರೂಮು ಅಷ್ಟೆ, ಸೈಟು ಇದೆಯಲ್ಲ ಅಂತ" ಎಂದ. ನಾವೆಲ್ಲ ಒಕ್ಕೊರಲಿನಿಂದ "ಹೌದೌದು... ಸುಮ್ನೆ ಒಂದು ರೂಮು, ಒಂದು ಹಾಲ್, ಒಂದು ಅಡುಗೆಮನೆ, ಬಾತ್‌ರೂಮು, ಟಾಯ್ಲೆಟ್ಟು. ನೆಲಕ್ಕೆ ಸುಮ್ನೆ ಹಾಸುಬಿಲ್ಲೆ. ಹಾಗೇನೆ ಒಂದೇ ಒಂದು ಮಹಡಿ ಸುಮ್ನೆ" ಅಂತ ಕೆಣಕಿದೆವು. ಸಮೀಪದ ದರ್ಶಿನಿಗೆ ಸಂಪಂಗಿ ನಮ್ಮನ್ನು ಕರೆದೊಯ್ಯಲೇಬೇಕಾಯಿತು. ಯಾರನ್ನಾದರೂ ನಂಬೋಣ. ಮದುವೆ, ಮುಂಜಿ, ಗೃಹಪ್ರವೇಶ, ಪಾರ್ಟಿ ಏರ್ಪಾಡಾಗಿರುವ ತಾಣಗಳಲ್ಲಿ ಪಾಕಶಾಲೆಯಲ್ಲಿ ಸುಮ್ಮನೆ ಇರುವವರನ್ನು ಮಾತ್ರ ನಂಬಲಾಗದು! ಅವರು ಸುಮ್ಮನೆ ಭಕ್ಷ್ಯಗಳ, ಪರಮಾನ್ನಗಳ, ಸೀಕರಣೆಗಳ ರುಚಿ ನೋಡಿರಬಹುದು. ಕಾಫಿಯನ್ನಂತು ಸುಮ್ಮನೆ ಎರಡು ಮೂರು ಬಾರಿಯಾದರೂ ಸೇವಿಸಿರುತ್ತಾರೆ! ಇದಕ್ಕೆ ಅಲ್ಲಿನ ಬಗೆಬಗೆ ಐಟಂಗಳೇ ಸಾಕ್ಷಿಯೆನ್ನಬಹುದೆ?

ಬಿಂಡಿಗನವಿಲೆ ಭಗವಾನ್

ನಂ. ೩೬ ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್, ಬೆಂಗಳೂರು - ೫೬೦ ೦೫೦

# ಇರಾನಿನ ಮೇಲೆ ಹೆಚ್ಚಿದ ಆರ್ಥಿಕ ದಿಗ್ಬಂಧನ

ಇರಾನಿನ ಮೇಲೆ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಮೂಲಕ ಮತ್ತಷ್ಟು ಆರ್ಥಿಕ ದಿಗ್ಬಂಧನ ಹೇರಲಾಗಿದೆ. ಈ ರೀತಿಯ ದಿಗ್ಬಂಧನ ವಿಧಿಸುತ್ತಿರುವುದು ನಾಲ್ಕನೆಯ ಸಲ. ಇರಾನ್ ಎಸಗಿರುವ ಅಪರಾಧವಾದರೂ ಏನು? ಅದು ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯ ಕಾರ್ಯಕ್ರಮ ಹೊಂದಿದೆ ಎಂಬ ಗುಮಾನಿ. ಇದು ನಿನ್ನೆ ಮೊನ್ನೆಯ ವಿಷಯವಲ್ಲ, ಕೆಲವು ವರ್ಷಗಳಿಂದ ಈ ಜಗ್ಗಾಟ ನಡೆದಿದೆ. ಜಾರ್ಜ್ ಬುಷ್ ಅಧ್ಯಕ್ಷರಾಗಿದ್ದಾಗ ಇರಾನಿನ ಮೇಲೆ ದಾಳಿ ನಡೆಸಲು ಎಲ್ಲ ಸಿದ್ಧತೆ ನಡೆದಿತ್ತು. ವಿಶ್ವಸಂಸ್ಥೆಯ ಅಧೀನದಲ್ಲಿರುವ ಅಂತರರಾಷ್ಟ್ರೀಯ ಪರಮಾಣು ಶಕ್ತಿ ಆಯೋಗ ಹಲವು ಬಾರಿ ಇರಾನಿನ ನ್ಯೂಕ್ಲಿಯರ್ ಸ್ಥಾಪನೆಗಳಿಗೆ ಭೇಟಿ ನೀಡಿ ತನಿಖೆ ನಡೆಸಿದೆ. ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯ ಯಾವ ಪುರಾವೆಯೂ ಖಚಿತವಾಗಿ ಲಭ್ಯವಿಲ್ಲದೆ ಬರಿಗೈಯಲ್ಲಿ ಹಿಂದಿರುಗಿದೆ. ಆದಾಗ್ಯೂ ಅಮೆರಿಕಾ ಮಾತ್ರ ಇರಾನ್ ನ್ಯೂಕ್ಲಿಯರ್ ಅಸ್ತ್ರತಯಾರಿಕೆಯಲ್ಲಿ ತೊಡಗಿದೆ ಎಂದು ಆಪಾದಿಸುತ್ತಲೇ ಬಂದಿದೆ. ಇರಾನಿನ ಅಧ್ಯಕ್ಷ ಅಹ್ಮದಿನೆಜಾದ್ ತಮ್ಮ ರಾಷ್ಟ್ರ ನ್ಯೂಕ್ಲಿಯರ್ ಶಕ್ತಿಯನ್ನು ಶಾಂತಿಯುತ ಉದ್ದೇಶಗಳಿಗೆ ಬಳಸುವ ಗುರಿ ಹೊಂದಿದೆ ಎಂದು ಅನೇಕ ಬಾರಿ ಸ್ಪಷ್ಟಪಡಿಸಿದ್ದಾರೆ. ಅಮೆರಿಕಾದ ಒತ್ತಡಗಳಿಗೆ ಮಣಿಯದೆ ಸ್ವತಂತ್ರವಾದ ನೀತಿಯನ್ನು ಅನುಸರಿಸುತ್ತಿರುವ ರಾಷ್ಟ್ರ ಈ ಪ್ರದೇಶದಲ್ಲಿ, ಎಂದರೆ ಪಶ್ಚಿಮ ಏಷಿಯಾದಲ್ಲಿ ಇರಾನ್ ಒಂದೇ. ಈ ಹಿಂದೆ ಅಮೆರಿಕಾದ ವಿರೋಧವಿದ್ದ ಲಿಬಿಯ ಮತ್ತು ಇರಾಕ್ ಈಗ ಇಲ್ಲ. ಇರಾಕ್ ಅಮೆರಿಕಾದ ಆಕ್ರಮಣದಲ್ಲಿದ್ದರೆ, ಲಿಬಿಯದ ಗದಾಫಿ ಎರಡು ವರ್ಷಗಳ ಹಿಂದೆ ಒಡಂಬಡಿಕೆ ಮಾಡಿಕೊಂಡಿದ್ದಾರೆ.

**ಸೀಯಾರ್ಕೆ**

ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ಇರಾನಿನ ಮೇಲೆ ಮತ್ತಷ್ಟು ದಿಗ್ಬಂಧನ ವಿಧಿಸುವುದನ್ನು ವಿರೋಧಿಸಿದ್ದು ಬ್ರೆಜಿಲ್ ಮತ್ತು ಟರ್ಕಿಗಳು ಮಾತ್ರ. ಉಳಿದೆಲ್ಲ ದೇಶಗಳೂ, ಚೀಣಾ ಹಾಗೂ ರಷ್ಯಾ ಕೂಡ, ಅಮೆರಿಕಾದ ಪರ ನಿಂತಿವೆ. ಇದಕ್ಕೆ ಈ ದೇಶಗಳ ಮೇಲೆ ಇರುವ ನಾನಾ ಬಗೆಯ ಒತ್ತಡಗಳೇ ಕಾರಣ. ಹಾಗಾಗಿ ಇಂದು ವಿಶ್ವಸಂಸ್ಥೆಯ ಭದ್ರತಾ ಮಂಡಳಿಯು ಅಮೆರಿಕಾದ ಕೈಗೊಂಬೆಯಾಗಿಬಿಟ್ಟಿದೆ. ಕೆಲದಿನದ ಹಿಂದಷ್ಟೆ, ಇಸ್ರೇಲ್ ಗಾಜಾಪಟ್ಟಿಯ ಪ್ರದೇಶಕ್ಕೆ ನೆರವಿನ ಸಾಮಗ್ರಿ ಒಯ್ಯುತ್ತಿದ್ದ ನೌಕೆಯ ಮೇಲೆ ದಾಳಿ ನಡೆಸಿ ೧೯ ಜನರನ್ನು ಕೊಂದು, ಉಳಿದವರನ್ನು ಸೆರೆಹಿಡಿದು ಉದ್ಧಟತನದಿಂದ ವರ್ತಿಸಿದ್ದನ್ನು ಖಂಡಿಸಿ, ಕ್ರಮ ಕೈಗೊಳ್ಳದಿದ್ದ ಭದ್ರತಾ ಮಂಡಳಿ ಇರಾನಿನ ವಿಷಯದಲ್ಲಿ ಉಗ್ರಪ್ರತಾಪ ತೋರಿದೆ. ಏಕೆಂದರೆ ಅಮೆರಿಕಾ ಇಸ್ರೇಲಿನ ಬೆಂಬಲಕ್ಕೆ ನಿಂತಿತ್ತು. ಇದು ದ್ವಿಮುಖ ಧೋರಣೆಯಲ್ಲದೆ ಮತ್ತೇನು ?

ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮದ ಪ್ರಶ್ನೆಯನ್ನು ಅಮೆರಿಕಾ ಕೈಗೆತ್ತಿಕೊಂಡಾಗಿನಿಂದ ಭಾರತ ಸರಕಾರ ಸ್ಪಷ್ಟವಾದ, ದಿಟ್ಟವಾದ ಧೋರಣೆ ಅನುಸರಿಸದೆ ಅಮೆರಿಕಾಗೆ ಅನುಕೂಲವಾಗಿ ನಡೆದುಕೊಳ್ಳುತ್ತಿರುವುದು ಶೋಚನೀಯ. ವಿಶ್ವಸಂಸ್ಥೆಯ ಇರಾನ್ ಕುರಿತ ಈಗಿನ ನಿರ್ಣಯವನ್ನು ತೀವ್ರವಾಗಿ ವಿರೋಧಿಸಿ, ಖಂಡಿಸದಿರುವ ಭಾರತದ ನೀತಿ ತಲೆತಗ್ಗಿಸುವಂಥದ್ದಾಗಿದೆ. ಇರಾನಿನೊಂದಿಗೆ ಪರಸ್ಪರ ಅನುಕೂಲಕರವಾದ ಸಂಬಂಧಗಳನ್ನು ಹೊಂದಿದ್ದ ಭಾರತ ನಿಧಾನವಾಗಿ ಅಮೆರಿಕಾದ ಪರವಾಗಿ ಸರಿದಿರುವುದು ಒಂದು ವಿಪರ್ಯಾಸ. ಅಲಿಪ್ತರಾಷ್ಟ್ರವಾಗಿ ಸಹಯೋಗಿಯಾಗಿರುವ ಇರಾನ್-ಭಾರತ ಸಂಬಂಧಗಳು ಈಗ ತಣ್ಣಗಾಗಿದೆ. ಭಾರತ-ಪಾಕಿಸ್ತಾನ-ಇರಾನ್ ಇಂಧನಾನಿಲ ಸರಬರಾಜಿನ ಕೊಳವೆ ಯೋಜನೆಯನ್ನು ಭಾರತ ಕೈಬಿಟ್ಟಾಗಿದೆ. ಪಾಕಿಸ್ತಾನ-ಇರಾನ್‌ಗಳು ಈಗಾಗಲೇ ಈ ವಿಚಾರದಲ್ಲಿ ಸಾಕಷ್ಟು ಮುಂದುವರಿದಿವೆ. ಅಮೆರಿಕಾದ ಜೊತೆ ನ್ಯೂಕ್ಲಿಯರ್ ಒಪ್ಪಂದ, ರಕ್ಷಣಾ ಕ್ಷೇತ್ರದಲ್ಲಿ ನಾನಾ ಬಗೆಯ ಒಪ್ಪಂದ ಮಾಡಿಕೊಂಡಿರುವ ಭಾರತ ವಿದೇಶೀ ವ್ಯವಹಾರದಲ್ಲಿ ಸ್ವತಂತ್ರ ಧೋರಣೆ ತಳೆಯಲು ಹಿಂದೆಮುಂದೆ ನೋಡಬೇಕಾದ ಮುಜುಗರದ ಸ್ಥಿತಿಯಲ್ಲಿರುವುದು ಅವಮಾನಕರ. ಒಂದು ಕಾಲದಲ್ಲಿ ಅಂತರರಾಷ್ಟ್ರೀಯ ವಿದ್ಯಮಾನಗಳನ್ನು ಕುರಿತಂತೆ ಭಾರತ ತಳೆಯುತ್ತಿದ್ದ ಸ್ವತಂತ್ರ ಧೋರಣೆ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿತ್ತು. ಹೊಸದಾಗಿ ಸ್ವತಂತ್ರಗೊಂಡ ದೇಶಗಳು ಭಾರತದ ಮಾರ್ಗದರ್ಶನ ಎದುರು ನೋಡುತ್ತಿದ್ದುವು. ಮನಮೋಹನ ಸಿಂಗ್ ಪ್ರಧಾನಿ ಪಟ್ಟ ವಹಿಸಿಕೊಂಡ ಮೇಲೆ ಆ ಹಿರಿಮೆಯೆಲ್ಲ ಗಾಳಿಯಲ್ಲಿ ಹಾರಿಹೋಗಿದೆ. ಈಗ ಭಾರತದ ವಿದೇಶಾಂಗನೀತಿಯನ್ನು ಮನಮೋಹನ ಸಿಂಗ್ ಅಮೆರಿಕಾದ ಬಾಲಂಗೋಚಿಯಾಗಿ ಮಾಡಿದ್ದಾರೆ. ಇರಾನಿನ ವಿಚಾರದಲ್ಲಷ್ಟೇ ಅಲ್ಲದೆ ಇತರ ವಿಚಾರಗಳಲ್ಲಿ ಭಾರತ ಅಮೆರಿಕಾದ ಹಿಂಬಾಲಕನಾಗಿರುವುದು ದುರದೃಷ್ಟಕರ. ಇರಾನಿನ ಕಂಪನಿಗಳ ಜೊತೆ ವ್ಯವಹಾರ ಇರಿಸಿಕೊಂಡಿರುವ ಭಾರತೀಯ ಉದ್ದಿಮೆಗಳ ಮೇಲೆ ವ್ಯವಹಾರ ಮುಂದುವರಿಸದಂತೆ ಅಮೆರಿಕಾ ಒತ್ತಡ ತರುತ್ತಿದೆ. ಈಗಾಗಲೆ ಕೆಲವು ಉದ್ಯಮಗಳು ಒತ್ತಡಕ್ಕೆ ತಲೆಬಾಗಿವೆ. ಭಾರತ ಸರಕಾರ ಮಾತ್ರ ಈ ವಿಷಯದಲ್ಲಿ ತೆಪ್ಪಗಿದೆ. ಅಮೆರಿಕಾದ ಒತ್ತಡ ಹೇಗೆ ಕೆಲಸ ಮಾಡುತ್ತದೆ ಎನ್ನುವುದಕ್ಕೆ ಇದೂ ಒಂದು ಸಾಕ್ಷಿ.

# ಉದ್ಧಟತನ ಮುಂದುವರಿಸುತ್ತಿರುವ ಇಸ್ರೇಲ್




''ಯೆಹೂದ್ಯ ಜನಾಂಗದವರಿಗಾದ ಮೊದಲ ಅತ್ಯಂತ ಕೆಟ್ಟ ಘಟನೆ ಎಂದರೆ 'ಹೊಲೊಕಾಸ್ಟ್' (ಸಾಮೂಹಿಕ ಹತ್ಯಾಕಾಂಡ). ಯೆಹೂದ್ಯ ಜನರಿಗಾದ ಎರಡನೇ ಅತ್ಯಂತ ಕೆಟ್ಟ ಘಟನೆ ಎಂದರೆ ಇಸ್ರೇಲ್ ರಾಜ್ಯ ಅಸ್ತಿತ್ವಕ್ಕೆ ಬಂದದ್ದು.'' ಹೀಗೊಬ್ಬ ಇತ್ತೀಚಿಗೆ ಇಸ್ರೇಲ್ ವರ್ತನೆಯಿಂದ ಬೇಸತ್ತು ಬರೆದಿದ್ದಾನೆ. ಮೊದಲ ಭಾಗವೇನೊ ಸರಿ, ಆದರೆ ಎರಡನೇ ಭಾಗ ಒಪ್ಪಲಾಗದು, ಅದು ಸಿನಿಕತನದಿಂದ ಕೂಡಿದ್ದು. ಇಸ್ರೇಲಿ ಸರಕಾರದ ವರ್ತನೆಯ ಬಗ್ಗೆ ಇರುವ ಅಸಮಾಧಾನವನ್ನು ಇಡೀ ಯೆಹೂದ್ಯ ಜನಾಂಗದ ಮೇಲೆ ಹೊರಿಸುವುದು ಅಪವಾದವಾಗುತ್ತದೆ. ಅದೇನೆ ಇರಲಿ, ಇಸ್ರೇಲ್ ಅಸ್ತಿತ್ವಕ್ಕೆ ಬಂದಾಗಿನಿಂದ ಅಲ್ಲಿನ ಸರಕಾರ ವಿಸ್ತರಣಾವಾದಿ ಧೋರಣೆಯನ್ನು ಅನುಸರಿಸುತ್ತ ಬಂದಿದೆ. ಇದರಲ್ಲಿ ಅನುಮಾನವೇ ಇಲ್ಲ. ಎರಡು ಯುದ್ಧಗಳಿಗೆ ಕಾಲು ಕೆರೆದು ನಿಂತ ಇಸ್ರೇಲ್ ಪ್ಯಾಲಸ್ಟೈನ್ ಜನರ ಸ್ವತಂತ್ರ ರಾಜ್ಯದ ಸ್ಥಾಪನೆಗೆ ಒಂದಲ್ಲ ಒಂದು ಅಡ್ಡಿ ನಿರ್ಮಿಸುತ್ತಲೇ ಬಂದಿದೆ. ಅಮೆರಿಕಾದಂಥ ಬಲಿಷ್ಠ ರಾಷ್ಟ್ರದ ಪೂರ್ಣ ಬೆಂಬಲದ ವಿಶ್ವಾಸ ಇರುವುದರಿಂದ ಇಸ್ರೇಲ್ ಸ್ವೇಚ್ಛಾಚಾರದಿಂದ ವರ್ತಿಸುತ್ತ ಬಂದಿದೆ. ಆಕ್ರಮಿತ ಪ್ರದೇಶಗಳಲ್ಲಿ ಯೆಹೂದ್ಯರ ಸ್ವಾಸ್ಥ್ಯಗಳನ್ನು ನಿರ್ಮಿಸುವುದರಿಂದ ತೊಡಗಿ ಪ್ಯಾಲಸ್ಟೈನ್ ಅರಬ್ಬರ ಹಕ್ಕಿನ ಮೇಲೆ ನಿರಂತರವಾದ ದಾಳಿ ನಡೆಸುತ್ತ ಬಂದಿದೆ. ಅರವತ್ತಕ್ಕೂ ಹೆಚ್ಚು ವರ್ಷ ಕಳೆದರೂ ನಾಗರಿಕ ಜಗತ್ತು ಪ್ಯಾಲಸ್ಟೈನಿಯನ್ನರ ಸ್ವತಂತ್ರ ತಾಯ್ನಾಡಿನ ಸ್ಥಾಪನೆಯ ಕಾರ್ಯದಲ್ಲಿ ಸಫಲವಾಗದಿರುವುದು ಶೋಚನೀಯ. ತೋರಿಕೆಗೆ ಅಮೆರಿಕಾ, ಇಸ್ರೇಲ್‌ಗಳನ್ನು ಒಳಗೊಂಡಂತೆ ಎಲ್ಲ ರಾಷ್ಟ್ರಗಳೂ ಪ್ಯಾಲಸ್ಟೈನ್ ರಾಜ್ಯ ಸ್ಥಾಪನೆಗೆ ಸಮ್ಮತಿ ಸೂಚಿಸಿವೆ.

(೪೨ನೇ ಪುಟವನ್ನು ನೋಡಿ)

# ಅಭಿವೃದ್ಧಿ ಹಾದಿಯಲ್ಲಿರುವ ದೇಶಗಳಿಗೊಂದು



# ಸಮರ್ಥ ಉನ್ನತ ಶಿಕ್ಷಣ ನೀತಿ

**ಪ್ರ**ಸ್ತುತ ಜಿ-೮ ವಿಶ್ವವಿದ್ಯಾನಿಲಯಗಳ ಶೃಂಗಸಭೆ - ೨೦೧೦ರ ವಿದ್ವದ್ಗೋಷ್ಠಿಯಲ್ಲಿ ಭಾಗವಹಿಸುವುದೊಂದು ಗೌರವವೆಂದು ಭಾವಿಸುತ್ತೇನೆ. ಬ್ರಿಟಿಷ್ ಕೊಲಂಬಿಯ (ಕೆನಡಾ) ವಿಶ್ವವಿದ್ಯಾಲಯದ ಅಧ್ಯಕ್ಷರಾದಿಯಾಗಿ ಎಲ್ಲರಿಗೂ ನಾನು ಕೃತಜ್ಞ. ಅಭಿವೃದ್ಧಿಯ ಹಾದಿಯಲ್ಲಿರುವ ದೇಶಗಳ ಅಭಿಪ್ರಾಯಕ್ಕೆ ಅವಕಾಶ ನೀಡುತ್ತಿರುವುದು ಸ್ವಾಗತಾರ್ಹವಾದ ಮುಕ್ತತೆಯ ಸಂಕೇತ. ಮಾನವ ಅಭಿವೃದ್ಧಿ ಸೂಚ್ಯಂಕದ ದೃಷ್ಟಿಯಲ್ಲಿ ಈ ದೇಶಗಳು ಸ್ವಲ್ಪ ಹಿಂದುಳಿದಿರಲು ಚಾರಿತ್ರಿಕ ಕಾರಣಗಳಿವೆ. ಅದರ ಬಗ್ಗೆ ಆಗಾಗ್ಗೆ ವಿನೋದದ ಅನುಗ್ರಹ ದಯಪಾಲಿಸಿದಂತೆ ನಡೆದುಕೊಳ್ಳುವ ಮಂದಿಗೇನೂ ಕಡಿಮೆಯಿಲ್ಲವೆನ್ನಿ. ಇಂದಿನ ಜಾಗತೀಕೃತ ವಿಶ್ವದಲ್ಲಿ ಕಾಲ ಮತ್ತು ದೇಶಗಳು ಹ್ರಸ್ವಗೊಳ್ಳುತ್ತಿವೆ, ಎಲ್ಲೆಗಳು ಛಿದ್ರಗೊಳ್ಳುತ್ತಿವೆ. ಹೀಗಾಗಿ ಅಭಿವೃದ್ಧ ಹಾಗೂ ಅಭಿವೃದ್ಧಿಯತ್ತ ಸಾಗುತ್ತಿರುವ ದೇಶಗಳ ಅಭಿವೃದ್ಧಿ ಸಂಬಂಧಿತ ಸಮಸ್ಯೆಗಳು ಅಂತರರಾಷ್ಟ್ರೀಯ ಆಯಾಮವನ್ನು ಹೊಂದಿವೆ. ಅಭಿವೃದ್ಧ ದೇಶಗಳ ಸಂತುಷ್ಟ ನೆಮ್ಮದಿಯ ಭಾವನೆಯಾಗಲಿ, ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಮಡಿವಂತಿಕೆಯ ಸಂಕೋಚದ ಭಾವನೆಯಾಗಲಿ ಸಮಕಾಲೀನ ಸಂದರ್ಭದಲ್ಲಿ ಪರೀಕ್ಷೆಗೆ ಒಳಪಡುತ್ತವೆ. ವಿಶ್ವ ಬ್ಯಾಂಕಿನ ಅಧ್ಯಕ್ಷ ರಾಬರ್ಟ್ ಜ಼ೋಲಿಕ್ 'ಚೀನಾ ಡೇಲಿ' ಪತ್ರಿಕೆಗೆ ಇತ್ತೀಚೆಗೆ ಹೇಳಿದಂತೆ ''ವಿಶ್ವವನ್ನು ಮೊದಲನೆಯದು – ಮೂರನೆಯದು ಎಂದಾಗಲಿ, ದಾನಿ - ಯಾಚಕ ಎಂದಾಗಲಿ, ನಾಯಕ – ಹಿಂಬಾಲಕ ಎಂದಾಗಲಿ ವಿಂಗಡಿಸುವುದು ಇಂದು ಅಪ್ರಕೃತ.'' ಜಾಗತಿಕ ಆರ್ಥಿಕ ಮುಗ್ಗಟ್ಟು ಇಂದು ಬಹುಮುಖೀ ವ್ಯವಹಾರಕ್ಕೆ ಪ್ರಾಮುಖ್ಯತೆ ಇದೆ ಎಂಬುದನ್ನು ಚೆನ್ನಾಗಿ ಮನದಟ್ಟು ಮಾಡಿಕೊಟ್ಟಿದೆ. ಮುಗ್ಗಟ್ಟಿಗೆ ಅಭಿವೃದ್ಧಿಯತ್ತ ಸಾಗುತ್ತಿರುವ ದೇಶಗಳು ಕಾರಣವಾಗಿರಲಿಲ್ಲ, ಆದರೆ ಜ಼ೋಲಿಕ್ ನಿವೇದಿಸಿಕೊಂಡಂತೆ ಮುಗ್ಗಟ್ಟಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಅವು ಮುಖ್ಯಪಾತ್ರ ವಹಿಸಬಹುದು.

ನಮ್ಮ ಗೋಷ್ಠಿಯ ವಿಷಯ 'ಸಮರ್ಥ ಉನ್ನತ ಶಿಕ್ಷಣ'. ಅದನ್ನು ನೋಡಿದರೆ ಸಮರೂಪತೆ ಅಧಿಕವಾಯಿತೇನೋ ಎನಿಸುತ್ತದೆ. ವಿಶ್ವದ ಎಲ್ಲೆಡೆಯೂ ವಿಶ್ವವಿದ್ಯಾನಿಲಯಗಳು ಗಂಭೀರ ಸವಾಲುಗಳನ್ನೆದುರಿಸುತ್ತಿವೆ; ಅದು ಅವುಗಳ ಸಾಮರ್ಥ್ಯವನ್ನು ಕುರಿತ ಸವಾಲುಗಳು. ಸವಾಲುಗಳಲ್ಲಿ ಭಿನ್ನತೆ ಇದೆ. ಅದು ಎರಡೂ ವಿಧದ ದೇಶಗಳಿಗೆ ಅನ್ವಯವಾಗುವ ವಿಷಯ. ಗಮನವಿಟ್ಟು ನೋಡಿದರೆ ಈ ಸವಾಲುಗಳು ಮೂಲತಃ ಒಂದಕ್ಕೊಂದು ಬೆಸೆದುಕೊಂಡಿರುವುದು ಸ್ಪಷ್ಟವಾಗುತ್ತದೆ. ಅಂತರರಾಷ್ಟ್ರೀಯ ಸಮುದಾಯವು ಒಟ್ಟಾಗಿ ಕಲೆತು ಈ ಸವಾಲುಗಳನ್ನು ಪರಿಣಾಮಕಾರಿಯಾಗಿ ಎದುರಿಸಲು ಸಾಧ್ಯ; ಅದೇ, ಒಂದೊಂದು ದೇಶವೂ ತನ್ನ ಮಟ್ಟಿಗೆ ಪರಿಹಾರ ಅರಸಿ ಹೊರಟರೆ ಯಶಸ್ಸು ದೂರದ ಮಾತೇ ಸರಿ. ಮುಂದೆ ನಾನು ಅಭಿವೃದ್ಧಿ ಹಾದಿಯಲ್ಲಿರುವ ದೇಶಗಳು ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಎದುರಿಸುತ್ತಿರುವ ಸವಾಲುಗಳನ್ನು ಕುರಿತಂತೆ ವಿಸ್ತರಿಸಲಿದ್ದೇನೆ. ಭಾರತವನ್ನು ನಾನು ವಿಶೇಷವಾಗಿ ಕೇಂದ್ರೀಕರಿಸಿ ಚರ್ಚಿಸುತ್ತೇನೆ, ಏಕೆಂದರೆ ಸವಾಲುಗಳ ವೈವಿಧ್ಯವನ್ನು ಗುರುತಿಸಲು ಭಾರತವು ಒಂದು ಒಳ್ಳೆಯ ನಿದರ್ಶನ ಮತ್ತು ಅದರ ಪರಿಚಯ ನನಗೆ ಸಾಕಷ್ಟಿದೆ.

**ವಿಸ್ತರಣೆಗಾಗಿ ಒತ್ತಡ**

ಅಭಿವೃದ್ಧಿಹೊಂದುತ್ತಿರುವ ಬಹುತೇಕ ದೇಶಗಳಲ್ಲಿ ವಿಶ್ವವಿದ್ಯಾಲಯಗಳು ಎರಡನೆ ಮಹಾಯುದ್ಧದ ಕಾಲದ ನಂತರದವು. ಈ ದೇಶಗಳ ಪ್ರತಿಷ್ಠಿತ ವರ್ಗದ ಕೆಲವರು ವಿದೇಶಗಳಿಗೆ ತೆರಳಿದರು; ಅದೂ ಬಹುಮಟ್ಟಿಗೆ ಆಯಾ ದೇಶಗಳನ್ನು ವಸಾಹತುಗಳನ್ನಾಗಿ ಮಾಡಿಕೊಂಡಿದ್ದ ಸಾಮ್ರಾಜ್ಯಶಾಹಿ ಯಜಮಾನರ ದೇಶಗಳಿಗೆ. ಭಾರತದಲ್ಲಿ ವಿಶ್ವವಿದ್ಯಾನಿಲಯಗಳಿಗೆ ದೀರ್ಘಕಾಲದ ಇತಿಹಾಸವಿದೆ; ೧೮೫೭ರಷ್ಟು ಹಿಂದಿನಿಂದ ಅದನ್ನು ನೋಡಬಹುದು. ಆದರೆ ಅಲ್ಲೂ ಉನ್ನತ ಶಿಕ್ಷಣದ ವೇಗವಾದ ವಿಸ್ತರಣೆಯು ಸ್ವಾತಂತ್ರ್ಯೋತ್ತರ ಕಾಲದ ವಿಶೇಷ. ಅಭಿವೃದ್ಧಿ ಹೊಂದುತ್ತಿರುವ ಬಹುತೇಕ ದೇಶಗಳಲ್ಲಿ ೧೮ರಿಂದ ೨೪ರವರೆಗಿನ ವಯಸ್ಸಿನವರ ಪೈಕಿ ಉನ್ನತ ಶಿಕ್ಷಣದಲ್ಲಿ ಸಾಮಾನ್ಯ ದಾಖಲಾತಿ ಪ್ರಮಾಣವು ಶೇ. ೮ರಿಂದ ೨೫ರವರೆಗಿನ ಅಂತರದಲ್ಲಿದೆ. ಅಭಿವೃದ್ಧ ದೇಶಗಳ ಶೇ. ೫೫-೮೫ ದಾಖಲಾತಿ ಪ್ರಮಾಣಕ್ಕೆ ಹೋಲಿಸಿದರೆ ಇದು ತೀರಾ ಶೋಚನೀಯವಾದ ಕೆಳಮಟ್ಟದ್ದು.

೨೦೦೯ರ ಮಾನವ ಅಭಿವೃದ್ಧಿ ವರದಿಯು ನೀಡಿರುವ ಶಿಕ್ಷಣದ ಗಳಿಕೆಯ ಮಟ್ಟದ ಅಂಕಿ-ಅಂಶಗಳ ಮೇಲೆ ಕಣ್ಣು ಹಾಯಿಸಬಹುದು : ಅಭಿವೃದ್ಧ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಜನಸಂಖ್ಯೆಯಲ್ಲಿ ೨೫ ಮತ್ತು ಅದಕ್ಕಿಂತ ಹೆಚ್ಚು ವಯಸ್ಸಿನ ಜನರಲ್ಲಿ ಅತಿಹೆಚ್ಚಿನ ವೈಪರೀತ್ಯ ಕಾಣಬರುತ್ತದೆ. ಎಲ್ಲ ದೇಶಗಳ ಬಗೆಗೂ ಶೈಕ್ಷಣಿಕ ಗಳಿಕೆಯನ್ನು ಕುರಿತ ಸಂಪೂರ್ಣ ಮಾಹಿತಿ ಲಭ್ಯವಿಲ್ಲ; ಲಭ್ಯವಿರುವುವನ್ನು ವಿಶ್ಲೇಷಿಸಿದರೆ ದೊರಕುವ ಚಿತ್ರ ಹೀಗಿದೆ: ಮಾನವ ಅಭಿವೃದ್ಧಿ ಸೂಚ್ಯಂಕವು ಅತಿ ಹೆಚ್ಚಾಗಿರುವ ೧೮ ದೇಶಗಳ ಪೈಕಿ ೧೬ರಲ್ಲಿ; ಮತ್ತು ಚೀಣಾ ಮತ್ತು ಭಾರತ ಸೇರಿದಂತೆ ಅಭಿವೃದ್ಧಿ ಸೂಚ್ಯಂಕವು ಮಧ್ಯಮ ಸ್ತರದಲ್ಲಿರುವ ೨೦ ದೇಶಗಳ ಪೈಕಿ ೩ರಲ್ಲಿ ಜನಸಂಖ್ಯೆಯ ಶೇ. ೨೦ ಅಥವಾ ಅದಕ್ಕೂ ಹೆಚ್ಚು ಮಂದಿ ಉನ್ನತ ಶೈಕ್ಷಣಿಕ ಅರ್ಹತೆ ಪಡೆದವರಾಗಿದ್ದಾರೆ. ಅದೇ ಅಭಿವೃದ್ಧಿ ಸೂಚ್ಯಂಕವು ಕಡಿಮೆಯಿರುವ ೨೪ ದೇಶಗಳ ಪೈಕಿ ೨ ದೇಶಗಳಲ್ಲಿ ಜನಸಂಖ್ಯೆಯ ಶೇ. ೨.೫ ಮಾತ್ರ ಉನ್ನತ ಶೈಕ್ಷಣಿಕ ಅರ್ಹತೆ ಪಡೆದಿದ್ದಾರೆ.

ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಜನಸಂಖ್ಯೆಯ ಹೆಚ್ಚಳದೊಂದಿಗೆ ಒಂದು ಪರ್ವಕಾಲ ಉದಯಿಸುತ್ತಿದೆ. ಇದರ ಒಂದು ಪರಿಣಾಮ ಉನ್ನತ ಶಿಕ್ಷಣದ ವಿಸ್ತರಣೆಗಾಗಿ ಬರುವ ಒತ್ತಡ. ಅಭಿವೃದ್ಧ ದೇಶಗಳಲ್ಲಿ ಹೆಚ್ಚು ವಯೋಮಾನದವರಿದ್ದಾರೆ, ಕಡಿಮೆ ವಯಸ್ಸಿನವರ ಪ್ರಮಾಣ ಕಡಿಮೆ; ನಮ್ಮಲ್ಲಿ ಅದಕ್ಕೆ ವ್ಯತಿರಿಕ್ತವಾದ ಸನ್ನಿವೇಶವಿದೆ. 'ಯುವಕ-ಯುವತಿ' ಯಾವ ವಯಸ್ಸಿನವರು ಎಂದು ನಿಗದಿಗೊಳಿಸಿದರೂ ಸರಿಯೇ, ನಮ್ಮಲ್ಲಿ ಆ ಬಣ ಹೆಚ್ಚಾಗಿದೆ. ವಿಶ್ವದಲ್ಲಿ ದುಡಿಮೆ ಮಾಡುವವರ ಪೈಕಿ ೧೫ರಿಂದ ೩೪ರವರೆಗಿನ ವಯೋಮಾನದವರೇ ಹೆಚ್ಚು. ಆ ವಯೋಮಾನದವರು ಅಧಿಕವಾಗಿರುವುದು ಚೀಣಾ ಮತ್ತು ಭಾರತಗಳಲ್ಲಿ. ಆದ್ದರಿಂದ ಆರ್ಥಿಕ ಅಭಿವೃದ್ಧಿ ದರದ ಏರಿಕೆಯಾದಾಗ ಅದರ ಫಲಾನುಭವಿಗಳು ಹೆಚ್ಚಿಗಿರಬೇಕಾದ್ದು ಈ ದೇಶಗಳಲ್ಲೇ.

**ಡಾ|| ಎನ್. ಜಯರಾಂ**



ಜನಸಂಖ್ಯೆಯೆಂದರೆ ಕೇವಲ ಸಂಖ್ಯೆಯಲ್ಲ, ಆ ಸಂಖ್ಯೆಯವರಿಗೆ ದುಡಿಮೆಯ ಫಲ ಹೆಚ್ಚಾಗಬೇಕಾದರೆ ಅವರೆಂಥ ಜನರಾಗಬೇಕೆಂಬುದು ಮುಖ್ಯ. ಅಂದರೆ, ಯುವಜನರ ಮಾನವಿಕ ಸಂಪತ್ತಿನ ಉತ್ತಮಿಕೆಗಾಗಿ ಹೇರಳವಾದ ಹಣದ ಹೂಡಿಕೆ ಅಗತ್ಯ. ಅದು ಈಗಾಗಲೇ ಇರುವ ಶೈಕ್ಷಣಿಕ ಸಂಸ್ಥೆಗಳನ್ನು ಸುಮ್ಮನೆ ಹೆಚ್ಚಿಸಿ ಇನ್ನಷ್ಟು ಯುವಜನರಿಗೆ ಪ್ರವೇಶಾವಕಾಶ ದೊರಕಿಸಿಕೊಡುವುದಲ್ಲ, ಹಾಗೆ ಮಾಡಿದರೆ ಸಂಖ್ಯೆ ಹೆಚ್ಚಬಹುದು, ಆದರೆ ಗುಣಮಟ್ಟ ಕುಸಿಯುತ್ತದೆ. ನಿಜಕ್ಕೂ ನಳನಳಿಸುವ ಉನ್ನತ ಶಿಕ್ಷಣ ವ್ಯವಸ್ಥೆಗಳನ್ನು ರಾತ್ರೋರಾತ್ರಿ ಎಬ್ಬಿಸಿ ನಿಲ್ಲಿಸಲಾಗುವುದಿಲ್ಲ. ಉತ್ತಮ ಸೌಲಭ್ಯಗಳನ್ನುಳ್ಳ ಉನ್ನತ ಶಿಕ್ಷಣ ಸಂಸ್ಥೆಗಳನ್ನು ರಚಿಸುವ ರೀತಿಯಲ್ಲಿ ವಿಸ್ತರಣೆ ಮಾಡಬೇಕೆಂದರೆ ಅಗಾಧ ಆರ್ಥಿಕ ಮೂಲಗಳಿರಬೇಕು. ಅಭಿವೃದ್ಧಿನಿರತ ದೇಶಗಳು ಅದನ್ನು ಮಾಡಲು ಶಕ್ಯವೇ ಎಂಬುದು ಅನುಮಾನಾಸ್ಪದ. ಆರ್ಥಿಕವಾಗಿ ಹೂಡಿಕೆ ಮಾಡಲು ಸಮರ್ಥವಾದರೂ ಸಂಸ್ಥೆಗಳನ್ನು ಕಟ್ಟುವುದು, ಅಲ್ಲಿ ಮೂಲಸೌಕರ್ಯ ಒದಗಿಸುವುದು, ಅವನ್ನು ಮುಂದುವರಿಸುವುದು, ಇವೆಲ್ಲಾ ಕ್ಷಣಾರ್ಧದಲ್ಲಿ ಆಗುವುದಿಲ್ಲ. ಅದು ಕಾಲಾನುಕ್ರಮವಾಗಿ ಫಲ ನೀಡುವಂಥವು.

ಇನ್ನೊಂದು ಉಗ್ರ ಸಮಸ್ಯೆ ಇದೆ: ಶಿಕ್ಷಣ ಮತ್ತು ಸಂಶೋಧನೆಯಲ್ಲಿ ನೈಜ ಅನುರಾಗವಿರುವ ಅರ್ಹ ಅಧ್ಯಾಪಕ – ಸಂಶೋಧಕರ ಕೊರತೆಯ ಸಮಸ್ಯೆ ಅದು. ನಮ್ಮೆಷ್ಟೋ ವಿಶ್ವವಿದ್ಯಾಲಯಗಳಲ್ಲಿ ಮತ್ತು ಉನ್ನತ ಕಲಿಕೆಯ ಪ್ರಶಂಸನೀಯ ಸಂಸ್ಥೆಗಳಲ್ಲಿ ಅಧ್ಯಾಪಕ- ಸಂಶೋಧಕ ಸ್ಥಾನಗಳು ಖಾಲಿ ಬಿದ್ದಿವೆ. ಅವನ್ನು ತುಂಬಲು ಅರ್ಹತೆಯಿರುವ ವಿದ್ವಾಂಸರಿಲ್ಲ. 'ಗುರು' ಎಂದರೆ ಮಹತ್ತರ ಸ್ಥಾನ, ಆ ಸ್ಥಾನವನ್ನು ಅಲಂಕರಿಸುವವರು ಉದಾತ್ತ ಪ್ರೇರಣೆಗಳಿಂದ ಬಂದವರು ಎಂಬುದೆಲ್ಲಾ ಈಗ ಹಳೆಯ ಕತೆ. ಎಲ್ಲದರಲ್ಲೂ ಇರುವಂತೆ ಈಗ ಈ ಸ್ಥಾನಕ್ಕೆ ಬರಲಿಚ್ಛಿಸುವವರಿಗೂ ಸಂಬಳ, ಸೌಲಭ್ಯ, ಬಡ್ತಿ, ಭವಿಷ್ಯ, ಸ್ಥಾನಮಾನ ಇತ್ಯಾದಿಗಳ ಬಗ್ಗೆ ಆಸಕ್ತಿ ಇರುತ್ತದೆ. ಒಂದು ಉನ್ನತ ಪ್ರಾಧ್ಯಾಪಕ – ಸಂಶೋಧಕನ ಸ್ಥಾನಕ್ಕೆ ಅರ್ಹನಾಗಲು ಒಬ್ಬ ವ್ಯಕ್ತಿ ಏನೆಲ್ಲಾ ವ್ಯಯಿಸುತ್ತಾನೆ, ಎಷ್ಟು ಸಮಯ ಕಳೆದಿರುತ್ತಾನೆ, ಎಷ್ಟು ಶ್ರಮಿಸುತ್ತಿರುತ್ತಾನೆ, ಎಷ್ಟು ವೇತನ ಪಡೆಯುತ್ತಾನೆ, ಗಮನಿಸಿ. ಅವನಷ್ಟೇ ಅಥವಾ ಅವನಿಗಿಂತಲೂ ಹೆಚ್ಚು ವೇತನ ಪಡೆಯುವ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನಗಳ ಕ್ಷೇತ್ರದ ಉನ್ನತ ಮಟ್ಟದವರು ಎಷ್ಟು ಶ್ರಮ ಹಾಗೂ ಸಮಯ ವ್ಯಯಿಸಿರುತ್ತಾರೆ? ಅಂತರ ಎಷ್ಟೊಂದಿದೆಯೆಂದರೆ ಸ್ವಲ್ಪ ಹೆಚ್ಚಿನ ಬುದ್ಧಿಮತ್ತೆ ಇರುವವರು ಅಧ್ಯಾಪನ ಕಾರ್ಯಕ್ಕೆ ಬರುವುದಿಲ್ಲ, ಮಾಹಿತಿ-ಜೈವಿಕ ತಂತ್ರಜ್ಞಾನ ಕ್ಷೇತ್ರಕ್ಕೆ ಲಗ್ಗೆಯಿಡುತ್ತಾರೆ. ಜೊತೆಗೆ ಎಂತೆಂತಹ ಓಬೀರಾಯನ ಕಾಲದ ಪ್ರತಿಬಂಧಕಗಳು! ಉದಾಹರಣೆಗೆ, ಭಾರತ ಮೂಲದವರೇ ಆದರೂ, ಯಾರಾದರೂ ವಿದೇಶದವರನ್ನು ಖಾಯಂ ಆದ ಉನ್ನತ ಸ್ಥಾನಕ್ಕೆ ಆಯ್ಕೆಮಾಡುವಂತಿಲ್ಲ. ಇತ್ತೀಚೆಗಷ್ಟೇ ಇದನ್ನು ಸ್ವಲ್ಪ ಸಡಿಲಿಸಿ ಅಂತರರಾಷ್ಟ್ರೀಯ ಖ್ಯಾತಿಯ ತಂತ್ರಜ್ಞಾನ ಸಂಸ್ಥೆಗಳಿಗೆ (ಐ.ಐ.ಟಿ.) ಒಪ್ಪಂದದ ಮೇಲೆ ವಿದೇಶೀಯರನ್ನು ನೇಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.

ಇದೆಲ್ಲದರ ಫಲಶ್ರುತಿ ನಿರಾಶಾದಾಯಕವೆನಿಸಬಹುದು: ಅಭಿವೃದ್ಧಿನಿರತ ದೇಶಗಳ ಯೋಜನಾಚತುರರು ಮತ್ತು ನೀತಿನಿರ್ಮಾಪಕರು ಉನ್ನತ ಶಿಕ್ಷಣದ ವಿಕಾಸಕ್ಕೆಂದು ಹಾಕಿಕೊಂಡಿರುವ ಅಲ್ಪ ಮತ್ತು ದೀರ್ಘಕಾಲಿಕ ಗುರಿಗಳು ತೀರಾ ಅವಾಸ್ತವ. ಉನ್ನತ ಶಿಕ್ಷಣದ ವಿಕಾಸದ ಯೋಜನೆ ಸಿದ್ಧಗೊಳಿಸುವಾಗ ನೆನಪಿಡಬೇಕಾದ್ದು ಸಮಸ್ಯೆಗಳು ಹಾಗೂ ಸಾಧ್ಯತೆಗಳು ಯಾವ ತೆರನಾದುವೆಂಬುದನ್ನು. ಒಂದಂಶವಂತೂ ಖಚಿತ: ಸದ್ಯದಲ್ಲಿ ಈ ದೇಶಗಳಲ್ಲಿ ದುಡಿಯುವ ಯುವಜನತೆ ಅಭಿವೃದ್ಧ ದೇಶಗಳಲ್ಲಿ ಇರುವುದಕ್ಕಿಂತ ಹೆಚ್ಚಾಗಿದ್ದರೂ ಪರಿಸ್ಥಿತಿ ಹಾಗೆಯೇ ಉಳಿಯುವುದಿಲ್ಲ. ಅದು ೨೦೩೦ರ ವೇಳೆಗೆ ಕಡಿಮೆಯಾಗುತ್ತಾ ಕಡೆಗೆ ೨೦೫೦ರ ವೇಳೆಗೆ ಅದೃಶ್ಯವಾಗುತ್ತದೆ. ಅದಾದಾಗಲೂ ಜನಸಂಖ್ಯೆಯ ಯುವಜನತೆಯ ಪ್ರಮಾಣ ಅಭಿವೃದ್ಧಿನಿರತ ದೇಶಗಳಲ್ಲಿಯೇ ಹೆಚ್ಚಾಗಿರುತ್ತದೆ. ಈ ದೇಶಗಳ ಮುಖ್ಯ ಬವಣೆಯೆಂದರೆ ಹೊರಬರುತ್ತಿರುವ ದೊಡ್ಡ ಪ್ರಮಾಣದ ಯುವಜನರನ್ನು ತೊಡಗಿಸಿಕೊಳ್ಳಲು ಅಲ್ಲಿಯ ಆರ್ಥಿಕತೆ ಅಸಮರ್ಥವಾಗಿರುವುದು. ಕಳೆದ ಕೆಲವು ದಶಕಗಳಲ್ಲಿ ಆರ್ಥಿಕತೆಯು ಕೆಲವು ದೇಶಗಳಲ್ಲಿ ಗಮನಾರ್ಹವಾದ ದರದಲ್ಲಿ ಬೆಳೆದಿದೆಯಾದರೂ ಸಂದರ್ಭವು ಆಶಾದಾಯಕವಾಗಿಲ್ಲ; ಏಕೆಂದರೆ, ಅಲ್ಲಿ ನಡೆಯುತ್ತಿರುವುದು 'ಉದ್ಯೋಗ ಹೆಚ್ಚಳವಿಲ್ಲದ ಬೆಳವಣಿಗೆ.' ಹೊಸ ಉದ್ಯೋಗಗಳು ಸೃಷ್ಟಿಯಾಗಿವೆ, ಅವನ್ನು ತುಂಬಲು ಅಗತ್ಯವಾದ ಜ್ಞಾನ-ಕೌಶಲ್ಯ-ಸಾಮರ್ಥ್ಯಗಳು ಭಿನ್ನವಾದುವು, ವ್ಯಾಪಕವಾದುವು. ಅವನ್ನು ಹೊಂದಿದವರಿಗೆ ಮಾತ್ರವೇ ಹೊಸ ಅವಕಾಶಗಳ ಲಾಭ ಪಡೆಯಲು ಸಾಧ್ಯ. ಅಭಿವೃದ್ಧಿನಿರತ ದೇಶಗಳಲ್ಲಿ ಪ್ರಕೃತದ ಜಾಗತೀಕರಣ ಯುಗದಲ್ಲಿ ಆದಾಯ ಮತ್ತು ಸಂಪತ್ತಿನಲ್ಲಿರುವ ಅಂತರ ಹೆಚ್ಚುತ್ತಿರುವುದಕ್ಕೆ ಇದು ಕಾರಣ. ಸಮಾಜಶಾಸ್ತ್ರಜ್ಞರು ಗುರುತಿಸಿರುವಂತೆ ಯುವಜನರು ಉದ್ಯೋಗಿಗಳಾಗಲು ಅಸಮರ್ಥರಾಗಿಬಿಡುವುದು ಅವರು ನಿರುದ್ಯೋಗಿಗಳಾಗಿರುವುದಕ್ಕಿಂತಲೂ ಹೆಚ್ಚು ಮುಗ್ಗಟ್ಟಿನ ಅಂಶ. ಯಾರಲ್ಲಿ ಕೌಶಲ್ಯವು ಕಡಿಮೆಯಿರುತ್ತದೋ ಅವರು ಉದ್ಯೋಗಿಗಳಾದರೂ ಕಡಿಮೆ ಆದಾಯದ ಹಂತದಲ್ಲೇ ಉಳಿದುಬಿಡಬೇಕಾಗುತ್ತದೆ. ಆದ್ದರಿಂದ ಅಭಿವೃದ್ಧಿನಿರತ ದೇಶಗಳು ಉನ್ನತ ಶಿಕ್ಷಣದ ಯೋಜನೆಗಳನ್ನು ಹಾಕಿಕೊಳ್ಳುವಾಗ ಆರ್ಥಿಕತೆಯ ಸ್ವರೂಪ ಬದಲಾಗುತ್ತಿದೆ ಎಂಬುದನ್ನು ಮರೆಯಬಾರದು. ಆಗತಾನೆ ಯುವಜನರ ಉದ್ಯೋಗ ಸಾಮರ್ಥ್ಯ ಮತ್ತು ಕೌಶಲ್ಯಗಳನ್ನು ವರ್ಧಿಸಲು ಸಾಧ್ಯವಾದೀತು.

**ಗುಣಮಟ್ಟದ ಒಗಟು**

ಶೈಕ್ಷಣಿಕ ಶಿಸ್ತುಗಳು, ಪಠ್ಯ ಮತ್ತು ಬೋಧನಗಳ ಪರಿಮಾಣದಿಂದ ಅವುಗಳ ಗುಣಾತ್ಮಕ ವಿಸ್ತರಣೆಯತ್ತ ಕಣ್ಣುಹಾಯಿಸಿದರೆ ಇನ್ನೂ ಕಠಿಣವಾದ ಸವಾಲು ಅಭಿವೃದ್ಧಿನಿರತ ದೇಶಗಳ ಮುಂದಿದೆ. ಎಲ್ಲ ದೇಶಗಳಲ್ಲಿರುವಂತೆ ಇಲ್ಲೂ ಉನ್ನತ ಶಿಕ್ಷಣ ಸಂಸ್ಥೆಗಳು ಗುಣಮಟ್ಟದ ದೃಷ್ಟಿಯಿಂದ ಭಿನ್ನವಾಗಿವೆ. ಆದರೆ ಇಲ್ಲಿಯ ವೈಪರೀತ್ಯಗಳು ಕಣ್ಣಿಗೆ ರಾಚುವಂಥವು: ಕಳಪೆಮಟ್ಟದ ಸಮುದ್ರದಲ್ಲೋ ಅಲ್ಲೊಂದು ಇಲ್ಲೊಂದು ಉತ್ತಮ ಮಟ್ಟದ ದ್ವೀಪಗಳು. ನಮ್ಮ ಶಿಕ್ಷಣ ಸಂಸ್ಥೆಗಳು ಅಂಥವು. ಹೊರದೇಶಗಳಿಂದ ಸ್ಪರ್ಧೆ ಬಾರದಂತೆ ನಮ್ಮ ದೊಡ್ಡ ಗೋಡೆಗಳು; ಮತ್ತು ಆಂತರಿಕವಾಗಿ ಸ್ಪರ್ಧೆ ಏರ್ಪಡದಿರುವುದು; ಇದರಿಂದಾಗಿ ಗುಣಮಟ್ಟದ ಪ್ರಜ್ಞೆ ಬಹುಮಟ್ಟಿಗೆ ಎಲ್ಲೋ ಕಳೆದುಹೋಗಿದೆ. ಗುಣಮಟ್ಟದ ಖಾತರಿ ಮತ್ತು ಯೋಗ್ಯತಾನಿರ್ಧಾರಕ ಸೂತ್ರ ಎಂಬುವು ಇಲ್ಲಿ ಎಲ್ಲೋ ಆಚೆಗಿನ ಕಲ್ಪನೆಗಳು. ಸ್ವಯಂ ಪ್ರೇರಣೆಯಿಂದ ತಾವೇ ಯೋಗ್ಯತಾನಿರ್ಧಾರದ ಕಟ್ಟುಪಾಡಿಗೆ ತಮ್ಮನ್ನು ಗುರಿಪಡಿಸಿಕೊಳ್ಳುವ ಸಂಸ್ಥೆಗಳು ವಿರಳ; ಅದನ್ನು ಕಡ್ಡಾಯ ಮಾಡಿದರೆ ಅದು ಯಾಂತ್ರಿಕವೋ ಬೇಕಾಬಿಟ್ಟಿಯೋ ಆಗಿಬಿಡುತ್ತದೆ. ಹೀಗಾಗಿ, ಅಭಿವೃದ್ಧಿನಿರತ ದೇಶಗಳು ನೀಡುವ ಶೈಕ್ಷಣಿಕ ಪ್ರಮಾಣಪತ್ರಗಳು ಹಲವು ವೇಳೆ ಗುಮಾನಿಗೆ ಆಸ್ಪದ ನೀಡುತ್ತವೆ.

ಅಭಿವೃದ್ಧಿನಿರತ ದೇಶಗಳ ವಿಶ್ವವಿದ್ಯಾನಿಲಯಗಳು ಅಂತರರಾಷ್ಟ್ರೀಯ ಮಾಪನದಲ್ಲಿ ಮೊದಲ ಹತ್ತು-ಇಪ್ಪತ್ತು ಸಂಸ್ಥೆಗಳ ಪಟ್ಟಿಯಲ್ಲಿ ಕಾಣಸಿಗವು; ಮೊದಲ ಮುನ್ನೂರರಲ್ಲಿ ಸಹ ಕಾಣಿಸಿಕೊಳ್ಳುವವು ಅತಿಕಡಿಮೆ ಸಂಖ್ಯೆಯಲ್ಲಿ, ಅದು ಹೇಗೂ ಅಸಾಧ್ಯವೆಂದು ಕೈಚೆಲ್ಲಿ ಕೂತ ಇವು ಅಂತರರಾಷ್ಟ್ರೀಯ ಮಾಪನಕ್ಕೆ ಬೆಲೆ ಕಟ್ಟುವುದಿಲ್ಲ. ವಿಶ್ವದ ಪ್ರತಿಷ್ಠಿತ ವರ್ಗದ ವಿಶ್ವವಿದ್ಯಾನಿಲಯಗಳ ಸಾಲಿನಲ್ಲಿ ಕೂರಲು ಇವು ಯತ್ನಿಸಬೇಕೆಂದು ನಾನು ಹೇಳುತ್ತಿಲ್ಲ. ಏಕೆಂದರೆ, ಮೇಲಿನ ಸ್ಥಾನಗಳು ಸೀಮಿತವೇ ಅಲ್ಲವೆ! ಅಂತರರಾಷ್ಟ್ರೀಯ ಮಾಪನದಲ್ಲಿ ವಿಜಯಿಯಾಗುವುದು ತಂತಾನೆ ಖ್ಯಾತಿಯಲ್ಲ. ಆ ಮಾಪನಕ್ಕೆ ಬಳಸಲಾಗುವ ಸೂಚಕಗಳು ಪ್ರಶ್ನಾರ್ಹ. ಅಲ್ಲದೆ, ವಿಶ್ವದ ಬೇರೆ ಬೇರೆ ಕಡೆ ವಿಶ್ವವಿದ್ಯಾಲಯಗಳ ದೂರದೃಷ್ಟಿ ಮತ್ತು ಉದ್ದೇಶ ಒಂದೇ ಅಲ್ಲ. ಅಭಿವೃದ್ಧಿನಿರತ ದೇಶಗಳ ವಿಶ್ವವಿದ್ಯಾಲಯಗಳು ಅಭಿವೃದ್ಧ ದೇಶಗಳದ್ದೇ ಮಾದರಿಯಲ್ಲಿ ಯಥಾವತ್ತಾಗಿರಲು ಸಾಧ್ಯವಿಲ್ಲ. ಆದಾಗ್ಯೂ, ಹಲವು

ಶತಮಾನಗಳಿಂದಲೂ ವಿಶ್ವದ ವಿಖ್ಯಾತ ವಿಶ್ವವಿದ್ಯಾಲಯಗಳು ಪಡೆಯುತ್ತಾ ಬಂದಿರುವ ಪ್ರತಿಷ್ಠಿತ ಸ್ಥಾನವು ಅಭಿವೃದ್ಧಿನಿರತ ದೇಶಗಳಿಗೆ ಕನ್ನಡಿ ಹಿಡಿದು ಉನ್ನತ ವಿದ್ಯಾಸಂಸ್ಥೆ ಹೇಗಿರಬೇಕೆಂಬುದನ್ನು ತೋರಿಸಿಕೊಡುತ್ತವೆ. ಗುಣಮಟ್ಟದ ಸೂಚನೆಯು ಇದರಿಂದ ಲಭಿಸುತ್ತದೆ. ಇದನ್ನು ಕಟ್ಟುನಿಟ್ಟಾಗಿ ಪಾಲಿಸದೆಹೋದರೆ ನಮ್ಮ ವಿಶ್ವವಿದ್ಯಾಲಯಗಳು ನೀಡುವ ಅರ್ಹತಾಪತ್ರಗಳಿಗೆ ಏನೇನೂ ಬೆಲೆ ಇರುವುದಿಲ್ಲ.

ಅಭಿವೃದ್ಧಿನಿರತ ದೇಶಗಳ ವಿಶ್ವವಿದ್ಯಾಲಯ ವ್ಯವಸ್ಥೆಯು ಇನ್ನೊಂದು ಸವಾಲನ್ನೆದುರಿಸುತ್ತದೆ : ಅಧ್ಯಾಪನ ಮತ್ತು ಸಂಶೋಧನೆಗಳ ನಡುವೆ ಅವಿನಾಭಾವ ಸಂಬಂಧವಿಲ್ಲದಿರುವುದು; ಆದರಿಂದಾಗಿ ಸಂಶೋಧನಾ ವಲಯವು ಕುಗ್ಗಿಹೋಗಿದೆ. ನಮ್ಮ ಸಂಸ್ಥೆಗಳು ಜ್ಞಾನವನ್ನು ವಿತರಿಸುವ ಚಿಕ್ಕ ಚಿಕ್ಕ ಮಾರಾಟಕೇಂದ್ರಗಳಂತಾಗಿವೆ. ಭಾರತದಲ್ಲಿರುವಂತೆ ವಿಶಾಲ ಮತ್ತು ಅನುಭವಸ್ಥ ಉನ್ನತ ಶಿಕ್ಷಣ ವ್ಯವಸ್ಥೆಗೂ ಇದು ಅನ್ವಯಿಸುತ್ತದೆ. ವಿಜ್ಞಾನದಲ್ಲಿ ನೊಬೆಲ್ ಪ್ರಶಸ್ತಿ ವಿಜೇತರು, ಅಂತರರಾಷ್ಟ್ರೀಯವಾಗಿ ಖ್ಯಾತಿ ಪಡೆದ ವೈಜ್ಞಾನಿಕ ಸಂಸ್ಥೆಗಳಲ್ಲಿ ಸಂಶೋಧನೆಗೆ ಆಹ್ವಾನಿಸಲ್ಪಟ್ಟವರ ಸಂಖ್ಯೆ, ವಿಜ್ಞಾನಿಗಳ ಸಂಶೋಧನಾ ಬರಹಗಳಿಗೆ ದೊರೆತಿರುವ ಮಾನ್ಯತೆ, ಅವುಗಳ ಪ್ರಾಮುಖ್ಯ, ಮುಂತಾದುವನ್ನು ಗಮನಿಸಿದರೆ ಅಭಿವೃದ್ಧಿನಿರತ ದೇಶಗಳ ಗಳಿಕೆ ನಗಣ್ಯ. ಈ ದೇಶಗಳ ಇಂದಿನ ಖ್ಯಾತ ಸಂಶೋಧಕರು ಹೊರದೇಶಗಳಲ್ಲಿ ಸಂಶೋಧನೆಗಳಲ್ಲಿ ತೊಡಗಿರುತ್ತಾರೆ, ಹಿಂದಿನವರಂತೆ ಸ್ವದೇಶದಲ್ಲಿರುವುದಿಲ್ಲ. ಹಾಗೂ ಏನಾದರೂ ಮಹತ್ವದ ಸಂಶೋಧನೆಗಳಾಗುತ್ತಿದ್ದರೆ ಅದು ನಡೆಯುವುದು ವಿಶ್ವವಿದ್ಯಾಲಯ ವ್ಯವಸ್ಥೆಯ ಹೊರಗಿನ ವಿಶೇಷ ಪರಿಣತ ಸಂಸ್ಥೆಗಳಲ್ಲಿ, ಪ್ರಯೋಗಾಲಯಗಳಲ್ಲಿ. ಅಧ್ಯಾಪನ – ಸಂಶೋಧನೆಗಳ ನಡುವಣ ಅಸಂಬಂಧವು ನಮ್ಮಲ್ಲಿ ವಸಾಹತುಶಾಹಿಯ ಬಳುವಳಿಯೂ ಇರಬಹುದು; ಆದರೆ ಅದನ್ನು ಬದಲಿಸದೆ ಹಾಗೇ ಇಟ್ಟುಕೊಂಡಿರುವುದೊಂದು ನ್ಯೂನತೆ.




ಗುಣಮಟ್ಟದ ಮಾತು ಹಿಂದೆ ಕೇಳಿಬರುತ್ತಿರಲಿಲ್ಲ, ಈಗ ಅದರ ಬಗ್ಗೆ ಚಿಂತನೆ ನಡೆದಿದೆ. ಅದೇ ಒಂದು ಒಗಟು. ವಿದ್ಯಾರ್ಥಿಗಳು – ಪೋಷಕರು ಅದನ್ನು ಕುರಿತು ವಿಚಾರ ಮಾಡತೊಡಗಿದ್ದಾರೆ. ವಿದ್ಯಾರ್ಜನೆಗೆಂದು ಹಣ ತೊಡಗಿಸುವವರು ಉನ್ನತ ಗುಣಮಟ್ಟ ನಿರೀಕ್ಷಿಸುವುದು ಸಹಜ. ಇದು ಮಾರುಕಟ್ಟೆಯ ಪದ್ಧತಿ ಮತ್ತು ಶಿಕ್ಷಣವು ಮಾರುಕಟ್ಟೆಯ ಸರಕಾಗಿದೆ. ವಿಶೇಷತಃ ಖಾಸಗಿ ವಲಯದಲ್ಲಿ ಇದು ಹೆಚ್ಚು ಪ್ರಸ್ತುತ. ಆ ವಲಯವು ಉನ್ನತ ಶಿಕ್ಷಣದ ವಿಸ್ತರಣೆಗೆ ತನ್ನ ಪಾಲು ನೀಡಿದೆ; ಸರ್ಕಾರವು ವಿಸ್ತರಣೆಗೆ ಹಣ ತೊಡಗಿಸಲು ಅಸಮರ್ಥವಾದಾಗ ಖಾಸಗಿ ವಲಯ ಅದನ್ನು ಮಾಡಿದೆ. ಕೆಲಮಟ್ಟಿಗೆ ಈ ವಲಯದ ಶಿಕ್ಷಣ ಸಂಸ್ಥೆಗಳು ಸರ್ಕಾರಿ ವಲಯದ ಸಂಸ್ಥೆಗಳಿಗಿಂತ ಹೆಚ್ಚು ಸೃಜನಾತ್ಮಕವಾಗಿದ್ದು ಬಿಗಿತನದಿಂದ ಬಿಡಿಸಿಕೊಂಡಿವೆ. ಆರ್ಥಿಕತೆ ಮತ್ತು ಉದ್ಯಮ ಹಾಗೂ ಬದಲಾದ ಉದ್ಯೋಗಗಳ ಸನ್ನಿವೇಶದಲ್ಲಿ ಅವು ಬೇಗನೆ ಹೊಂದಿಕೊಳ್ಳುವ ನಾವೀನ್ಯ ಪ್ರಕಟಿಸಿವೆ. ಆದ್ದರಿಂದ ಸರ್ಕಾರಿ ವಲಯದ ಸಾಂಪ್ರದಾಯಿಕ ವಿಶ್ವವಿದ್ಯಾಲಯ ವ್ಯವಸ್ಥೆಗೆ ಗರಬಡಿದು ದಿಮ್ಮನೆ ಕುಳಿತಾಗ ಈ ಖಾಸಗಿ ವಲಯವು ಪರ್ಯಾಯವನ್ನು ಒದಗಿಸಿದೆಯೆಂಬ ಹೊಗಳಿಕೆ ಆಗಾಗ ಕೇಳಿಬರುತ್ತದೆ. ಆದರೆ ಖಾಸಗೀಕರಣವು ತನ್ನದೇ ದ್ವಂದ್ವಗಳನ್ನು ಹೊಂದಿದೆ. ಮಾರುಕಟ್ಟೆಯ ನಿಯಮದಿಂದ ನಿಯಂತ್ರಿತವಾಗಿ ಈ ವಲಯವು ಉನ್ನತ ಶಿಕ್ಷಣವನ್ನು ಸಂಪೂರ್ಣವಾಗಿ ಒಂದು ಸರಕನ್ನಾಗಿಸಿದೆ. ಬಹುತೇಕ ಶಿಕ್ಷಣೋದ್ಯಮಿಗಳು ಹಣದ ಶೇಖರಣೆಗೆ ಅನುವಾಗುವ ವಿಭಾಗಗಳನ್ನೇ ಆಯ್ದುಕೊಳ್ಳುತ್ತಾರೆ. ಕೆಲವು ಖಾಸಗಿ ಸಂಸ್ಥೆಗಳು ಎಷ್ಟು ವ್ಯಾಪಾರೀಕರಣಗೊಂಡಿವೆಯೆಂದರೆ ತಮಗೆ ಚೈತನ್ಯವಿರುವಷ್ಟು ಹಣ ನೀಡಿ ಉತ್ತಮ ಶಿಕ್ಷಣ ಪಡೆಯಬಹುದೆಂದು ಬಗೆಯುವ ಹುಂಬರಿಗೆ ಮಣ್ಣು ಮುಕ್ಕಿಸಿವೆ. ಮೊದಲೇ ಈ ದೇಶಗಳು ಅಸಮಾನತೆಯ ಆಗರ; ಅಂಥ ಕಡೆ ಖಾಸಗೀಕರಣವು ಹಿಂದುಳಿದಿರುವವರಿಗೆ ವಿಶೇಷ ಸೌಲಭ್ಯ ಒದಗಿಸಿ, ಅವರ ಪರವಾಗಿ ನಿಂತು ಸಮಾನತೆಗಾಗಿ ಶ್ರಮಿಸುವುದು ದೂರದ ಮಾತು. ಬದಲಾಗಿ, ಅವರಿಗೆ ಮುಗ್ಗಟ್ಟು ಹೆಚ್ಚುತ್ತದೆ, ಶಿಕ್ಷಣವು ಕೈಗೆಟುಕದಂತಾಗುತ್ತದೆ. ಗುಣಮಟ್ಟವನ್ನು ಕಾಯ್ದುಕೊಂಡೇ ಸಮಾನತೆಯನ್ನು ಪಡೆದುಕೊಳ್ಳುವುದು ಹೇಗೆ ? ಅಭಿವೃದ್ಧಿನಿರತ ದೇಶಗಳ ಉನ್ನತ ಶಿಕ್ಷಣಕ್ಕಿರುವ ಸವಾಲು ಇದು.



ಸಾಮಾಜಿಕ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿರ್ವಹಿಸಲು ಪ್ರಜಾಪ್ರಭುತ್ವವು ಗಟ್ಟಿಯಾಗಿರುವ ಅಭಿವೃದ್ಧಿನಿರತ ದೇಶಗಳಲ್ಲಿ ಸಹ ಸ್ವಯಂ-ನಿಯಂತ್ರಣಕ್ಕಾಗಲಿ ಬಹಿರ್ನಿಯಂತ್ರಣಕ್ಕಾಗಲಿ ಸೂಕ್ತ ಏರ್ಪಾಟು ಮಾಡಿಕೊಳ್ಳಲಾಗಿಲ್ಲ. ಅದಕ್ಕೂ ಸರ್ಕಾರದ್ದೆ ಮಧ್ಯಪ್ರವೇಶ. ಕೆಲವೇಳೆ ಧನಸಹಾಯ ನೀಡುವ ಆಯೋಗಗಳು ಇದನ್ನು ಮಾಡುತ್ತವೆ. ನೂರಾರು ವಿಶ್ವವಿದ್ಯಾಲಯಗಳು, ಸಹಸ್ರಾರು ಕಾಲೇಜುಗಳಿರುವ ಬೃಹತ್ ಶೈಕ್ಷಣಿಕ ವ್ಯವಸ್ಥೆಗಳಲ್ಲಿ ಇದಕ್ಕೆ ಸಮಯವೆಲ್ಲಿ, ಹಣವೆಲ್ಲಿ? ಆದ್ದರಿಂದ ಸೂಚಿತ ಸೂತ್ರವನ್ನು ಅನುಸರಿಸಲಾಗುತ್ತದೋ ಇಲ್ಲವೋ ಎಂಬುದನ್ನು ಅರಿಯಲಾಗುವುದಿಲ್ಲ – ಇನ್ನು ಗುಣಮಟ್ಟದ ನಿಯಂತ್ರಣ ಎಲ್ಲಿಯದು ! ಖಾಸಗಿ ಸಂಸ್ಥೆಗಳು ಕ್ರಮೇಣ ಯಾರ ಹಿಡಿತಕ್ಕೂ ಸಿಗದೆ ಹೋಗುತ್ತವೆ. ಸರ್ಕಾರದ ಅಧೀನದಲ್ಲಿರುವುದು, ಆದರ ನಿಯಮಾವಳಿ ಅನುಸರಿಸುವುದು, ಇದು ಕಡೆಗೆ ಭ್ರಷ್ಟಾಚಾರದ ಕೂಪಕ್ಕೆ ವ್ಯವಸ್ಥೆಯನ್ನು ತಳ್ಳಿದೆ. ಒಟ್ಟಿನಲ್ಲಿ, ಒಂದೆಡೆ ಮಾರುಕಟ್ಟೆಯೆಂಬ ದೈತ್ಯ, ಇನ್ನೊಂದೆಡೆ ಭ್ರಷ್ಟಾಚಾರವೆಂಬ ಅಪಾರವಾದ ಸಾಗರ !

ಸಾರಾಂಶವೇನೆಂದರೆ, ಸರ್ಕಾರವು ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳಕೂಡದು; ಬದಲಾಗಿ, ಜನ ಸಮುದಾಯಕ್ಕೆ ಒಳ್ಳೆಯ ಗುಣಮಟ್ಟದ ಶಿಕ್ಷಣವನ್ನು ಒದಗಿಸಬೇಕು. ಇದರಲ್ಲಿ ಒಂದು ಇಬ್ಬಂದಿ ಏರ್ಪಾಟಾಗಿದೆ : ಸರ್ಕಾರದಿಂದ ಅನುದಾನ ಪಡೆಯುವ ಸಂಸ್ಥೆಗಳು ಖಾಸಗಿ ಮಾಲಿಕತ್ವದ ಸಂಸ್ಥೆಗಳೊಡನೆ ಸ್ಪರ್ಧಿಗಿಳಿಯಬೇಕು. ಸರ್ಕಾರವು ಪಠ್ಯಗಳನ್ನು ಆಧುನೀಕರಿಸದೆ ಹಳೆಯ ಪದ್ಧತಿಗೆ ಜೋತುಬಿದ್ದರೆ ಶಿಕ್ಷಣಾರ್ಥಿಗಳ ಬದಲು ನಿರಾಸಕ್ತರು ಪ್ರವೇಶ ಪಡೆಯುತ್ತಾರೆ, ಉದ್ಯೋಗಗಳಿಗೆ ಅರ್ಹತೆ ಪಡೆಯುವುದಿಲ್ಲ. ಹೋಗಲಿ, ಪಠ್ಯಗಳನ್ನು ಆಧುನಿಕೀಕರಿಸಲು ಇಚ್ಛಿಸುತ್ತದೆಂದಾದರೆ ಆಗ ಸರ್ಕಾರವು ಖಾಸಗಿ ವಲಯವನ್ನು ಅನುಕರಿಸಬೇಕಾಗುತ್ತದೆ; ಅದರಿಂದ ತನ್ನ ಮೂಲಭೂತ ಅಸ್ತಿತ್ವದ ಸಮರ್ಥನೆಯನ್ನು ಕಳೆದುಕೊಳ್ಳುತ್ತದೆ. ಇನ್ನು ಶುಲ್ಕದ ವಿಷಯ : ಕಡಿಮೆ ಶುಲ್ಕ ವಿಧಿಸಿದರೆ ಸಮಾಜದ ಉಳ್ಳ ವರ್ಗದವರಿಗೆ ಅನಗತ್ಯ ಧನಬೆಂಬಲ ನೀಡಿದಂತಾಗುತ್ತದೆ ಮತ್ತು ಹೆಚ್ಚಿಸಿದರೆ ಸಮಾಜದ ಪತಿತವರ್ಗವನ್ನು ಸೆಳೆದುಕೊಳ್ಳಲು ಸೋಲುತ್ತದೆ. ಈ ದ್ವಂದ್ವವನ್ನೆದುರಿಸಲು ಪ್ರಭುತ್ವಕ್ಕೆ ಸಾಧ್ಯವಾಗಿಲ್ಲವಾಗಿ ಅಭಿವೃದ್ಧಿನಿರತ ದೇಶಗಳಲ್ಲಿ ಉನ್ನತ ಶಿಕ್ಷಣವು ಡೋಲಾಯಮಾನ ಸ್ಥಿತಿಯಲ್ಲಿದೆ.

**ಅಂತರರಾಷ್ಟ್ರೀಕರಣದ ಪರಿಣಾಮ**

ಪರಿಮಾಣ ಮತ್ತು ಗುಣಮಟ್ಟ, ಎರಡನ್ನೂ ಸರಿದೂಗಿಸಲು ಉನ್ನತ ಶಿಕ್ಷಣವನ್ನು

ಅಂತರರಾಷ್ಟ್ರೀಕರಣಗೊಳಿಸುವುದು ಸಿದ್ಧೌಷಧಿಯೆಂಬುದು ಕೆಲವರ ಅಂಬೋಣ. ಅಂದರೆ, ವಿದೇಶಿ ಶೈಕ್ಷಣಿಕ ಉದ್ಯಮಿಗಳಿಗೆ ಸ್ವಾಗತ ಕೋರಬೇಕೆಂದರ್ಥ. ವಿಶ್ವ ವ್ಯಾಪಾರ ಸಂಸ್ಥೆಯ ೧೯೯೫ರ ಒಪ್ಪಂದದಲ್ಲಿ ಸೇವಾಕ್ಷೇತ್ರವನ್ನು ತೆರವುಗೊಳಿಸುವುದು ಒಂದು ವಿಧಿ; ಅದಕ್ಕೆ ಸಹಿ ಹಾಕಿರುವ ದೇಶಗಳಲ್ಲಿ ಈ ಬಗ್ಗೆ ನಿಯಮಾವಳಿಗಳನ್ನು ಇನ್ನೂ ರೂಪಿಸಿಲ್ಲ. ಹೊಸ ವಿಶ್ವವಿದ್ಯಾಲಯಗಳ ಸ್ಥಾಪನೆ, ಸ್ಥಳೀಯ ಕೇಂದ್ರಗಳನ್ನು ತೆರೆಯುವುದು, ಇವೆರಡರ ಮಿಶ್ರಣ, ಹೀಗೆ ಅಂತರರಾಷ್ಟ್ರೀಯಗೊಳಿಸುವುದರಲ್ಲಿ ಅನೇಕ ಬಗೆಗಳಿವೆ. ಪ್ರಸಿದ್ಧವಲ್ಲದ ಎಷ್ಟೋ ಸಂಸ್ಥೆಗಳು ಭಾರತದಂತಹ ದೇಶಗಳಿಗೆ ನುಗ್ಗಲು ತುದಿಗಾಲಲ್ಲಿ ನಿಂತಿವೆ; ಅವು ಗುಣಮಟ್ಟಕ್ಕಿಂತ ಇಂಗ್ಲಿಷ್ ಉಳ್ಳ ದೇಶದವೆಂಬುದಷ್ಟೇ ಖ್ಯಾತಿಗೆ ಭಾಜನ. ಅಭಿವೃದ್ಧಿನಿರತ ದೇಶದಲ್ಲಿ ತಮ್ಮ ಗುಜರಿ ಸರಕು ಮಾರಲು ಇವು ತವಕಿಸುತ್ತಿವೆ. ಇದು ಸಾಧಕವೋ ಬಾಧಕವೋ ಎಂಬ ಪ್ರಶ್ನೆ ಪ್ರಸ್ತುತ. ಖ್ಯಾತ ಸಂಸ್ಥೆಗಳು ಬರದೆ, ಕೇವಲ 'ವಿದೇಶಿ' ನಾಮಫಲಕ ಹೊತ್ತಿರುವ ಕಳಪೆದರ್ಜೆಯ ವಿಶ್ವವಿದ್ಯಾಲಯಗಳು ಬಂದರೆ ಅಭಿವೃದ್ಧಿನಿರತ ದೇಶಗಳಿಗೆ ಭಾರಿ ಹೊರೆಯಾಗುತ್ತದೆ. ಅಭಿವೃದ್ಧಿಯ ಗಂಧವೂ ಇರುವುದಿಲ್ಲ; ಬದಲಾಗಿ ಅದಕ್ಕೆ ಮಾರಕವಾಗುತ್ತವೆ. ಸಾಂಸ್ಕೃತಿಕ ಅಂತಃಪ್ರಜ್ಞೆಗೂ ಇದು ಧಕ್ಕೆಯುಂಟು ಮಾಡುತ್ತದೆ. ಇದು ಜಾಗತೀಕರಣವನ್ನು ವಿರೋಧಿಸುವವರ ಊಹಾಲೋಕದ ಆತಂಕವೆಂದು ಸುಮ್ಮನೆ ತಳ್ಳಿಹಾಕಲಾಗದು. ಜಾಗತೀಕರಣಕ್ಕೆ ಮುಂಚೆಯೂ ಬೌದ್ಧಿಕ ಶಕ್ತಿಯ ಹರಿವನ್ನು ಗುರುತಿಸಲಾಗಿತ್ತು. ಅದು ಅಭಿವೃದ್ಧಿನಿರತ ದೇಶದಿಂದ ಅಭಿವೃದ್ಧ ದೇಶಕ್ಕೆ ಮಹಾನ್ ಕೊಡುಗೆ. ಚೀಣಾ ಮತ್ತು ಭಾರತದಿಂದ ವಿದೇಶಗಳಿಗೆ ಹೋಗುವ ವಿದ್ಯಾರ್ಥಿಗಳಲ್ಲಿ ಸುಮಾರು ಶೇ. ೮೦ರಷ್ಟು ಮಂದಿ ಸ್ವದೇಶಗಳಿಗೆ ಮರಳುವುದಿಲ್ಲ. ಅಭಿವೃದ್ಧಿನಿರತ ದೇಶಗಳ ಎರಡು ಲಕ್ಷಕ್ಕೂ ಹೆಚ್ಚು ವಿದ್ವಾಂಸರು ಹೊರದೇಶಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ೨೦೦೯ರ ಮಾನವ ಅಭಿವೃದ್ಧಿ ವರದಿ ತಿಳಿಸುವಂತೆ, ವಿದ್ಯಾವಂತರು ಹೆಚ್ಚು ದೂರ ಹೋಗುತ್ತಾರೆ, ಅಭಿವೃದ್ಧ ದೇಶಗಳಲ್ಲಿ ನೆಲೆಸುತ್ತಾರೆ; ಅವಿದ್ಯಾವಂತರು ಹೆಚ್ಚೆಂದರೆ ನೆರೆಯ ಇನ್ನೊಂದು ಅಭಿವೃದ್ಧಿನಿರತ ದೇಶಕ್ಕೆ ಹೋಗುತ್ತಾರೆ. ಉದಾಹರಣೆಗೆ, ಭಾರತ ಮತ್ತು ನೈಜೀರಿಯಾದಿಂದ ಓಯಿಸೀಡಿ ದೇಶಗಳಿಗೆ ಹೋಗಿರುವವರಲ್ಲಿ ಕ್ರಮವಾಗಿ ಶೇ. ೫೧.೨ ಮತ್ತು ೫೩.೧ ಮಂದಿ ಉನ್ನತ ಶಿಕ್ಷಣ ಪಡೆದವರು; ಫಿಲಿಫೈನ್ಸ್ ಮತ್ತು ಚೀಣಾದ ಶೇ. ೪೫.೯ ಮತ್ತು ೩೯.೪ ಇದೇ ಹಿನ್ನೆಲೆಯವರು.

ಭಾರತದಲ್ಲಿ ಐ.ಐ.ಟಿ.ಗಳಂತಹ ಸಂಸ್ಥೆಗಳಿಗೆ ಸರ್ಕಾರವು ನೀಡುವ ಧನಸಹಾಯ ನಿರರ್ಥಕವೆಂಬ ಟೀಕೆ ಮೊದಲಿನಿಂದಲೂ ಇದ್ದದ್ದೇ; ಏಕೆಂದರೆ, ಇಲ್ಲಿ ಶಿಕ್ಷಣ ಪಡೆದವರು ಮೇಯಲು ಹೋಗುವುದು ಹುಲುಸಾದ ಬೇರೆ ಹುಲ್ಲುಗಾವಲುಗಳಿಗೆ; ಅಂದರೆ ಅಭಿವೃದ್ಧ ದೇಶಗಳಿಗೆ. ನಮ್ಮ ಸಂಪನ್ಮೂಲಗಳು ಮೊದಲೇ ಕಡಿಮೆ; ಅಂಥದರಲ್ಲಿ ಐ.ಐ.ಟಿ.ಗಳಿಗಾಗಿ ಈ ರೀತಿಯ ದುಂದುವೆಚ್ಚ ಆರ್ಥಿಕವಾಗಿ, ನೈತಿಕವಾಗಿ, ಅಸಮರ್ಥನೀಯ. ನಮ್ಮ ಶಾಲಾ ಶಿಕ್ಷಣವಿನ್ನೂ ಸಾರ್ವತ್ರಿಕಗೊಂಡಿಲ್ಲದಿರುವಾಗ, ಉನ್ನತ ಶಿಕ್ಷಣವಿನ್ನೂ ಅತಂತ್ರವಾಗಿರುವಾಗ ಹೀಗೆ ಹಣ ಪೋಲು ಮಾಡಬಹುದೆ? ಬೌದ್ಧಿಕ ಹೊರಹರಿವಿಗೆ ಏನೇನೋ ಕಾರಣಗಳನ್ನು ನೀಡಲು ಸಾಧ್ಯ; ಉತ್ತಮ ವೇತನ, ಉತ್ತಮ ಸನ್ನಿವೇಶ, ಉತ್ತಮ ಅವಕಾಶ ಇತ್ಯಾದಿ. ಆದರಿಂದ ಅಭಿವೃದ್ಧ ದೇಶಗಳಿಗೆ ಬೌದ್ಧಿಕ ವಲಸೆಯಾದರೆ ಅಭಿವೃದ್ಧಿನಿರತ ದೇಶಗಳಿಂದ ಹೊರಹೋಗಲು ಪ್ರೇರಣೆಗಳೆಂದು ಕಡಿಮೆ ವೇತನ ಮುಂತಾದುವನ್ನು ಹೆಸರಿಸುವುದು ರೂಢಿ. ಅಷ್ಟಕ್ಕೂ ಪ್ರಜಾಪ್ರಭುತ್ವದಡಿ ಮುಕ್ತ ಸಂಚಾರವು ಸಹಜವೇ ಅಲ್ಲವೆ, ಎಂಬ ಸಮಜಾಯಿಷಿಯೂ ಇದೆ. ಹೀಗೆ ಹೊರಹೋದವರಿಂದ ಚೀಣಾ, ಭಾರತ, ಫಿಲಿಪ್ಪೈನ್ಸ್ ಮುಂತಾದ ದೇಶಗಳಿಗೆ ಸಾಕಷ್ಟು ಹಣ ರವಾನೆಯಾಗುತ್ತಿದೆ. ಚೀಣಾದ ಒಟ್ಟು ಉತ್ಪಾದನೆಯಲ್ಲಿ ಅದು ಕೇವಲ ಶೇ. ೧.೧, ಭಾರತದಲ್ಲಿ ಶೇ. ೩.೧ ಮತ್ತು ಫಿಲಿಪ್ಪೈನ್ಸ್‌ಗೆ ಶೇ. ೧೧.೬. ಅಲ್ಲದೆ, ಚೀಣಾ ಮತ್ತು ಭಾರತಕ್ಕೆ ಹಾಗೆ ಬರುವ ಹಣದಲ್ಲಿ ಶೇ. ೬೧.೯ ಮತ್ತು ಶೇ. ೫೮.೨ರಷ್ಟು ಬರುವುದು ಏಷ್ಯಾ ದೇಶಗಳಲ್ಲಿರುವ ವಲಸಿಗರಿಂದ. ಉತ್ತರ ಅಮೆರಿಕಾದಿಂದ ಬರುವುದು ಕೇವಲ ಫಿಲಿಪ್ಪೈನ್ಸ್‌ಗೆ : ಶೇ. ೬೬.೨.

ಅಭಿವೃದ್ಧ ಮತ್ತು ಅಭಿವೃದ್ಧಿನಿರತ ದೇಶಗಳ ನಡುವಣ ಅಂತರರಾಷ್ಟ್ರೀಕರಣದ ಬಗ್ಗೆ ಇಷ್ಟೆಲ್ಲಾ ಚರ್ಚೆ ನಡೆಯುತ್ತಿರುವಾಗ ಉನ್ನತ ಶಿಕ್ಷಣದ ಕ್ಷೇತ್ರದಲ್ಲಿ ಪ್ರಾದೇಶಿಕ ಸಹಕಾರ ತತ್ತ್ವವನ್ನು ಅಭಿವೃದ್ಧಿನಿರತ ದೇಶಗಳು ತಮ್ಮತಮ್ಮಲ್ಲೇ ಏಕೆ ಅಳವಡಿಸಿಕೊಳ್ಳಬಾರದೆಂಬ ಪ್ರಶ್ನೆಯನ್ನು ಗಹನವಾಗಿ ವಿಚಾರ ಮಾಡಿಲ್ಲ. ಆ ಪೈಕಿ ಕೆಲವು ದೇಶಗಳಲ್ಲಿ ಉನ್ನತ ಶಿಕ್ಷಣಕ್ಕೆ ದೀರ್ಘ ಇತಿಹಾಸವಿದೆ, ವಿಶಾಲ ತಳಹದಿ ಇದೆ; ಆದ್ದರಿಂದ ಪುಟ್ಟ ದೇಶಗಳಿಗೆ ಇವು ಸಹಾಯಹಸ್ತ ಚಾಚಲು ಅವಕಾಶವಿದೆ. ತಡವಾಗಿ ಎಚ್ಚೆತ್ತ ದೇಶಗಳು ಇದರಿಂದ ಲಾಭ ಗಳಿಸಿಕೊಳ್ಳಲು ಸಾಧ್ಯ. ಅಂತರ ವಿಶ್ವವಿದ್ಯಾಲಯಗಳ, ಅಂತರ ಸಾಂಸ್ಥಿಕ, ಸಹಕಾರಕ್ಕೆ ಅಭಿವೃದ್ಧಿನಿರತ ದೇಶಗಳಲ್ಲಿ ಬೇಕಾದಷ್ಟು ಸಾಧ್ಯತೆಗಳಿವೆ. ಅದಕ್ಕೆ ಪ್ರಾದೇಶಿಕ ಮಟ್ಟದಲ್ಲಿ ಸಮಸ್ಯೆಗಳನ್ನು ಪರಿಹರಿಸಲು ವಿಶಾಲವಾದ ಮನಸ್ಸು ಬೇಕು. ಸದ್ಯದ ಪರಿಸ್ಥಿತಿಯಲ್ಲಿ ಇದೊಂದು ವೃಥಾ ಕನಸು, ಏಕೆಂದರೆ ಅಧಿಕಾರ ರಾಜಕೀಯವು ತನ್ನ ಕಪಿಮುಷ್ಟಿಯನ್ನು ಸಡಿಲಿಸುವುದಿಲ್ಲ. (ಅಂತರರಾಷ್ಟ್ರೀಯವಾಗಿ ಅಧಿಕಾರ ಎಲ್ಲಿ ಕೇಂದ್ರೀಕೃತವಾಗಿದೆಯೆಂದು ಬಿಡಿಸಿ ಹೇಳಬೇಕಾಗಿಲ್ಲವಷ್ಟೆ.)

ಡಾ|| ಎನ್. ಜಯರಾಂ
ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಸೈನ್ಸಸ್, ಪಿಬಿ ೮೩೧೩, ದೇವನಾರ್
ಮುಂಬಯಿ - ೪೦೦ ೦೮೮

(೨೦೧೦ರ ಮೇ ೨೦ರಿಂದ ೨೨ರವರೆಗೆ ಕೆನಡಾದ ವಾಂಕೂವರ್‌ನಲ್ಲಿ ಬ್ರಿಟಿಷ್ ಕೊಲಂಬಿಯ ವಿಶ್ವವಿದ್ಯಾನಿಲಯ ಮತ್ತು ಆಲ್ಬರ್ಟ ವಿ.ವಿ.ಗಳ ಜಂಟಿ ಆಶ್ರಯದಲ್ಲಿ ಜಿ-೮ ವಿಶ್ವವಿದ್ಯಾಲಯ ಶೃಂಗಸಭೆ (ಕೆನಡ) ಜರುಗಿತು. ಅಲ್ಲಿ 'ಸಮರ್ಥ ಉನ್ನತ ಶಿಕ್ಷಣ ನೀತಿ'ಯನ್ನು ಕುರಿತ ಗೋಷ್ಠಿಯಲ್ಲಿ ನೀಡಲಾದ ಆಶಯ ಭಾಷಣ ಇದು.)

*ಉದ್ಧಟತನ ಮುಂದುವರಿಸುತ್ತಿರುವ...* *(೩೮ನೇ ಪುಟದಿಂದ)*

ಆದರೆ ಇಸ್ರೇಲಿನ ಮೊಂಡುತನದಿಂದ ಅದು ಕಾರ್ಯಗತವಾಗುತ್ತಿಲ್ಲ. ಇಸ್ರೇಲಿನ ಎಲ್ಲ ಉದ್ಧಟತನದ ಕ್ರಮಗಳನ್ನು ಅಮೆರಿಕಾ ಬೆಂಬಲಿಸುತ್ತಿರುವುದೇ ಇದಕ್ಕೆ ಕಾರಣ.

ಇಂದು ಪರಿಸ್ಥಿತಿ ಹೇಗಿದೆ ಎಂದರೆ ಪ್ಯಾಲಸ್ಟೈನ್ ಪ್ರದೇಶ ವಸ್ತುಶಃ ಇಸ್ರೇಲಿನ ಆಕ್ರಮಣದಲ್ಲಿದೆ. ಪ್ಯಾಲಸ್ತೀನಿಯನ್ನರಲ್ಲೇ ಒಡಕು ತರುವುದರಲ್ಲಿ ಯಶಸ್ವಿಯಾಗಿರುವ ಇಸ್ರೇಲ್, ಅತ್ಯಲ್ಪ ವಿರೋಧವನ್ನು ಹೊಸಕಿಹಾಕಲು ನೋಡುತ್ತಿದೆ. ಗಾಜಾಪಟ್ಟಿ ಪ್ರದೇಶದಲ್ಲಿ ಹಮಾಸ್ ತಂಡದ ಪ್ರತಿರೋಧವನ್ನು ಎಲ್ಲ ರೀತಿಯಿಂದಲೂ ದಮನ ಮಾಡಲು ನೋಡುತ್ತಿದೆ. ಸ್ವತಂತ್ರ ಚುನಾವಣೆಗಳಲ್ಲಿ ಬಹುಮತದಿಂದ ಅಧಿಕಾರಕ್ಕೆ ಬಂದ ಹಮಾಸ್ ತಂಡದ ಮೇಲೆ ಆಡಳಿತ ನಡೆಸಲಾಗದಂಥ ಅಡೆತಡೆಗಳನ್ನು ಒಡ್ಡುತ್ತಿದೆ. ಸದ್ಯದ ಪರಿಸ್ಥಿತಿಯಲ್ಲಿ ಪ್ಯಾಲಸ್ಟೈನ್ ಸ್ವಾಯತ್ತ ಪ್ರದೇಶದ ಜನತೆ ಹೆಚ್ಚಿನ ಮಟ್ಟಿಗೆ ಇಸ್ರೇಲಿನ ಮೇಲೆ ಅವಲಂಬಿತವಾಗಿರಬೇಕಾಗಿದೆ. ಸಣ್ಣಪುಟ್ಟ ಕಾರಣಗಳಿಗೆಲ್ಲ ಇಸ್ರೇಲ್ ಸೈನಿಕರು ಪ್ಯಾಲಸ್ಟೈನಿಯನ್ನರ ಮೇಲೆ ದಾಳಿ ನಡೆಸುತ್ತಿರುತ್ತಾರೆ. ಕಳೆದ ಮೂರು ವರ್ಷಗಳಿಂದ ಇಸ್ರೇಲ್ ಗಾಜಾಪಟ್ಟಿ ಪ್ರದೇಶದ ಮೇಲೆ ಆರ್ಥಿಕ ದಿಗ್ಬಂಧನ ವಿಧಿಸಿದೆ. ಅಲ್ಲಿ ವಾಸಿಸುತ್ತಿರುವ ಸುಮಾರು ಒಂದೂವರೆ ಮಿಲಿಯ ಪ್ಯಾಲಸ್ತೀನಿಯನ್ನರು ಅಸಹನೀಯವಾದ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ವಿಶ್ವಸಂಸ್ಥೆಯು ಇದರ ಬಗ್ಗೆ ಏನನ್ನೂ ಮಾಡದಿರುವುದು ಶೋಚನೀಯ. ಇತ್ತೀಚೆಗೆ ಈ ಪ್ರದೇಶಕ್ಕೆ ನೆರವಿನ ಸಾಮಗ್ರಿಗಳನ್ನು ಹೊತ್ತುತರುತ್ತಿದ್ದ ನೌಕೆಯ ಮೇಲೆ ಇಸ್ರೇಲಿ ಹೆಲಿಕಾಪ್ಟರುಗಳು ದಾಳಿ ನಡೆಸಿದವು. ಹತ್ತೊಂಬತ್ತು ಮಂದಿ ಅಮಾಯಕ ಸ್ವಯಂಸೇವಕರು ಸಾವನ್ನಪ್ಪಿದರು, ಉಳಿದವರನ್ನು ಇಸ್ರೇಲ್ ಬಂಧಿಸಿತು. ವಿಶ್ವಸಂಸ್ಥೆಯ ಭದ್ರತಾಮಂಡಳಿಯು ಈ ಘಟನೆಯ ಬಗ್ಗೆ ಮೃತರಿಗೆ ಸಂತಾಪ ಸೂಚಿಸಿ, ಇಸ್ರೇಲಿನ ವರ್ತನೆಯನ್ನು ಮೃದುವಾಗಿ ಖಂಡಿಸಿತೇ ಹೊರತು ಬೇರೇನೂ ಕ್ರಮ ಕೈಗೊಳ್ಳಲಿಲ್ಲ. ಮಾನವೀಯ ಹಕ್ಕುಗಳನ್ನು ಸತತವಾಗಿ ಉಲ್ಲಂಘಿಸುತ್ತಿರುವ ಇಸ್ರೇಲಿನ ಮೇಲೆ ಕ್ರಮ ಕೈಗೊಳ್ಳಲಾಗದ ಸ್ಥಿತಿಯಲ್ಲಿ ವಿಶ್ವಸಂಸ್ಥೆ ಇರುವುದು ದುರಂತವೇ ಸರಿ. ಈ ದಾಳಿ ಪ್ರಕರಣದ ನಂತರ ಇಸ್ರೇಲ್ ಐರ್ಲೆಂಡಿನಿಂದ ನೆರವು ಸಾಮಗ್ರಿ ತರುತ್ತಿದ್ದ ಇನ್ನೊಂದು ನೌಕೆಯನ್ನು ತಡೆಹಿಡಿದಿದೆ. ಆದರೂ ಅಂತರರಾಷ್ಟ್ರೀಯ ಸಮುದಾಯ ತೆಪ್ಪಗಿದೆ. ಇನ್ನೆಷ್ಟು ಕಾಲ ಇಸ್ರೇಲಿನ ಈ ಬಗೆಯ ಪುಂಡಾಟಿಕೆಯನ್ನು ಸಹಿಸಿಕೊಂಡಿರಬೇಕು ? ನಾಗರಿಕ ಜಗತ್ತು ಇದಕ್ಕೆ ಉತ್ತರಿಸಬೇಕಾಗಿದೆ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ತಿಗುಪ್ಪೆ, ಬೆಂಗಳೂರು -೫೬೦ ೦೮೫

# ಆಧುನಿಕತೆ ಮತ್ತು ಸಾಹಿತ್ಯ ಸಂವಹನ

ಡಾ॥ ಎಲ್. ಜಿ. ಮೀರಾ

**ಪ್ರಬಲ ಮಾಧ್ಯಮಗಳಾದ ಎಫ್.ಎಂ. ವಾಹಿನಿಗಳು, ಕೇಬಲ್ ವಾಹಿನಿಗಳು, ಸಿನಿಮಾಗಳು, ಪತ್ರಿಕೆಗಳು ಇವುಗಳನ್ನು ಸಾಹಿತ್ಯ ಸಂವಹನಕ್ಕೆ ಅನುಕೂಲವಾಗುವ ರೀತಿಯಲ್ಲಿ ಬಳಸಲು ಸಾಧ್ಯವೇ ? ವ್ಯಾಪಾರೀ ಉದ್ದೇಶಗಳನ್ನು ಮೀರುವುದು ಆ ಮಾಧ್ಯಮಗಳಿಗೆ ಸಾಧ್ಯವಾದೀತೇ ? ಸರ್ಕಾರ ಈ ವಿಚಾರದಲ್ಲಿ ಏನು ಮಾಡಬಹುದು ? ನಮ್ಮ ಹಬ್ಬಗಳಲ್ಲಿ, ನಾವು ಮಾಡುವ ಮದುವೆಗಳಲ್ಲಿ ಕಡಿಮೆ ಆಡಂಬರ ಮತ್ತು ಹೆಚ್ಚು ಸಂಸ್ಕೃತಿಯನ್ನು ತರುವುದು ಸಾಧ್ಯವಾಗಬಹುದೇ ? ಸಂಪ್ರದಾಯದ ಹಾಡುಗಳು, ಆಶು ಕವಿತೆಗಳು, ಒಗಟುಗಳು... ಇವೆಲ್ಲವೂ ದೈನಂದಿನ ಜೀವನದ ಭಾಗವನ್ನಾಗಿ ಮಾಡುವ ನೆಲೆಗಳನ್ನು ನಾವು ಮತ್ತೆ ತರುವುದು ಸಾಧ್ಯವೇ ?**

ಕೈಗಾರಿಕೀಕರಣ, ವಿದ್ಯಾವಂತ ಮಧ್ಯಮವರ್ಗದ ಉದಯ, ಯಂತ್ರಗಳ ಮೇಲೆ ಅವಲಂಬಿತವಾದ ಬದುಕು, ಅವಿಭಕ್ತ ಕುಟುಂಬಗಳು ವಿಘಟನೆಗೊಂಡು ವಿಭಕ್ತ ಕುಟುಂಬಗಳ ಸಾಮಾಜಿಕ ರಚನೆಯುಂಟಾದದ್ದು - ಸಾಮಾನ್ಯವಾಗಿ ಇವುಗಳನ್ನು ನಾವು ಆಧುನಿಕತೆಯ ಪರಿಣಾಮಗಳು ಎಂದು ಗುರುತಿಸುತ್ತೇವೆ. ನಮ್ಮ ಸಂದರ್ಭದಲ್ಲಿ ಇವೆಲ್ಲವುಗಳ ಜೊತೆಗೆ ಮಾಹಿತಿ ತಂತ್ರಜ್ಞಾನದ ಕ್ರಾಂತಿ, ಖಾಸಗೀಕರಣ, ಜಾಗತೀಕರಣ ಇವೂ ಸೇರಿಕೊಂಡಿವೆ. ಇಂತಹ 'ನಮ್ಮ ಕಾಲ'ದಲ್ಲಿ ಸಾಹಿತ್ಯ ಸಂವಹನದ ಸ್ವರೂಪ ಹೇಗಿದೆ ಎಂಬುದರ ಬಗ್ಗೆ ಈ ವಿಚಾರ ಸಂಕಿರಣದಲ್ಲಿ ವಿವಿಧ ಚಿಂತಕರು ಚರ್ಚಿಸಿದ್ದಾರೆ. ನಾನು ಮಂಡಿಸಬೇಕಾದ ಪ್ರಬಂಧದ ವಿಷಯ 'ಆಧುನಿಕತೆ ಮತ್ತು ಸಾಹಿತ್ಯ ಸಂವಹನ'.

'ಆಧುನಿಕತೆ' ಅಂದಾಗ, ಮೇಲೆ ಹೇಳಿದ ಎಲ್ಲ ಅಂಶಗಳು ಬರುತ್ತವೆಯಾದರೂ, ಇಲ್ಲಿ ನಮಗೆ ಪ್ರಸ್ತುತವಿರುವ ಸಾಹಿತ್ಯ ಸಂವಹನದ ವಿಚಾರ ಬಂದಾಗ ಗಣನೆಗೆ ತೆಗೆದುಕೊಳ್ಳಬೇಕಾದ ಅಂಶಗಳು ಅಂದರೆ ಮುದ್ರಣ ತಂತ್ರಜ್ಞಾನ ಮತ್ತು ಸಮೂಹ ಮಾಧ್ಯಮಗಳು. ಡಿಟಿಪಿ ಎಂದು ಕರೆಯಲಾಗುವ ಡೆಸ್ಕ್‌ಟಾಪ್ ಪಬ್ಲಿಷಿಂಗ್ ಇವತ್ತು ಗಣಕಯಂತ್ರದ ಮೂಲಕ ಮುದ್ರಣದ ವೇಗವನ್ನು ಹಲವಾರು ಪಟ್ಟು ಹೆಚ್ಚಿಸಿದೆ. ಇನ್ನು ಅಂತರ್ಜಾಲ ಸಂಪರ್ಕವು ನಮ್ಮ ಕೈಬೆರಳುಗಳ ತುದಿಗಳಲ್ಲಿ ಇಡೀ ಪ್ರಪಂಚಕ್ಕೆ ಸಾವಿರ ಕಿಟಕಿ, ಬಾಗಿಲುಗಳನ್ನು ತೆರೆಯುತ್ತಿದೆ. ಅಂತರ್ಜಾಲ ಪತ್ರಿಕೆಗಳು, ಬ್ಲಾಗ್‌ಗಳು, ಎಲೆಕ್ಟ್ರಾನಿಕ್ ಮ್ಯಾಗಜೀನುಗಳು, ಸಿಡಿಗಳು ''ಏನುಂಟು ಏನಿಲ್ಲ... ಅಂಗೈ ಮೇಲೆ ಇದೆಯಲ್ಲ ಪ್ರಪಂಚವೆಲ್ಲ'' ಎಂಬ ಭಾವನೆಯನ್ನು ಮೂಡಿಸಿರುವ ಕಾಲ ಇದು. ಮೇಲ್ನೋಟಕ್ಕೆ ಎಲ್ಲ ರೀತಿಯ ಸಂವಹನಕ್ಕೆ – ಸಾಹಿತ್ಯ ಸಂವಹನವು ಸೇರಿದಂತೆ – ಯಾವ ರೀತಿಯ ಅಡೆತಡೆಗಳೂ ಇಲ್ಲವಲ್ಲ ಅನ್ನಿಸುವ ಕಾಲ ಇದು. ಪುರಾಣಗಳಲ್ಲಿ ಹೇಳುವ ವಾಯುವೇಗ, ಮನೋವೇಗಗಳನ್ನು ಮೀರಿಸುತ್ತಿರುವ ಕಾಲವೊಂದರಲ್ಲಿ ಬದುಕುತ್ತಿರುವ ನಮಗೆ ಸಂವಹನಕ್ಕೆ ಸಂಬಂಧಿಸಿದಂತೆ ಇದು ಸುಗ್ಗಿಕಾಲ ಅನ್ನಿಸಿದರೆ ಆಶ್ಚರ್ಯವಿಲ್ಲ. ಈ ದೃಷ್ಟಿಯಿಂದ 'ಆಧುನಿಕತೆ ಮತ್ತು ಸಾಹಿತ್ಯ ಸಂವಹನ' ಎಂಬ ವಿಚಾರದ ಚರ್ಚೆ ನಿಜಕ್ಕೂ ಕುತೂಹಲಕರವಾದದ್ದು.

ಇಂತಹ ನಮ್ಮ ಇಲೆಕ್ಟ್ರಾನಿಕ್ ಕಾಲದಿಂದ ಸುಮಾರು ಇನ್ನೂರು ವರ್ಷಗಳ ಹಿಂದಿನ ಕಾಲಕ್ಕೆ ಚಲಿಸೋಣ. ಮುದ್ರಣ ತಂತ್ರಜ್ಞಾನ ಮತ್ತು ಸಮೂಹ ಮಾಧ್ಯಮಗಳು ಇನ್ನೂ ಅಭಿವೃದ್ಧಿಗೊಳ್ಳದ ಓಲೆಗರಿ-ತಾಳೆಗರಿಗಳ ಕಾಲ ಅದು. ಅದನ್ನು ಆಧುನಿಕ ಪೂರ್ವ ಕಾಲ ಅನ್ನುವುದಾದರೆ ಆಗ ಸಾಹಿತ್ಯ ಸಂವಹನ ಹೇಗಿತ್ತು ?

ಹಿರಿಯ ವಿಮರ್ಶಕರಾದ ಹೆಚ್. ಎಸ್. ರಾಘವೇಂದ್ರರಾವ್ ಅವರ 'ಕನ್ನಡ ಕಾವ್ಯದ ವರ್ಣಪಟಲ' ಎಂಬ ಲೇಖನವು ಈ ವಿಷಯದ ಮೇಲೆ ಬೆಳಕು ಚೆಲ್ಲಿದೆ :

'ಅಕ್ಷರರಹಿತ ಲೋಕವು ಕಾವ್ಯರಹಿತ ಲೋಕವಾಗಿರುವುದಿಲ್ಲವೆಂಬ ಸಂಗತಿಯನ್ನು ನೆನಪು ಮಾಡಿಕೊಂಡಾಗ, ನಮ್ಮ ಅಕ್ಷರನಿಷ್ಠ ಲೆಕ್ಕಾಚಾರಗಳ ಮಿತಿಯು ಗೋಚರವಾಗುತ್ತದೆ. ಅದೂ ಅಲ್ಲದೆ ಸಂಸ್ಕೃತಿಯ ಅಧಿಕಾರ ಕೇಂದ್ರಗಳನ್ನು ಹಿಡಿತದಲ್ಲಿಟ್ಟುಕೊಂಡ ಪಂಡಿತ ಪರಂಪರೆಯ ಆಯ್ಕೆಗಳು ನಿರ್ಲಕ್ಷಿಸುವ ನೆಲೆಗಳೇ ಒಟ್ಟು ಸಮುದಾಯದ ಕಾವ್ಯಾನುಭವದ ಸ್ವರೂಪವನ್ನು ನಿಯಂತ್ರಿಸಿರ ಬಹುದೆಂಬ ಸಂಗತಿಯನ್ನು ನಾವು ಮರೆಯುತ್ತೇವೆ.'

(ಪುಟ : ೧೧೭, ಕನ್ನಡ ಕಾವ್ಯದ ವರ್ಣಪಟಲ, ಗಂಧವ್ರತ, ಡಾ॥ ಎಚ್.ಎಸ್. ವೆಂಕಟೇಶಮೂರ್ತಿ ಅಭಿನಂದನ ಗ್ರಂಥ)

ಇಲ್ಲಿ ನಾವು 'ಸಮುದಾಯದ ಕಾವ್ಯಾನುಭವದ ಸ್ವರೂಪ' ಎಂಬ ಮಾತನ್ನು ಗಮನಿಸಬೇಕು. ಮುದ್ರಣ ತಂತ್ರಜ್ಞಾನ, ಸಮೂಹ ಮಾಧ್ಯಮಗಳ ಆಗಮನದ ಮುಂಚೆ ಕರ್ನಾಟಕದ, ಒಟ್ಟು ಭಾರತದ ಬದುಕು ಹಳ್ಳಿಗಳಲ್ಲಿ ಸಮುದಾಯಗಳಲ್ಲಿ ನಡೆಯುತ್ತಿತ್ತು. ದೇವಸ್ಥಾನಗಳಲ್ಲಿನ ಪುರಾಣವಾಚನ, ಹರಿಕಥೆ, ಜಗಲಿಕಟ್ಟೆಗಳಲ್ಲಿ ಗಮಕದ ರೂಪದಲ್ಲಿ ವಾಚಿಸಲ್ಪಡುತ್ತಿದ್ದ ಗದುಗಿನ ಭಾರತ, ಜೈಮಿನಿ ಭಾರತಗಳು, ಜಾತ್ರೆಗಳಲ್ಲಿ ಹೇಳುತ್ತಿದ್ದ ಹಾಡುಗಳು, ಕಥೆಗಳು, ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ ಹುಟ್ಟುತ್ತಿದ್ದ ಜಾನಪದ ಹಾಡುಗಳು, ಕಥೆ ಹೇಳಿ, ಹಾಡು ಹೇಳಿ ಜೀವನೋಪಾಯ ಮಾಡುತ್ತಿದ್ದ ವೃತ್ತಿಗಾಯಕರು, ಮನೆಗಳಲ್ಲಿ ಅಜ್ಜಿ ತಾತಂದಿರು ಮಕ್ಕಳಿಗೆ ಹೇಳುತ್ತಿದ್ದ ಪುರಾಣಕಥೆಗಳು, ಜಾನಪದ ಕಥೆಗಳು, ಅನಕ್ಷರಸ್ಥ ಸಮುದಾಯವು ಹಾಡಿಕೊಳ್ಳುತ್ತಿದ್ದ ವಚನಗಳು, ದಾಸರ ಪದಗಳು, ಸಂಪ್ರದಾಯದ ಹಾಡುಗಳು... ಇವೆಲ್ಲವೂ ಸಮುದಾಯ ಸಂಸ್ಕೃತಿಯ ಭಾಗವಾಗಿದ್ದವು. ಅಕ್ಷರಗಳ ಸಹಾಯವಿಲ್ಲದೆ ಸಾಹಿತ್ಯವು ಜನರನ್ನು ತಲುಪುವ ಅಂದರೆ ಸಂವಹನಗೊಳ್ಳುವ ವಿಧಾನವೊಂದು ನಮ್ಮ ಸಮಾಜದಲ್ಲಿತ್ತು. ಸಂಗ್ಯಾ ಬಾಳ್ಯಾಕ್ಕೆ ಕೀರ್ತಿನಾಥ ಕುರ್ತಕೋಟಿಯವರು ತಾವು ಬರೆದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ :

'ನಮ್ಮ ನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಜಾನಪದ ಜೀವನದ ಅನೇಕ ಚಟುವಟಿಕೆಗಳಲ್ಲಿ ಕಾವ್ಯ ತೀರ ಅವಶ್ಯವಾದ ವಸ್ತುಗಳಲ್ಲೊಂದಾಗಿದೆ. ಉಪಯುಕ್ತತೆಯನ್ನು ಮೀರಿ ಕುಶಲತೆಯನ್ನಷ್ಟೇ ಮೆರೆಯುವ ಕಾವ್ಯ ಅದಲ್ಲ. ಮದುವೆ ಮನೆಗೆ ಬಜಂತ್ರಿಯ ಮೇಳ ಅಗತ್ಯವಾಗಿರುವಂತೆ ಕಾವ್ಯ ಜೀವನದ ಅನೇಕ ಕಾರ್ಯಗಳಿಗೆ ಅಗತ್ಯವಾಗಿರುತ್ತಿದ್ದ ಕಾಲ ಒಂದಿತ್ತು. ಆಧುನಿಕ ಕಾಲದಲ್ಲಿ ಕಾವ್ಯ ಬಹಳಷ್ಟು ಜನರಿಗೆ ನಾಣ್ಯಸಂಗ್ರಹದಂತೆ ಒಂದು ಹವ್ಯಾಸ ಮಾತ್ರವಾಗಿದೆ.'

(ಪುಟ XVI, ಕೀರ್ತಿನಾಥ ಕುರ್ತಕೋಟಿ, ಸಂಗ್ಯಾ ಬಾಳ್ಯಾಕ್ಕೆ ಬರೆದ ಮುನ್ನುಡಿ, ಮನೋಹರ ಗ್ರಂಥಮಾಲೆ, ೧೯೮೦)

ಇಲ್ಲಿ ಕೀರ್ತಿನಾಥ ಕುರ್ತಕೋಟಿಯವರು ಕಥೆ, ಕಾವ್ಯಗಳು ದೈನಿಕ ಜನಜೀವನದ ಭಾಗವೇ ಆಗಿದ್ದ ಕಾಲದ ಬಗ್ಗೆ ಮಾತಾಡುತ್ತಿದ್ದಾರೆ. ನನಗೆ ಈ ಸಂದರ್ಭದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಕನ್ನಡ ಮೌಲ್ವಿ' ಎಂಬ ಪ್ರಬಂಧ ನೆನಪಾಗುತ್ತಿದೆ. ಹಳ್ಳಿಯ ಮುಸಲ್ಮಾನ ಹುಡುಗನೊಬ್ಬ ಗದುಗಿನ ಭಾರತದ ವಾಚನವನ್ನು ಕೇಳಿ ಅದರೆಡೆಗೆ ಆಕರ್ಷಿತನಾಗಿ ತಾನೂ ಅದನ್ನು ಕಲಿತು ಮುಂದೆ ಉಪಾಧ್ಯಾಯನಾದ ಕಥೆ ಅದು. ಕನ್ನಡದ ಅನೇಕ ಕತೆ ಕಾದಂಬರಿಗಳಲ್ಲಿ ೧೯ನೇ ಶತಮಾನದ ಚಿತ್ರಣ ಬಂದಾಗ

ಹೀಗೆ ಗಮಕವಾಚನದ ಮೂಲಕ ಸಾಹಿತ್ಯವು ಜನರಿಗೆ ತಲುಪುತ್ತಿದ್ದುದರ ದಾಖಲೆ ಸಿಗುತ್ತದೆ. ಕಾವ್ಯಕ್ಕೆ ಸಂಗೀತದ ಸಾಹಚರ್ಯವಿದ್ದ ಆ ಕಾಲದಲ್ಲಿ ಮಕ್ಕಳು ಬಾಯಿಪಾಠದ ಮೂಲಕ ಹಾಡು, ಕವಿತೆಗಳನ್ನು ಕಲಿಯುತ್ತಿದ್ದರು. ಈಚೆಗೆ ಬಿಡುಗಡೆಯಾದ, ಅಡಿಗರನ್ನು ಕುರಿತು ಬರೆಯಲ್ಪಟ್ಟ ವಿಮರ್ಶೆಗಳ ಪುಸ್ತಕ – ಪ್ರತಿಮಾ ಲೋಕದಲ್ಲಿ ವೈದೇಹಿಯವರು 'ಅಶ್ರುತ ಅನುರಣನ' ಎಂಬ ಲೇಖನವನ್ನು ಬರೆದಿದ್ದಾರೆ. ಅವರಲ್ಲಿ ಅವರು ಹೀಗೆ ಬರೆಯುತ್ತಾರೆ :

'ನಾವು ಆಧುನಿಕ ಕಾವ್ಯ ಪ್ರಪಂಚದೊಳಗೆ ಪ್ರವೇಶಿಸಿದ್ದೇ ಹಾಡುಗವನಗಳನ್ನು ರಾಗಸಹಿತ ಬಾಯಿಪಾಠ ಕಲಿಯುವ ಮೂಲಕವೇನೊ. ಓದಲೂ ಹಾಡಲೂ ಬರುವಂತಹವು ಮಾತ್ರ ಕಾವ್ಯವೆಂದು ನಂಬಿಕೊಂಡಿದ್ದ ಕಾಲವದು. ...ಧಾಟಿಯೆಂಬ ವಾಹನವೇ ಆಗೆಲ್ಲ ದೊಡ್ಡದು. ಆ ವಾಹನದಲ್ಲಿ ಲಗತ್ತಾಗಿ ಕಿವಿಗಿಂಪಾಗಿ ಯಾವ ಸಾಲುಗಳಿದ್ದರೂ ನಾವು ಎತ್ತಿಕೊಳ್ಳುವವರೇ ಮತ್ತು ಅರ್ಥವಾದವರಿಗಿಂತ ಹೆಚ್ಚು ಸಂಲಗ್ನತೆಯಿಂದ ಹಾಡುವವರೇ. ನಮಗೆ ಭಾವ ಹುಟ್ಟಿಸ್ತಿದ್ದುದು ಆಯಾ ಕವನಕ್ಕೆ ಹಾಕಿದ ರಾಗದಿಂದಲೇ ಹೊರತು, ಸಾಹಿತ್ಯದಿಂದಲ್ಲ. ರಾಗ ಚೆನ್ನಾಗಿದ್ದರೆ ಸೈ, ಹಾಡು ಚೆನ್ನಾಗಿದೆ ಎಂದವರು ನಾವು. ಕುವೆಂಪು, ಬೇಂದ್ರೆ, ಅಡಿಗ, ಎಲ್ಲರ ಕವನಗಳು ನಮಗೆ ಹತ್ತಿರಕ್ಕೆ ಬಂದದ್ದೂ ರಾಗವಾಹನಗಳ ಮುಖಾಂತರವೇ, 'ನನ್ನ ಹರಣ ನಿನಗೆ ಶರಣ', 'ಮಣಿಯಲೆನ್ನ ಶಿರವು ನಿನ್ನ', 'ನಿನಗೆ ನೀನೇ ಗೆಳೆಯ ನಿನಗೆ ನೀನೇ...' ಇಲ್ಲೆಲ್ಲ ಕಣಕ ಮತ್ತು ಹೂರಣ ಜೊತೆಜೊತೆಗೇ, ಈ ಎರಡರ ಜೊತೆಗೆ ನಾವು, ಒಂದನ್ನು ಬಿಟ್ಟು ಒಂದಿಲ್ಲದಂತೆ'.

(ಪುಟ. ೧೮೪-೧೮೫, ಅಶ್ರುತ ಅನುರಣನ, ವೈದೇಹಿ, ಪ್ರತಿಮಾಲೋಕ, ಅಂಕಿತ ಪ್ರಕಾಶನ, ೨೦೦೮)

ಹೀಗೆ ಸಾಮುದಾಯಿಕ ನೆಲೆಯಲ್ಲಿ ಗೇಯತೆಯೊಂದಿಗೆ ತಳುಕುಹಾಕಿಕೊಂಡಿದ್ದ ಸಾಹಿತ್ಯವು ಮುದ್ರಣ ತಂತ್ರಜ್ಞಾನ ಬಂದ ನಂತರ ಜನರನ್ನು ತಲುಪುವ ಕ್ರಮ ಬದಲಾಯಿತು. ಕೇಳಿ ಸವಿಯುವ ಸಂಗತಿಯಾಗಿದ್ದದ್ದು, ಸ್ವತಃ ತಾನೇ ಓದಿಕೊಳ್ಳುವ ಸಂಗತಿಯಾಗಿದ್ದು , ಬಹುಶಃ ಒಂದು ಪ್ರಮುಖ ಬದಲಾವಣೆ. ಇದು ದೊಡ್ಡ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳ ಫಲ.

ಯಾವಾಗ ಸಾಹಿತ್ಯವು ಕೇಳಿಸಿಕೊಳ್ಳುವ ಸಂಗತಿಯಾಗಿದ್ದದ್ದು ಓದುವ ಸಂಗತಿಯಾಗಿ ಬದಲಾಯಿತೋ ಅದು ತನ್ನ ಲಿಖಿತರೂಪದಲ್ಲಂತೂ ವಿದ್ಯಾವಂತರಿಗೆ ಸೀಮಿತವಾಯಿತು. ಈಗ ಆಧುನಿಕ ಕನ್ನಡ ಸಾಹಿತ್ಯ, ಉದಾಹರಣೆಗಾಗಿ ಕಾವ್ಯ ಪ್ರಕಾರವನ್ನು ತೆಗೆದುಕೊಳ್ಳೋಣ. ಕನ್ನಡದ ನವೋದಯ ಸಾಹಿತ್ಯವು ತನ್ನ ಪ್ರಧಾನ ನೆಲೆಯಲ್ಲಿ ಎಚ್.ಎಸ್.ಆರ್. ಹೇಳುವಂತೆ ಅಂಗಲಯವನ್ನು ಬಿಟ್ಟು ಸರಳ ಲೆಕ್ಕಾಚಾರಕ್ಕೆ ಒಗ್ಗುವ ಮಾತ್ರಾಗಣದ ಲಯಗಳನ್ನು ಬಳಸಿಕೊಂಡಿತು. ಗಮನಿಸಬೇಕಾದ ವಿಚಾರವೆಂದರೆ ಜನಗಳನ್ನು ತಲುಪುವುದಷ್ಟೇ ನವೋದಯ ಕವಿಗಳ ಉದ್ದೇಶವಾಗಿರಲಿಲ್ಲ, ವಸಾಹತುಶಾಹಿಯೊಂದಿಗೆ ಅನುಸಂಧಾನ ನಡೆಸುವುದು, ಬದಲಾಗುತ್ತಿದ್ದ ಕರ್ನಾಟಕದ ಬದುಕನ್ನು ದಾಖಲಿಸುವುದು ಇವು ಅವರಿಗೆ ಮುಖ್ಯವಾಗಿದ್ದವು. ನವೋದಯ ಕಾವ್ಯವನ್ನು ಗಮನಿಸಿದರೆ ಅದರ ಗೇಯ ಲಯಗಳ ಕವಿತೆಗಳು ಜನರಿಗೆ ಹತ್ತಿರವಾದಂತೆ ಉಳಿದ ಕವಿತೆಗಳು ಹತ್ತಿರವಾಗಲಿಲ್ಲ. ಉದಾಹರಣೆಗೆ, ಬೇಂದ್ರೆಯವರ ಶ್ರಾವಣ ಬಂತು, ಘಮಘಮ ಘಮಾಡಸ್ತಾವ ಮಲ್ಲಿಗೆ, ಇನ್ನೂ ಯಾಕ ಬರಲಿಲ್ಲವ್ವ ಹುಬ್ಬಳ್ಳಿಯಾಂವ... ಕವಿತೆಗಳು ಹತ್ತಿರವಾದಂತೆ 'ಜೋಗಿ', 'ಕಲ್ಪವೃಕ್ಷ ಬೃಂದಾವನಂಗಳಲಿ'ಯಂಥ ಕವಿತೆಗಳು ಜನಗಳ ಬಾಯಲ್ಲಿ ನಲಿಯಲಿಲ್ಲ. ನವೋದಯ ಕವಿತೆಗಳು ಜನಕ್ಕೆ ಹತ್ತಿರವಾಗುವಲ್ಲಿ ಪಿ. ಕಾಳಿಂಗರಾವ್, ಮೈಸೂರು ಅನಂತಸ್ವಾಮಿ, ಸಿ. ಅಶ್ವಥ್ ಮುಂತಾದವರ ಸುಗಮಸಂಗೀತ ಕ್ಷೇತ್ರದ ಪ್ರಯತ್ನಗಳನ್ನು ಮರೆಯುವಂತಿಲ್ಲ. ಒಟ್ಟಿನಲ್ಲಿ ಹಾಡುಗಳಾದ ನವೋದಯ ಕವಿತೆಗಳು ಜನರಿಗೆ ಹತ್ತಿರವಾದಂತೆ ಹಾಡಲಾಗದ ಕವಿತೆಗಳು ಹತ್ತಿರವಾಗಲಿಲ್ಲ.

ಇನ್ನು, ಗೇಯಲಯಗಳಿಂದ ದೂರವಾಗಿ ಓದುಗನಿಂದ ತುಂಬ ಪರಿಶ್ರಮ ಮತ್ತು ತಾಳ್ಮೆಯನ್ನು ಬಯಸಿದ ನವ್ಯಕಾವ್ಯವು ಸಮುದಾಯವನ್ನು ತಲುಪಲಾಗದೆ ಹೋದದ್ದು ಕನ್ನಡ ಸಂಸ್ಕೃತಿಗೆ ಅಪರಿಚಿತವಾದ ವಿಷಯವೇನಲ್ಲ. ಜನರಿಗೆ ಅರ್ಥವಾಗುವಂತೆ ಬರೆಯುವುದಕ್ಕಿಂತ ಅನುಭವದ ಶೋಧವು ಮುಖ್ಯವೆಂಬ ನೆಲೆಯ ಈ ಹಂತವು ಓದುಗ ಮತ್ತು ಕವಿಯ ನಡುವೆ ಅರ್ಥಧಾರಿ ವಿಮರ್ಶಕನನ್ನು ಬೇಡಿದ್ದು ಕನ್ನಡ ಕಾವ್ಯದ ಒಂದು ವಿಶಿಷ್ಟ ಹಂತ. ಇನ್ನು ನವಸಾಕ್ಷರರು ರಚಿಸಿದ ದಲಿತ ಬಂಡಾಯ ಕಾವ್ಯದ ಅಜೆಂಡಾದಲ್ಲಿ ಸಾಮಾಜಿಕ ಅಸಮಾನತೆಯ ವಿರುದ್ಧ ಹೋರಾಟವು ಒಂದು ಮುಖ್ಯ ನೆಲೆಯಾದದ್ದರಿಂದ ಅಲ್ಲಿ ಸಂವಹನದ ಪ್ರಶ್ನೆಯು ಬೇರೆಯೇ ಆಗುತ್ತದೆ. ಇಲ್ಲಿ ಕವಿತೆ ಕೇವಲ ಕವಿತೆಯಾಗದೆ ಅದು ಇನ್ನೇನಕ್ಕೋ ಸಾಧನವಾಗುತ್ತದೆ. ಸ್ತ್ರೀವಾದಿ ಕಾವ್ಯಕ್ಕೂ ಈ ಮಾತು ಅನ್ವಯಿಸುತ್ತದೆ.

ಈ ಹಂತದಲ್ಲಿ ಒಂದು ಪ್ರಶ್ನೆಯನ್ನು ಕೇಳಿಕೊಳ್ಳೋಣ. ಇವತ್ತಿನ ಕವಿಗಳು ಕಾವ್ಯ ಬರೆಯುತ್ತಿರುವುದು ಯಾರಿಗಾಗಿ ? ನಿರ್ದಿಷ್ಟ ಓದುಗರಿಗಾಗಿಯೋ, ಸಮುದಾಯಕ್ಕಾಗಿಯೋ ಅಥವಾ ವಿಮರ್ಶಕರಿಗಾಗಿಯೋ ? ಮತ್ತೆ ಎಚ್.ಎಸ್.ಆರ್. ಅವರ ಚಿಂತನೆ ಇಲ್ಲಿ ಪ್ರಸ್ತುತವಾಗುತ್ತದೆ :

'ಸಮುದಾಯದ ಬದುಕಿಗೆ ಪ್ರಸ್ತುತವಾದ ಕಾವ್ಯದ ಸ್ವರೂಪವನ್ನು ಕುರಿತು ಮಾಡುವ ಚರ್ಚೆಯು ಕೆಲವು ಮೂಲಭೂತ ಸಂಗತಿಗಳನ್ನು ಪ್ರಸ್ತಾಪಿಸುವುದು ಅನಿವಾರ್ಯವಾದ ಸಂದರ್ಭದಲ್ಲಿ ನಾವು ಬದುಕಿದ್ದೇವೆ. ಜನರಲ್ಲಿ ಬಹುಸಂಖ್ಯಾತರು ಕಾವ್ಯಾನುಭವವನ್ನು ಪಡೆಯಲು ಸಮರ್ಥರಲ್ಲ, ಅವರು ಅದರಲ್ಲಿ ಆಸಕ್ತರೂ ಅಲ್ಲ ಎಂಬ ತೀರ್ಮಾನಕ್ಕೆ ಕವಿಗಳೂ, ವಿಮರ್ಶಕರೂ ಕೂಡಿಯೇ ತಲುಪಿದಂತಿದೆ. ಕನಿಷ್ಠ ಪಕ್ಷ ಅಕ್ಷರಸ್ಥರನ್ನು ತಲುಪಲು ಮಾಡುವ ಪ್ರಯತ್ನಗಳನ್ನು ಕೂಡ ಮನರಂಜನೆಗಾಗಿ ಮಾಡುವ ಗಿಮಿಕ್ ಎಂದೋ, ಕಾವ್ಯದ ಕಲಾತ್ಮಕ ಪರಿಶುದ್ಧತೆಗೆ ಮಾಡಿದ ಅನ್ಯಾಯವೆಂದೋ ಪರಿಗಣಿಸಲಾಗುತ್ತಿದೆ. ಅನಕ್ಷರಸ್ಥ ಗ್ರಾಮೀಣ ಜನತೆಯೂ ಕೂಡ ಕಥನಕಾವ್ಯಗಳಿಗೆ ಪರಿಚಿತರಾಗಿರುತ್ತಿದ್ದ ದೇಶೀಕಾವ್ಯದ ಪರಂಪರೆಗಿದ್ದ ಸಂವಹನ ಸುಲಭತೆ ಮತ್ತು ವ್ಯಾಪ್ತಿಗಳನ್ನು ನೆನಪು ಮಾಡಿಕೊಂಡಾಗ ಕಾವ್ಯವು ಮಾಡುತ್ತಿದ್ದ ಕೆಲಸದ ಪ್ರಮಾಣವು ಕಡಿಮೆಯಾಗಿದೆಯೆಂಬ ಸತ್ಯವನ್ನು ಒಪ್ಪಿಕೊಳ್ಳಬೇಕಾಗುತ್ತವೆ.' (ಪುಟ. ೧೨೭ ಕನ್ನಡ ಕಾವ್ಯದ ವರ್ಣಪಟಲ, ಗಂಧವ್ರತ)

ಈ ಚರ್ಚೆ ಒಂದೆಡೆ ಇರಲಿ. ಈಗ ನಮ್ಮ ಕಾಲದಲ್ಲಿ ಸಾಹಿತ್ಯ ಸಂವಹನವು ಯಾವ ಯಾವ ರೀತಿಗಳಲ್ಲಿ ನಡೆಯುತ್ತಿದೆ ಎಂಬುದನ್ನು ಗಮನಿಸೋಣ. ಒಂದು ಸಣ್ಣ ಪಟ್ಟಿ ಮಾಡುವುದಾದರೆ –

೧. **ವೈಯಕ್ತಿಕ ಓದು :** ಜನ ತಮಗೆ ಇಷ್ಟವಾದ ಪುಸ್ತಕಗಳನ್ನು ಪುಸ್ತಕದ ಅಂಗಡಿಗಳಿಂದ ಕೊಂಡು ತಂದು, ಅಥವಾ ಗ್ರಂಥಾಲಯಗಳಿಂದ ಎರವಲು ಪಡೆದು ಓದುತ್ತಾರೆ. ಆದರೆ ಕೋಟ್ಯಂತರ ಕನ್ನಡಿಗರಲ್ಲಿ ಹೀಗೆ ಓದುವವರ ಸಂಖ್ಯೆ ಎಷ್ಟು ? ಸಾಹಿತ್ಯ ಅನ್ನುವುದು ಅವನ್ನು ಅಕೆಡೆಮಿಕ್ ನೆಲೆಯಲ್ಲಿ ಓದುವವರ ವಿಶಿಷ್ಟೀಕೃತ ಗುಂಪಿಗೆ ಸೀಮಿತವಾಗುತ್ತಿಲ್ಲವೇ ಎಂಬ ಅನುಮಾನ ಬರುತ್ತದೆ. ಸಾಹಿತ್ಯೇತರ ಕ್ಷೇತ್ರಗಳಲ್ಲಿ ಕೆಲಸ ಮಾಡುವವರು ಸಾಹಿತ್ಯವನ್ನು ಎಷ್ಟರಮಟ್ಟಿಗೆ ಓದುತ್ತಿದ್ದಾರೆ ? ಯೋಚಿಸಬೇಕಾದ ವಿಷಯ ಇದು.

೨. **ಸಾಹಿತ್ಯದ ತರಗತಿಗಳು :** ಸೆಮಿಸ್ಟರ್ ಪದ್ಧತಿ, ಪಠ್ಯಭಾಗ ಮುಗಿಸುವ ಗಡಿಬಿಡಿ ಇವುಗಳಿಂದಾಗಿ ಸಾಹಿತ್ಯದ ಆಸ್ವಾದವೆನ್ನುವುದು ತರಗತಿಗಳಲ್ಲಿ ಹೆಚ್ಚು ಪ್ರಾಮುಖ್ಯವನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಕೆಲವು ಸಲ ಕಾವ್ಯವನ್ನು ಓದದೆಯೇ ವಿಮರ್ಶೆಗಳನ್ನು ಓದಿಯೇ ಪರೀಕ್ಷೆ ಬರೆದು ಉತ್ತಮ ಅಂಕಗಳನ್ನು ಗಳಿಸಿಕೊಳ್ಳುವ ಪ್ರಸಂಗಗಳಿರುತ್ತವೆ !

೩. **ಕವಿಗೋಷ್ಠಿಗಳು :** ಕವಿಗೋಷ್ಠಿಗಳಲ್ಲಿ ಆಗುವ ಸಾಹಿತ್ಯಸಂವಹನಕ್ಕಿರುವ ಸೀಮಿತತೆ ಗೊತ್ತಿರುವ ವಿಷಯವೇ. ಅಲ್ಲೊಂದು ಇಲ್ಲೊಂದು ಎಂಬಂತೆ ಅನಿಯತವಾಗಿ ನಡೆಯುವ ಕವಿಗೋಷ್ಠಿಗಳು, ಕೇಳಿಸಿಕೊಳ್ಳುವ ಏಕಾಗ್ರತೆ ಇಲ್ಲದೆ ಹೋದಾಗ ಶ್ರೋತೃಗಳು ಕೇವಲ ಪ್ರೇಕ್ಷಕರಾಗಿಬಿಡುವ ಪರಿಸ್ಥಿತಿ, ಮೊಬೈಲ್ ಎಂಬ ಕರ್ಣ ಪಿಶಾಚಿಯಿಂದಾಗಿ ಕವಿತೆಯಿರಲಿ, ಬೇರೆಯವರ ಮಾತನ್ನೇ ಪೂರ್ತಿ ಕೇಳಿಸಿಕೊಳ್ಳಲಾಗದ ನಮ್ಮ ಕರ್ಮ. ಏನು ಹೇಳೋಣ ಇದಕ್ಕೆ ? ಒಟ್ಟಿನಲ್ಲಿ ಕವಿಗೋಷ್ಠಿಗಳೂ ಕೂಡ ಸಾಹಿತ್ಯ ಸಂವಹನದ ವಿಷಯದಲ್ಲಿ ಹೇಳಿಕೊಳ್ಳುವಂತಹ ಯಶಸ್ಸನ್ನು ಸಾಧಿಸುವಲ್ಲಿ ಅಸಮರ್ಥವಾಗುತ್ತವೆ.

೪. **ಸಾಹಿತ್ಯಾಸಕ್ತರ ಸಣ್ಣ ಗುಂಪುಗಳ ನಡುವೆ ನಡೆಯುವ ಗೋಷ್ಠಿಗಳು :** ಬಹುಶಃ ಕಡಿಮೆ ಸಂಖ್ಯೆಯ ಈ ಗುಂಪುಗಳು ತುಸು ಅರ್ಥಪೂರ್ಣವಾದ ಸಾಹಿತ್ಯ ಗೋಷ್ಠಿಗಳನ್ನು ನಡೆಸುತ್ತವೆ. ಸಂಚಯ ಸಾಹಿತ್ಯಪತ್ರಿಕೆಯು ನಡೆಸುವ ತಿಂಗಳ ಗೋಷ್ಠಿ ನೆನಪಾಗುತ್ತಿದೆ. ಇವು ಕೂಡ ಸಾಹಿತ್ಯಕ್ಷೇತ್ರದ ವಿಶಿಷ್ಟೀಕೃತ ಜನರಿಗೆ ಸೀಮಿತವಾಗಿರುತ್ತವೆ.

೫. **ಸಿನಿಮಾ ಹಾಡುಗಳು :** ಎಫ್‌ಎಂ ವಾಹಿನಿಗಳ ಮೂಲಕ, ಕೇಬಲ್ ಟಿ.ವಿ.ಗಳ ಮೂಲಕ ಸದಾ ಎಲ್ಲರ ಕಿವಿಗೂ ಬೀಳುವ ಸಿನಿಮಾ ಹಾಡುಗಳು ಅತ್ಯಂತ ಹೆಚ್ಚು ಕೇಳಿಸಿಕೊಳ್ಳುವ ಸಾಹಿತ್ಯವಾಗಿವೆ. ಇವುಗಳು ಹೇಗಿವೆ, ಎಂಥ ಅಭಿರುಚಿಯನ್ನು ಬೆಳೆಸುತ್ತವೆ, ಅತ್ಯಂತ ಹೆಚ್ಚಿನ ಜನರಿಗೆ ತಲುಪುವ ಸಾಧ್ಯತೆ ಇರುವ ಇವುಗಳನ್ನು ಕ್ರಿಯಾತ್ಮಕವಾಗಿ, ಸೃಷ್ಟಿಶೀಲವಾಗಿ ಹೇಗೆ ಬಳಸಿಕೊಳ್ಳಬೇಕು... ಇವೆಲ್ಲವೂ ಪ್ರತ್ಯೇಕವಾಗಿ ಚರ್ಚಿಸಬೇಕಾದ ವಿಷಯಗಳು. ಒಬ್ಬ ಬರಹಗಾರರು ಹೇಳಿದ್ದು ನೆನಪಾಗುತ್ತಿದೆ : ''ಇವತ್ತಿನ ಪಾಪ್ ನಾಳಿನ ಜನಪದ'' ಇವತ್ತಿನ ಸಿನಿಮಾ ಹಾಡುಗಳಿಗೆ ನಾಳೆಯ ಜನಪದವಾಗುವ ಶಕ್ತಿ ಇದೆಯೇ, ವ್ಯಾಪ್ತಿ ಇದೆಯೇ ಎಂಬುದು ತುಂಬ ಚರ್ಚೆಯನ್ನು ಬೇಡುವ ವಿಚಾರ.

**೬. ಅಂತರ್ಜಾಲ, ಎಸ್.ಎಂ.ಎಸ್. ಮುಂತಾದ ಆಧುನಿಕ ಸಂವಹನ ವಿಧಾನಗಳು :** ಇಂಟರ್‌ನೆಟ್, ಎಸ್.ಎಂ.ಎಸ್. ವಿಧಾನಗಳು ಆ ತಂತ್ರಜ್ಞಾನಗಳನ್ನು ಬಲ್ಲವರ ನಡುವೆ ತಕ್ಕಮಟ್ಟಿಗಿನ ಸಾಹಿತ್ಯ ಸಂವಹನಕ್ಕೆ ಅವಕಾಶ ಮಾಡಿಕೊಟ್ಟಿವೆ. ಆದರೆ ಈ ಸೌಲಭ್ಯವು ಎಷ್ಟು ಮಂದಿಗೆ ಲಭ್ಯವಿದೆ, ಲಭ್ಯವಿರುವವರಲ್ಲಿ ಎಷ್ಟು ಮಂದಿ ಈ ಸಂವಹನವನ್ನು ಸಾಹಿತ್ಯ ಸಂವಹನಕ್ಕೆ ಬಳಸುತ್ತಾರೆಂಬುದು ಅಧ್ಯಯನ ಮಾಡಿ ಅರಿತುಕೊಳ್ಳಬೇಕಾದ ವಿಷಯ. ಆದರೆ ಅಪಾರ ಸಂವಹನ ಸಾಧ್ಯತೆ ಇರುವ ತಂತ್ರಜ್ಞಾನ ಇದು.

**೭. ಸುಗಮ ಸಂಗೀತ :** ಬೇಂದ್ರೆ, ಕುವೆಂಪು, ಪುತಿನ, ಅಡಿಗ, ನಿಸಾರ್ ಅಹಮದ್... ಮುಂತಾದ ಕವಿಗಳ ರಚನೆಗಳನ್ನು ಜನಸಾಮಾನ್ಯರ ಬಳಿ ಕೊಂಡೊಯ್ಯುವಲ್ಲಿ ಇವತ್ತಿಗೂ ಸುಗಮ ಸಂಗೀತದ್ದೇ ಮುಖ್ಯ ಪಾತ್ರ. ಆದರೆ ಹಳೆಯ ಕವಿಗಳ ರಚನೆಗೆ ಕೊಟ್ಟಷ್ಟು ಪ್ರಾಮುಖ್ಯತೆಯನ್ನು ಈ ಹಾಡುಗಾರರು ಹೊಸ ಕವಿಗಳ ರಚನೆಗೆ ಕೊಡುತ್ತಿಲ್ಲ. ಏಕೆ ? ಹಾಡು ಬರೆಯುವವರೇ ಕಡಿಮೆಯೋ, ಅಥವಾ ಇನ್ನೇನಾದರೂ ಸಮಸ್ಯೆಯೋ ? ವಿಚಾರ ಮಾಡಬೇಕು.

ಇದಿಷ್ಟು ಸಮಕಾಲೀನ ಬದುಕಿನಲ್ಲಿ ಸಾಹಿತ್ಯ ಸಂವಹನದ ವಿಧಾನಗಳಾದವು. ಈಗ ಶ್ರವ್ಯ, ದೃಶ್ಯ ಸಮೂಹ ಮಾಧ್ಯಮಗಳ ಕಡೆ ಗಮನ ಹರಿಸೋಣ. ಮನೆಮನೆಯಲ್ಲೂ ಕೇಬಲ್ ಟಿ.ವಿ. ಇರುವ ಈ ದಿನಗಳಲ್ಲಿ ವ್ಯಕ್ತಿಯು ಕ್ರಿಯಾತ್ಮಕನಾಗಿ ಭಾಗವಹಿಸುವವನ ಸ್ಥಾನವನ್ನು ಕಳೆದುಕೊಂಡು ಮೂಕ, ನಿಷ್ಕ್ರಿಯ ಪ್ರೇಕ್ಷಕನ ಸ್ಥಾನಕ್ಕೆ ತಲುಪಿದ್ದಾನೆ. ಚಿಂತನೆ, ಸಂವಾದಗಳು ಸಾಧ್ಯವೇ ಆಗದ ಪರಿಸ್ಥಿತಿ ಇದು. ಕವಿತೆ ರಚಿಸುವುದು ಹೋಗಲಿ, ಕವಿತೆಯನ್ನು ಕೇಳಿಸಿಕೊಂಡು ಕ್ರಿಯಾತ್ಮಕವಾಗಿ ಸ್ಪಂದಿಸುವ ಸಾಧ್ಯತೆಯೇ ಇಲ್ಲದ, ಕೇವಲ ವೀಕ್ಷಕನಾಗುವ ನೆಲೆ ಇದು. ವ್ಯಾಪಾರೀ ದೃಷ್ಟಿಯಿಂದ ಅನೇಕ ಕಮರ್ಷಿಯಲ್ ಬ್ರೇಕ್‌ಗಳ ನಡುವೆ ಏನು ಸರಕುಸಾಹಿತ್ಯವನ್ನು ಬಿತ್ತರಿಸಲಾಗುತ್ತದೋ ಅದೇ ಇವತ್ತಿನ ಪ್ರಧಾನವಾಹಿನಿಯಾಗುವ ಅಪಾಯಕಾರಿ ಪರಿಸ್ಥಿತಿಯಲ್ಲಿ ನಾವಿದ್ದೇವೆ.

ಸರಿ. ಈಗ ತೀರ್ಮಾನರೂಪಿಯಾಗಿ ಯಾವ ಮಾತುಗಳನ್ನು ಹೇಳುವುದು ? ಯಾವುದೇ ತೀರ್ಮಾನವನ್ನೂ ಕೊಡಲಾಗುವುದಿಲ್ಲ ಎಂಬುದೇ ತೀರ್ಮಾನ. ಪರಿಸ್ಥಿತಿಯನ್ನಂತೂ ಗಮನಿಸಿದ್ದೇವೆ. ಈಗ ಮಾಡುವುದೇನು, ಸಾಹಿತ್ಯ ಸಂವಹನವನ್ನು ಅರ್ಥಪೂರ್ಣಗೊಳಿಸಲು ಮಾಡಬೇಕಾದ್ದೇನು ಎಂಬುದು ಎಲ್ಲರೂ ಯೋಚಿಸಬೇಕಾದ ವಿಚಾರ.

ಒಂದಂತೂ ನಿಜ. ದೇವಸ್ಥಾನಗಳಲ್ಲಿನ ಪುರಾಣವಾಚನ, ಹರಿಕಥಾ ಶ್ರವಣಗಳೇ ಪ್ರಮುಖ ಮನರಂಜನೆಯಾದ, ಜಗಲಿಕಟ್ಟೆಗಳ ಮೇಲಿನ ಗಮಕವಾಚನಗಳೇ ಸಾಯಂಕಾಲದ ಕಾಲಯಾಪನೆಯಾದ ಕಾಲಕ್ಕಂತೂ ನಾವು ಮರಳಲು ಸಾಧ್ಯವಿಲ್ಲ. ಆ ಸಂದರ್ಭದಿಂದ ನಾವು ಬಹುದೂರ ಬಂದುಬಿಟ್ಟಿದ್ದೇವೆ. ಹಳ್ಳಿಗಳಲ್ಲೂ ಇವತ್ತು ಈ ಪರಿಸ್ಥಿತಿ ಇಲ್ಲ. ಎಫ್‌ಎಮ್, ಕೇಬಲ್‌ವಾಹಿನಿಗಳು ಎಲ್ಲೆಡೆ, ಅಂದರೆ ಎಲ್ಲೆಡೆಯೂ ತಲುಪುತ್ತಿರುವ ದಿನಗಳಿವು. ಸಾಹಿತ್ಯವೆಂಬುದು ಕೆಲವು ವಿಶೇಷೀಕೃತ ಜನರಿಗೆ ಮಾತ್ರ ಸೀಮಿತವಾಗುವ ಸಂಗತಿಯಾಗಿಬಿಡುತ್ತದೆಯೇ ? ಈ ಅನುಮಾನಕ್ಕೆ ಜಾಗವಿದೆ.

ಒಂದು ರೀತಿಯ ಸಮುದಾಯದ ಬದುಕನ್ನು ನಾವು ಕಳೆದುಕೊಂಡಿದ್ದೇವೆ. ನಮ್ಮ ನಮ್ಮ ಮನೆಗಳು ಎಂಬ ದ್ವೀಪವಾಸಿಗಳಾಗಿದ್ದೇ ಇಂತಹ ಸಂದರ್ಭದಲ್ಲಿ, ಬೇರೆ ರೀತಿಯ ಸಮುದಾಯಗಳನ್ನು ಕಟ್ಟಿಕೊಳ್ಳಲು ಸಾಧ್ಯವೇ ? ಸಾಹಿತ್ಯಾಸಕ್ತ ವಿದ್ಯಾರ್ಥಿ ಸಮುದಾಯಗಳು, ವೃತ್ತಿ ಸಮುದಾಯ ನೆರೆಹೊರೆಯ ಸಮುದಾಯಗಳು... ಹೀಗೆ...

ಪ್ರಬಲ ಮಾಧ್ಯಮಗಳಾದ ಎಫ್.ಎಂ. ವಾಹಿನಿಗಳು, ಕೇಬಲ್ ವಾಹಿನಿಗಳು, ಸಿನಿಮಾಗಳು, ಪತ್ರಿಕೆಗಳು ಇವುಗಳನ್ನು ಸಾಹಿತ್ಯ ಸಂವಹನಕ್ಕೆ ಅನುಕೂಲವಾಗುವ ರೀತಿಯಲ್ಲಿ ಬಳಸಲು ಸಾಧ್ಯವೇ ? ವ್ಯಾಪಾರೀ ಉದ್ದೇಶಗಳನ್ನು ಮೀರುವುದು ಆ ಮಾಧ್ಯಮಗಳಿಗೆ ಸಾಧ್ಯವಾದೀತೇ ? ಸರ್ಕಾರ ಈ ವಿಚಾರದಲ್ಲಿ ಏನು ಮಾಡಬಹುದು ? ನಮ್ಮ ಹಬ್ಬಗಳಲ್ಲಿ, ನಾವು ಮಾಡುವ ಮದುವೆಗಳಲ್ಲಿ ಕಡಿಮೆ ಆಡಂಬರ ಮತ್ತು ಹೆಚ್ಚು ಸಂಸ್ಕೃತಿಯನ್ನು ತರುವುದು ಸಾಧ್ಯವಾಗಬಹುದೇ ? ಸಂಪ್ರದಾಯದ ಹಾಡುಗಳು, ಆಶುಕವಿತೆಗಳು, ಒಗಟುಗಳು... ಇವೆಲ್ಲವೂ ದೈನಂದಿನ ಜೀವನದ ಭಾಗವನ್ನಾಗಿ ಮಾಡುವ ನೆಲೆಗಳನ್ನು ನಾವು ಮತ್ತೆ ತರುವುದು ಸಾಧ್ಯವೇ ?

ಈ ಪ್ರಶ್ನೆಗಳನ್ನು ನಾನೋ, ನೀವೋ ಕೇಳಬಹುದು.

ಆದರೆ ಉತ್ತರಿಸುವವರು ಯಾರು ?

*(ಬೆಂಗಳೂರಿನ ನ್ಯಾಷನಲ್ ಪದವಿ ಕಾಲೇಜು-ಜಯನಗರ, ಇಲ್ಲಿ 'ನಮ್ಮ ಕಾಲದಲ್ಲಿ ಸಾಹಿತ್ಯ ಸಂವಹನದ ಸ್ವರೂಪ' ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)*

**ಡಾ|| ಎಲ್. ಜಿ. ಮೀರಾ**
ನಂ. ೧೪೯, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ
ಹಂಪಿನಗರ, ಬೆಂಗಳೂರು - ೫೬೦ ೦೪೦

# ನಮ್ಮ ಜಿ. ಆರ್.



**ನಾವು ಕಾಣುವ ದೃಶ್ಯಗಳು, ಒದುವ ಅಥವಾ ಕೇಳಿ ತಿಳಿಯುವ ಕೆಲವು ವಿಚಾರಗಳು ನಮ್ಮ ಮನಸ್ಸಿನಾಳಕ್ಕೆ ಹೊಕ್ಕುತ್ತವೆ. ಅಲ್ಲಿ ವಿಚಾರಮಂಥನವಾಗುತ್ತದೆ. ಇದು ಅಭಿವ್ಯಕ್ತಿ ಪ್ರಕ್ರಿಯೆಯ ಪ್ರಮುಖ ಅಂಶ ಎಂಬುದು ನನ್ನ ಅನಿಸಿಕೆ. ಕೃತಿಯು ತನ್ನ ಸತ್ವವನ್ನು, ಒಳ ಸ್ವರೂಪವನ್ನು ಪಡೆಯುವುದು ಇಲ್ಲೇ.**

**ಕೃತಿ ರಚನೆಗೆ ಇಂಬು ನೀಡುವಂಥ ಕೆಲವು ಮೂಲ ನಿರ್ಧಾರಗಳು ಇರುತ್ತವೆ. ಅಣಕಚಿತ್ರ ಪ್ರಕಾರವನ್ನೇ ಪರಿಗಣನೆಗೆ ತೆಗೆದುಕೊಂಡರೆ, ಚಿತ್ರ ಬಿಡಿಸಲು ಈ ಕೆಲವು ಅಂಶಗಳು ಪ್ರೇರಣೆ ಒದಗಿಸಿರಬಹುದು. ಒಬ್ಬ ವ್ಯಕ್ತಿ ನಮ್ಮ ಗಾಢ ಮೆಚ್ಚುಗೆ ಹಾಗೂ ಮಮತೆಗೆ ಪಾತ್ರನಾದರೆ, ವ್ಯಕ್ತಿ ನಮ್ಮ ಕಲ್ಪನೆಗೆ ಸುಲಭವಾಗಿ ನಿಲುಕುತ್ತಾನೆ. ಮೊದಲು ಆ ವ್ಯಕ್ತಿಯ ವಿಚಾರಧಾರೆಯ ಬಗೆಗೆ ಆಳವಾದ ಪರಿಚಯವಿದ್ದಾಗ ಮೇಲಿನದು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಮೂಡಿಬರುವ ಕೃತಿಯು ಕೇವಲ ಬರಡಾಗಿ ಅಥವಾ ವ್ಯಾವಹಾರಿಕವಾಗಿ ಪರಿಣಮಿಸಿಬಿಡುತ್ತದೆ.**

**ಜಿ. ಆರ್. ನನ್ನ ತಂದೆಯ ಆತ್ಮೀಯ ಸ್ನೇಹಿತರು. ನನಗೆ ಜಿ. ಆರ್. ಮಾಮ. ನನ್ನ ಬಿ.ಎಫ್.ಎ. ಓದಿಗಾಗಿ ಚಿತ್ರಕಲಾ ಪರಿಷತ್ತಿನಲ್ಲಿ ನನಗೆ ಅವಕಾಶ ದೊರಕುವ ಹಿಂದಿನ ಅವರ ಪ್ರಯತ್ನ ದೊಡ್ಡದು. 'ಹೊಸತು' ಪತ್ರಿಕೆಯಲ್ಲಿ ಅವರು ಬರೆಯುವ ವಿಚಾರಪೂರಿತ ಲೇಖನಗಳು, ಅಂಕಣಗಳು, ಸಂಪಾದಕೀಯಗಳು, ಹಾಗೂ ಅವರ ಕೆಲವು ಪುಸ್ತಕಗಳನ್ನು ಓದಿ ಪ್ರಭಾವಿತರಾದವರಲ್ಲಿ ನಾನೂ ಒಬ್ಬ. ಅವರ ಸರಳತೆ, ಮುಗ್ಧತೆ ಅವರ ಅಪರೂಪದ ವ್ಯಕ್ತಿತ್ವದ ಭಾಗವೂ ಹೌದು. ನಮ್ಮ ಮಧ್ಯೆ ಸಣ್ಣ ಸಂಖ್ಯೆಯಲ್ಲಿರುವ ಕೆಲವರ ಪೈಕಿ ಜಿ. ಆರ್. ಒಬ್ಬರು. ತಮ್ಮ ಬದುಕು ಬರಹಗಳ ಮೂಲಕ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನ ಅಡಿಯಾಳಾಗುಳಿಯುವ ಸಾಧ್ಯತೆಯನ್ನು ಒಂದಿಷ್ಟು ಕಡಿಮೆ ಮಾಡಿದ್ದಾರೆ ಜಿ.ಆರ್.**

**ಇಲ್ಲಿನ ಅಣಕ ಚಿತ್ರವು ಅವರ ಬಗೆಗಿನ ನನ್ನೀ ಅನಿಸಿಕೆಗಳಿಗೆ ಕನ್ನಡಿ ಹಿಡಿಯುತ್ತದೆ. ಏನಂತೀರಿ ?**

ಸೂರಜ್ ಎಸ್. ವಸಿಷ್ಠ
ಸಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲೋನಿ, ಜಯನಗರ ಪೂರ್ವ, ಬೆಂಗಳೂರು - ೫೬೦ ೦೧೧

# ಪ್ರೇಮವಿವಾಹವೆಂಬ ಅಗ್ನಿದಿವ್ಯ

> **ಪ್ರೇಮವಿವಾಹಗಳು ಮನೆಮನೆಯ ಸತ್ಯವಾದಾಗಲೂ, ನಮ್ಮ ಮಕ್ಕಳೇ ಅಂತರ್‌ಜಾತೀಯ ವಿವಾಹ ಆಗಿದ್ದಾರೆಂದು ಬೀಗುವುದು ಇಂದು ಕಂಡುಬರುತ್ತಿರುವಾಗಲೂ, ಒಂದಷ್ಟು ಮನಸ್ಸುಗಳು ಮತ್ತು ಶಕ್ತಿಗಳು ಯುವಜನತೆಯನ್ನು ಹಿಮ್ಮುಖ ನಡೆಗೆ ಸೆಳೆಯುತ್ತಿವೆ. ಅಂತರ್‌ಧರ್ಮೀಯ/ಜಾತೀಯ ವಿವಾಹವಾದ ತಮ್ಮ ಕಂದಮ್ಮಗಳನ್ನೇ ಸುಡುವ, ಗುಂಡಿಟ್ಟು ಕೊಲ್ಲುವ, ಮಚ್ಚಿನಿಂದ ಇರಿಯುವ ಪ್ರಕರಣಗಳು ಅಲ್ಲಲ್ಲಿ ದಾಖಲಾಗುತ್ತಲೇ ಇವೆ. ಇಂತಹ ಅಮಾನವೀಯ ಕೊಲೆಗಳನ್ನು 'ಮರ್ಯಾದಾ ಹತ್ಯೆ'ಗಳೆಂದು ಅಭಿಮಾನದಿಂದ ಹೇಳುತ್ತ, ಅಂತಹ ಕಾರ್ಯವೆಸಗಿ ಜೈಲಿಗೆ ಹೋಗುತ್ತಿರುವಾಗಲೂ 'ಶೌರ್ಯದ ಕಾರ್ಯ ಮಾಡಿದಂತೆ' ಬೀಗುವ ಮುಖಗಳನ್ನು ಪತ್ರಿಕೆಗಳು ಬಹಿರಂಗಪಡಿಸುತ್ತಿವೆ.**

ಡಾ॥ ಸಬಿಹಾ ಭೂಮೀಗೌಡ

**ಉ**ತ್ತರ ಪ್ರದೇಶದ ಗಾಜಿಯಾಬಾದ್‌ನಲ್ಲಿ ಜಮೀಲ್ ಮತ್ತು ಆಯೆಷಾ ಎಂಬ ಪ್ರೇಮಿಗಳು, ಕುಟುಂಬದ ಹಿರಿಯರ ಇಚ್ಛೆಗೆ ವಿರುದ್ಧವಾಗಿ ವಿವಾಹವಾದರು. ಇದನ್ನು ಸಹಿಸದ ಅಲ್ಲಿನ ಖಾಪ್ ಪಂಚಾಯತ್ ಈ ನವದಂಪತಿಗಳ ಹತ್ಯೆಗೆ ಆದೇಶ ನೀಡಿದ್ದು ವರದಿಯಾಗಿತ್ತು. ಇಂಥದ್ದೇ ಘಟನೆ ಹರಿಯಾಣದಲ್ಲೂ ವರದಿಯಾಗಿತ್ತು. ಹೆತ್ತವರ/ಬಂಧು-ಬಾಂಧವರ ವಿರೋಧವನ್ನು ಲೆಕ್ಕಿಸದೆ ವಿವಾಹವಾದ ನವದಂಪತಿಗಳಿಗೆ (ಮನೋಜ್ ಮತ್ತು ಬಬ್ಲಿ) ಖಾಪ್ ಪಂಚಾಯತ್ ಇದೇ ಬಗೆಯ ಶಿಕ್ಷೆಯನ್ನು ವಿಧಿಸಿ, ಅವರ ಹತ್ಯೆಯನ್ನು ನಡೆಸಿ ವಿಜಯೋತ್ಸವ ಆಚರಿಸಿತ್ತು. ಇಂಥ ಬರ್ಬರ ಕೃತ್ಯಕ್ಕೆ ಕಾರಣರಾದವರಲ್ಲಿ ಐವರಿಗೆ ಗಲ್ಲುಶಿಕ್ಷೆ ಮತ್ತು ಓರ್ವನಿಗೆ ಜೀವಾವಧಿ ಶಿಕ್ಷೆಯನ್ನು ನ್ಯಾಯಾಲಯ ಘೋಷಿಸಿದ ಒಂದು ವಾರದಲ್ಲೇ ಗಾಜಿಯಾಬಾದ್‌ನ ಪ್ರಕರಣ ನಡೆದಿದೆ! ಹರಿಯಾಣದ ಪ್ರಕರಣದಲ್ಲಿ ಶಿಕ್ಷೆಗೊಳಗಾದವರ ಪರವಾಗಿ ನಿಂತು ಹೋರಾಡಲು, ಸಗೋತ್ರ · ನಿಯಮವನ್ನು ಖಾಯಂಗೊಳಿಸಲು ಹಾಗೂ ಹಿಂದೂಪರ ಕಾಯಿದೆಗೆ ಈ ಕುರಿತು ತಿದ್ದುಪಡಿ ತರಲು ಒತ್ತಾಯಿಸುವ ಸಲುವಾಗಿ ಉತ್ತರಪ್ರದೇಶ, ಹರಿಯಾಣ, ರಾಜಸ್ಥಾನ, ದೆಹಲಿ ಭಾಗಗಳ - ೩೬ ಪಂಚಾಯತಿಗಳು ಸಭೆ ನಡೆಸಿ ತೀರ್ಮಾನ ಕೈಗೊಂಡಿವೆಯಂತೆ (ಪ್ರಜಾವಾಣಿ - ೧೪ನೇ ಏಪ್ರಿಲ್ ೨೦೧೦). ಇದನ್ನು ನೋಡುವಾಗ ನಾವು ಪ್ರಗತಿಯ ಹಾದಿಯಲ್ಲಿ ಮುಮ್ಮುಖವಾಗಿ ಸಾಗಿದ್ದೇವೆಯೇ ಅಥವಾ ಹಿಮ್ಮುಖವಾಗಿ ನಡೆದಿದ್ದೇವೆಯೇ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಮೇಲಿನ ಪ್ರಕರಣಗಳು ಅಂತರ್‌ಜಾತಿ ಅಥವಾ ಧರ್ಮದ ಯುವಕ-ಯುವತಿಯರದಾಗಿರದೆ, ಒಂದೇ ಸಮುದಾಯಕ್ಕೆ ಸೇರಿದ ಪ್ರೇಮಿಗಳಿಗೆ ಸಂಬಂಧಿಸಿದ್ದು ಎಂಬುದು ನಮ್ಮ ಆತಂಕಗಳನ್ನು ಹೆಚ್ಚಿಸುವ ಸಂಗತಿ. ಇದೆಲ್ಲ ಉತ್ತರಭಾರತದ ಸಮಸ್ಯೆಗಳು ಎಂದು ಮರೆತುಬಿಡೋಣ ಎನ್ನುವಂತಿಲ್ಲ. ನಮ್ಮದೇ ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳು ಇನ್ನೊಂದು ಬಗೆಯ ವಿಷಮ ಪರಿಸ್ಥಿತಿಯನ್ನು ನಿರ್ಮಿಸಿಕೊಂಡಿವೆ. ಇಲ್ಲಿ ಮನುಷ್ಯರನ್ನು ಮನುಷ್ಯರಾಗಿ ಇರಲು ಬಿಡದೆ, ಜಾತಿ, ಉಪಜಾತಿ, ಧರ್ಮ ಎಂಬ ಕೃತಕ ಗೋಡೆಗಳೊಳಗೆ ಜೀವಿಸುವಂಥ ಒತ್ತಡವನ್ನು ಕಾಣುತ್ತಿದ್ದೇವೆ. 'ನಮ್ಮ ಕೋಮಿನ ಹುಡುಗಿ', 'ಅವರ ಕೋಮಿನ ಹುಡುಗ' ಎಂಬ ಎರಡು ಕಟಕಟೆಗಳಲ್ಲಿ ಪ್ರೇಮಿಗಳನ್ನು ನಿರ್ಬಂಧಿಸಲಾಗುತ್ತಿದೆ. ಈ ಗೋಡೆಗಳನ್ನು ಮೀರಿ ವ್ಯವಹರಿಸುವವರನ್ನು 'ನೈತಿಕ ಪೊಲೀಸರು' ತಮ್ಮ ತೋಳ್ಬಲದ ಮೂಲಕ ದಮನಿಸುವ ಪ್ರಯತ್ನವನ್ನು ನಿರಂತರ ಮಾಡುತ್ತ ಬರುತ್ತಿದ್ದಾರೆ. ಹೀಗಿದ್ದೂ ಈ ಭಿನ್ನ ಕೋಮಿನ ಯುವಕ-ಯುವತಿಯರ ನಡುವೆ ಪ್ರೇಮಪ್ರಕರಣಗಳು ಮತ್ತು ವೈವಾಹಿಕ ಸಂಬಂಧದ ಪ್ರಕರಣಗಳು ದಾಖಲಾಗುತ್ತಲೇ ಇವೆ. ಇದನ್ನು ಕಂಡು ಸಂತೋಷಪಡಬೇಕೇ ಅಥವಾ ಅಂಥ ಪ್ರಕರಣಗಳು ತಾಳುವ ರೂಪಾಂತರ ಮತ್ತು ಎದುರಿಸುವ ಬಿಕ್ಕಟ್ಟುಗಳನ್ನು ಕಂಡು ವಿಷಾದಿಸಬೇಕೇ ಎಂಬುದು ಪ್ರಗತಿಪರ ಚಿಂತಕರನ್ನು ಕಾಡುವ ಪ್ರಶ್ನೆಯಾಗಿದೆ. ಇಂಥ ನಿಲುವೇ ಪ್ರೇಮವಿವಾಹಗಳ ಕುರಿತ ಒಂದು ಸಿಂಹಾವಲೋಕನ ಕ್ರಮಕ್ಕೆ ಒತ್ತಾಯಿಸುತ್ತದೆ.

ಒಂದು ಕಾಲಕ್ಕೆ ಪ್ರೇಮವಿವಾಹ ಎರಡು ಕುಟುಂಬಗಳ ಮನೆತನಗಳ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಹೀಗಾಗಿ ಪ್ರೇಮಿಗಳು ತಮ್ಮ ತಮ್ಮ ಮನೆಯ ಹಿರಿಯರ ಅನುಮತಿಗಾಗಿ ಕಾಯುವ, ಅವರ ಮನ ಒಲಿಸುವ, ಅವರ ಚಿಂತನೆಯನ್ನು ಹದಗೊಳಿಸುವ ಕೆಲಸದಲ್ಲಿ ತೊಡಗುತ್ತಿದ್ದರು. ತಮ್ಮತಮ್ಮ ಹೆತ್ತವರು ಅವರವರ ತತ್ತ್ವ, ಸಿದ್ಧಾಂತಕ್ಕೇ ಜೋತುಬಿದ್ದಲ್ಲಿ, ಅವರನ್ನು ಮೀರಿ ಪ್ರೇಮಿಗಳು ತಮ್ಮ ಬದುಕು ಮತ್ತು ಭವಿಷ್ಯವನ್ನು ಕಟ್ಟುವತ್ತ ಮುಖ ಮಾಡುತ್ತಿದ್ದುದು ಸಾಮಾನ್ಯವಾಗಿತ್ತು. ಹೀಗೆ ಕಿರಿಯರಿಂದ ದೂರಸರಿದ ಹಿರಿಯ ತಲೆಮಾರು ದಿನಗಳೆದಂತೆ ಕಹಿಯನ್ನು ನುಂಗಿಯೋ, ಮರೆತೋ, ಮೊಮ್ಮಕ್ಕಳ ಮುಖ ಕಂಡು ನಕ್ಕದ್ದು ಹಲವರ ಬದುಕಿನ ಸತ್ಯವಾಗಿತ್ತು. ಅಂತೆಯೇ, ''ಅಯ್ಯೋ ಇವತ್ತು ಮುಖ ತಿರುಗಿಸಿಕೊಂಡರೆಂದು ಹಿಮ್ಮೆಟ್ಟುವ ಬದಲು ಒಂದು ಹೆತ್ತು ಅವರ ಕೈಗೆ ಕೊಟ್ಟುಬಿಡಿ'' ಎಂದು ನಯವಾಗಿ ಹಿತವಾಗಿ ತಿಳಿಹೇಳುವ ಅನುಭವಸ್ಥರೂ ಅಂದು ಪ್ರೇಮಿಗಳಿಗೆ ಅಲ್ಲಲ್ಲಿ ಎದುರಾಗುತ್ತಿದ್ದರು.

''ಜಾತಿ-ಜಾತಿಗಳ ನಡುವಿನ ಅಂತರ ಅಳಿಸಬೇಕಾದರೆ ಅಂತರ್‌ಜಾತೀಯ ವಿವಾಹವೊಂದೇ ಮಾರ್ಗ'' ಎಂಬ ಹುಮ್ಮಸ್ಸಿನಿಂದ ಕೆಲವರು, ಸಮವಯಸ್ಕ ಭಿನ್ನ ಲಿಂಗಗಳ ಜೊತೆ ಮುಕ್ತವಾಗಿ ಮಾತಾಡುವ, ಬೆರೆಯುವ ಅವಕಾಶ ಸಿಕ್ಕ ಸಂಭ್ರಮ ಮತ್ತು ಪುಲಕದ ಫಲವಾಗಿ ಬೆಳೆದ ಸ್ನೇಹದಿಂದ ಹಲವರು, ತಮ್ಮ ಸುತ್ತಮುತ್ತಲ ಪ್ರೇಮ ವಿವಾಹವಾದ ದಂಪತಿಗಳ ಪ್ರೇರಣೆಯಿಂದ ಇತರರು, ಅದೇ ಹಾದಿಯನ್ನು ಆಯ್ದುಕೊಳ್ಳತೊಡಗಿದ್ದು ಕಳೆದ ಶತಮಾನದ ಎಪ್ಪತ್ತು, ಎಂಬತ್ತರ ದಶಕದ ವಿದ್ಯಮಾನ. ಕುವೆಂಪು ಯುವಜನತೆಗೆ ಕರೆ ಕೊಟ್ಟ 'ವಿಚಾರಕ್ರಾಂತಿಗೆ ಆಹ್ವಾನ', 'ಮಂತ್ರ ಮಾಂಗಲ್ಯ' ಮುಂತಾದ ಸಂಗತಿಗಳ ಪ್ರಭಾವವನ್ನೂ ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ಮರೆಯುವಂತಿಲ್ಲ. ಅಂದು ಅಂತರ್‌ಜಾತೀಯ/ಧರ್ಮೀಯ ವಿವಾಹ ಆಗುವುದು ಆಗುವವರಿಗೆ ಎಷ್ಟು ಸಂಭ್ರಮದ್ದಾಗಿತ್ತೋ, ಅದನ್ನು ನಿಂತು ಮಾಡಿಸುತ್ತಿದ್ದ ನೇತಾರರಿಗೂ ಅಷ್ಟೇ ಸಂಭ್ರಮದ್ದಾಗಿತ್ತು. ಆ ವೇಳೆಗೆ ಕ್ರಿಯಾಶೀಲವಾಗಿ ಉಳಿದಿದ್ದ ದಲಿತ-ಬಂಡಾಯ ಚಳುವಳಿಗಳು ಮತ್ತು 'ಸಮುದಾಯ'ದಂಥ ಪ್ರಗತಿಪರ ಸಂಘಟನೆಗಳು ಹೀಗೆ 'ಗೋಡೆಗಳನ್ನು ಮೀರಿ ಒಂದಾದ' ಜೋಡಿಗಳನ್ನು ತಮ್ಮವರೆಂದು ಗುರುತಿಸಿ, ಮಾನ್ಯತೆ ನೀಡಿ, ಬೆಚ್ಚನೆಯ ವಾತಾವರಣವನ್ನು ಒದಗಿಸುತ್ತಿದ್ದುದೂ ಐತಿಹಾಸಿಕ ಸತ್ಯ. 'ರಕ್ತಸಂಬಂಧದ ಬಾಂಧವ್ಯವೇ

ಅಂತಿಮ ಸತ್ಯ' ಎಂದು ನಂಬಿಸಿದ ಪಾರಂಪರಿಕ ಸತ್ಯಕ್ಕಿಂತ ಸಮುದಾಯಗಳು/ಚಳುವಳಿಗಳು ತೋರಿದ 'ಬಂಧುತ್ವದ ಸತ್ಯ' ಆಪ್ಯಾಯಮಾನ ಮಾತ್ರವಲ್ಲ, ಅವು ಹೊಸ ಸತ್ಯದ ದರ್ಶನವನ್ನು ಯುವ ಪ್ರೇಮಿಗಳಿಗೆ ನೀಡಿದ್ದವು. ಇಂತಹ ಜೋಡಿಗಳು ಮುಂದೆ ತಮ್ಮಂತಹ ಚಿಂತನೆಯ ಹೊಸಹೊಸ ಬಂಧುಗಳನ್ನು ಬದುಕಿನ ಉದ್ದಗಲಕ್ಕೆ ಕಂಡುಕೊಳ್ಳುತ್ತ, ತಮ್ಮ ಪರಿಧಿಯನ್ನು ವಿಸ್ತರಿಸಿಕೊಳ್ಳುತ್ತ ಸಾಗಿದ್ದು ಎಷ್ಟು ಸತ್ಯವೋ, ಹಿರಿಯ ತಲೆಮಾರು ಈ ಬೆಳವಣಿಗೆ ಕಂಡು, ತನ್ನ ಕವಚದಿಂದ ಇಂಚಿಂಚೇ ಮುಖವನ್ನು ಹೊರತೋರುತ್ತ, ಬದಲಾವಣೆಯ ಗಾಳಿಗೆ ಒಗ್ಗಿಕೊಳ್ಳತೊಡಗಿದ್ದೂ ಅಷ್ಟೇ ಸತ್ಯ.

ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿಟ್ಟು ಒಂದು ದಶಕವನ್ನೂ ಪೂರೈಸುತ್ತಿರುವ ಈ ಹೊತ್ತಿನಲ್ಲಿ, ಯುವಜನತೆಯ ಮುಂದಿರುವ ಸಮಾಜ, ಪರಿಸರ ಮತ್ತು ಸನ್ನಿವೇಶಗಳು ನಿಜಕ್ಕೂ ಮುಕ್ತವಾಗಿ ಉಳಿದಿವೆಯೇ ಎಂದು ಪ್ರಶ್ನಿಸಿಕೊಳ್ಳುವುದು ಉಚಿತ. ಹಿಂದಿನಂತೆ ಜಾತಿಯ ಮಡಿ-ಮೈಲಿಗೆಯ ಆಚರಣೆ, ಗಂಡು-ಹೆಣ್ಣಿನ ಒಡನಾಟಕ್ಕೆ ಅಡ್ಡಿಗಳು ಇವತ್ತು ಕ್ಷೀಣಿಸಿವೆ. ಪ್ರತಿ ಮನೆಗಳಲ್ಲೂ ಒಂದು, ಎರಡು ಮಾತ್ರ ಸಂತಾನವಾದ ಕಾರಣ, ಅವರ ಬೇಡಿಕೆಗಳು, ಅವಶ್ಯಕತೆಗಳು ಹೆಚ್ಚು ಶ್ರಮವಿಲ್ಲದೆ ಪೂರೈಕೆಯಾಗುತ್ತಿವೆ. ಮುಕ್ತ ಮಾತುಕತೆ, ನೇರ ಸಂವಾದ, ದಾಕ್ಷಿಣ್ಯವಿಲ್ಲದ ವ್ಯವಹಾರ ಇಂದು ಸಾಮಾನ್ಯವಾಗುತ್ತಿವೆ. ಇಂತಹ ಹತ್ತು ಹಲವು ವಿದ್ಯಮಾನಗಳು ಯುವಜನತೆಗೆ ತೆರೆದಿಟ್ಟ ಬದುಕು ಎಂತಹದು? ಅವರು ಜಾತಿ/ಧರ್ಮಗಳ ಗೋಡೆಗಳನ್ನು ಮೀರಲು ಉತ್ಸಾಹಿಗಳಾಗಿದ್ದಾರೆಯೇ? ಉತ್ಸಾಹಿಗಳಾದವರು ವರ್ತಮಾನದ ಸಮಾಜದಲ್ಲಿ ಎಂತಹ ಸತ್ಕಾರಗಳನ್ನು ಎದುರುಗೊಳ್ಳುತ್ತಿದ್ದಾರೆ? - ಇವೇ ಮುಂತಾದ ಹಲವು ಪ್ರಶ್ನೆಗಳನ್ನು ಇಂದು ಕೇಳಿಕೊಳ್ಳಬೇಕಾಗಿದೆ. ಇಲ್ಲಿ ಭೂತಾಕಾರವಾಗಿ ನಿಂತಿರುವ ಸಮಸ್ಯೆ ಯುವಕರ ಬದುಕು ಮತ್ತು ಭವಿಷ್ಯವನ್ನು ನಿರ್ಧರಿಸುವವರು ತಾವು ಎಂದು ಗುತ್ತಿಗೆ ತೆಗೆದುಕೊಂಡ ಗುಂಪಿನದು. ಯಾರು ಯಾರೊಂದಿಗೆ ಮಾತಾಡಬೇಕು? ಎಲ್ಲಿ ಮಾತಾಡಬೇಕು? ಎಷ್ಟು ಮಾತಾಡಬೇಕು? ಅಥವಾ ಯಾರು ಯಾರೊಂದಿಗೆ ಸ್ನೇಹದಿಂದಿರಬೇಕು? ಒಡನಾಡಬೇಕು? ಎಲ್ಲಿಯವರೆಗೆ ಓಡಾಡಬೇಕು? ಇವನ್ನೆಲ್ಲಾ ಈ ಹೊರಗಿನ ಶಕ್ತಿಯೇ ನಿರ್ಧರಿಸುವ ಯಜಮಾನಿಕೆ ವಹಿಸುತ್ತಿರುವ ಈ ಹೊತ್ತಿನಲ್ಲಿ, ಯುವಜನತೆಯ ಮುಂದಿರುವ ಸವಾಲುಗಳು ಇನ್ನಷ್ಟು ಸಂಕೀರ್ಣವಾಗಿವೆ.

ಎಂದರೆ ಕಳೆದ ಮೂರು ದಶಕಗಳ ಅವಧಿಯಲ್ಲಿ ಪ್ರೇಮವಿವಾಹ ಕುರಿತ ಸಮಾಜದ ನಿಲುವು ಊಹಾತೀತವಾಗಿ ಬದಲಾಗಿದೆ. ಇಂದು ಪ್ರೇಮವಿವಾಹ, ಅಂತರ್‌ಜಾತೀಯ/ಧರ್ಮೀಯ ವಿವಾಹಗಳು ಅದನ್ನು ಆಗುವವರ, ಅವರ ಕುಟುಂಬಗಳ ಖಾಸಗಿ ಸಂಗತಿಗಳಾಗಿ ಉಳಿದಿಲ್ಲ. ಬದಲಾಗಿ ಅವು ಜಾತಿ, ಧರ್ಮಗಳ ಮುಖಂಡರ ಪ್ರತಿಷ್ಠೆಯ ಪ್ರಶ್ನೆಗಳಾಗಿ ಮಾರ್ಪಟ್ಟಿವೆ. ಇದರಿಂದ ಪ್ರತಿಯೊಂದು ಪ್ರೇಮಪ್ರಕರಣವೂ ಖಾಸಗಿ ನೆಲೆಯ ತೀರ್ಮಾನವಾಗಿ ಉಳಿಯದೆ, ಸಾರ್ವಜನಿಕ ಚರ್ಚೆಯಾಗುವ, ಮೂಲ ವ್ಯಕ್ತಿಗಳಿಗೆ ಸಂಬಂಧವೇ ಇಲ್ಲದವರ ಯಜಮಾನಿಕೆಯ



**ಸುದ್ದಿ ಓದಿದ ಬಳಿಕ ಸಿಗರೇಟ್ ಪೊಟ್ಟಣ ದೂರ ಬಿಸಾಡಿ ತಡೆ-ರಹಿತ ವಾಂತಿ ಮಾಡುತ್ತಿದ್ದಾರೆ..**

ಮೂಲಕ ತೀರ್ಮಾನವಾಗುವ ಸ್ಥಿತಿಯನ್ನು ತಲುಪಿದೆ. ಇದರ ಅಪಾಯ ಮತ್ತು ಇದು ಹುಟ್ಟುಹಾಕುವ ಅತಂತ್ರತೆಯ ಭಯ ಯುವಪ್ರೇಮಿಗಳ ಹೆಗಲೇರಿದೆ.

'ರಮ್ಯಾ ರಫೀಕನೊಂದಿಗೆ ಓಡಿಹೋದಳು', 'ಫಾತಿಮಾ ಸತೀಶನೊಂದಿಗೆ ಓಡಿಹೋದಳು' ಎಂಬಂಥ ವರದಿಗಳನ್ನು ಮಾಧ್ಯಮಗಳು ನೀಡುತ್ತಿವೆ. 'ಓಡಿಹೋದಳು/ರು' ಎಂಬ ನುಡಿಗಟ್ಟು ನೀಡುವ ಅರ್ಥ ಏನು? ಅದನ್ನು ಪ್ರೌಢರಾದ ಇಬ್ಬರು ತರುಣ/ತರುಣಿಯರ ನಿರ್ಧಾರಕ್ಕೆ 'ಓಡಿಹೋದರು' ಎಂದು ಹೆಸರಿಸುವಾಗ ನಾವು ಎಂಥ ಬೇಜವಾಬ್ದಾರಿತನವನ್ನು ಪ್ರದರ್ಶಿಸುತ್ತಿದ್ದೇವೆ, ಎಂದು ಪ್ರಶ್ನಿಸಿಕೊಳ್ಳುವುದಿಲ್ಲ. ಇನ್ನು ನೈತಿಕ ಪೊಲೀಸ್ ಪಡೆ ಹಿಂದೂ ಮತ್ತು ಮುಸ್ಲಿಂ ಸಮುದಾಯ ಎರಡರಲ್ಲೂ ತಲೆ ಎತ್ತಿದೆ. ಇಂಥ ಪ್ರಕರಣಗಳು ಜರುಗಿದಾಗ ಈ ಪಡೆ ಚುರುಕಾಗಿ, 'ಧರ್ಮಯುದ್ಧ' ಅಥವಾ 'ಧರ್ಮರಕ್ಷಣೆ'ಯ ಹೆಸರಲ್ಲಿ ಯುವ ಜೋಡಿಗಳ ಬದುಕನ್ನು ಬೇಟೆಯಾಡುವ ಕಾಯಕವನ್ನು ಆರಂಭಿಸಿವೆ. ಪ್ರೌಢರಾದ ಯುವಜನತೆಯ ಖಾಸಗಿ ನಿರ್ಧಾರ ಮತ್ತು ಖಾಸಗಿ ಬದುಕನ್ನು ಗೌರವಿಸುವ, ಅದಕ್ಕೂ ಅದರದೇ ಆದ ಘನತೆ ಇದೆ ಎಂದು ತಿಳಿಯುವ ಸಣ್ಣ ಪ್ರಯತ್ನವನ್ನೂ ಮಾಡದೆ, ಪ್ರೇಮಿಗಳ ಬೆನ್ನುಹತ್ತಿ, ಬೇಟೆಯಾಡಿ, ಅವರ ಖಾಸಗಿ ಬದುಕನ್ನು ಸಾರ್ವಜನಿಕವಾಗಿ ಬಹಿರಂಗ ಪ್ರದರ್ಶನಕ್ಕಿಡುತ್ತಿವೆ. ಇದಕ್ಕೆ ಪ್ರಿಂಟ್ ಮತ್ತು ದೃಶ್ಯ ಮಾಧ್ಯಮಗಳೂ ತಮ್ಮ ಪಾಲನ್ನು ಧಾರಾಳವಾಗಿ ನೀಡುತ್ತಿವೆ. ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಇಂತಹ ನೀಚ ಸಂಸ್ಕೃತಿ ವ್ಯಕ್ತಿಸ್ವಾತಂತ್ರ್ಯದ ಹರಣ ಎಂದು ಯಾರೂ ಗ್ರಹಿಸುತ್ತಿಲ್ಲ ಎಂಬುದೇ ವಿಷಾದನೀಯ. ಓದುವವರೂ ಇದನ್ನು ವಿರೋಧಿಸುವುದಿಲ್ಲ. ಬದಲಾಗಿ ಪ್ರೇಮಿಗಳಲ್ಲಿ ಯಾರ್‍ಯಾರು ಯಾವ್ಯಾವ ಜಾತಿ ಎಂದು ಗುರುತಿಸಿ, "ಓ... ಈಗ ಇಂಥ ಗಲಾಟೆ ಆಗಬಹುದು" ಎಂದು ಊಹಿಸಿ, ತಣ್ಣಗಾಗಿಬಿಡುತ್ತಾರೆ.

ಇತ್ತೀಚೆಗೆ ಅಂತರ್‌ಮತೀಯ, ಅದರಲ್ಲೂ ಹಿಂದೂ-ಮುಸ್ಲಿಂ ಸಮುದಾಯದ ತರುಣ-ತರುಣಿಯರ ನಡುವಿನ ಪ್ರೇಮಪ್ರಕರಣಗಳು ಮತ್ತು ವಿವಾಹ ಸಂಬಂಧಗಳು ಹೆಚ್ಚುತ್ತಿವೆ; ಜೊತೆಗೆ ಸಮಾಜದಲ್ಲಿ ಒಂದು ಬಗೆಯ ತಲ್ಲಣಗಳನ್ನು ಉಂಟುಮಾಡುತ್ತಿವೆ. ಇದಕ್ಕೆ ಮುಖ್ಯ ಕಾರಣವೆಂದರೆ ಅಂಥ ವಿವಾಹಗಳು ಹೆಚ್ಚಾಗಿ ಮತಾಂತರದ ಬಳಿಕವೇ ಅಥವಾ ಮತಾಂತರದ ಮೂಲಕವೇ ನಡೆದಿವೆ, ನಡೆಯುತ್ತಿವೆ. ಇಂಥ ಪ್ರಕರಣಗಳು ಬೆಳಕಿಗೆ ಬಂದಾಗ, ತಮ್ಮ ಧರ್ಮದ ಹುಡುಗಿ ಅನ್ಯ ಧರ್ಮಕ್ಕೆ ಮತಾಂತರಗೊಂಡದ್ದನ್ನು ಸಹಿಸದ ಆಯಾ ಧಾರ್ಮಿಕ ಮೂಲಭೂತವಾದಿ ಗುಂಪು "ಪ್ರೇಮಿಸಿದ್ದು ನಿಜವಾಗಿದ್ದಲ್ಲಿ ಮತಾಂತರ ಆಗುವ ಅಗತ್ಯವಿತ್ತೇ?" ಎಂಬ ಪ್ರಶ್ನೆಯನ್ನು ಇಂದು ಕೇಳುತ್ತಿದೆ. ಎಂಥ ಪ್ರಗತಿಪರರಿಗೂ ಈ ಪ್ರಶ್ನೆ ಕೇಳಬೇಕಾದ್ದೇ ಎಂದು ಅನಿಸಿಬಿಟ್ಟರೆ ಅಚ್ಚರಿಯಿಲ್ಲ.

ಪ್ರೇಮವಿವಾಹಗಳು ಮನೆಮನೆಯ ಸತ್ಯವಾದಾಗಲೂ, ನಮ್ಮ ಮಕ್ಕಳೇ ಅಂತರ್‌ಜಾತೀಯ ವಿವಾಹ ಆಗಿದ್ದಾರೆಂದು ಬೀಗುವುದು ಇಂದು ಕಂಡುಬರುತ್ತಿರುವಾಗಲೂ, ಒಂದಷ್ಟು ಮನಸ್ಸುಗಳು ಮತ್ತು ಶಕ್ತಿಗಳು ಯುವಜನತೆಯನ್ನು ಹಿಮ್ಮುಖ ನಡೆಗೆ ಸೆಳೆಯುತ್ತಿವೆ. ಅಂತರ್‌ಧರ್ಮೀಯ/ಜಾತೀಯ ವಿವಾಹವಾದ ತಮ್ಮ ಕಂದಮ್ಮಗಳನ್ನೇ ಸುಡುವ, ಗುಂಡಿಟ್ಟು ಕೊಲ್ಲುವ, ಮಚ್ಚಿನಿಂದ ಇರಿಯುವ ಪ್ರಕರಣಗಳು ಅಲ್ಲಲ್ಲಿ ದಾಖಲಾಗುತ್ತಲೇ ಇವೆ. ಇಂತಹ ಅಮಾನವೀಯ ಕೊಲೆಗಳನ್ನು 'ಮರ್ಯಾದಾ ಹತ್ಯೆ'ಗಳೆಂದು ಅಭಿಮಾನದಿಂದ ಹೇಳುತ್ತ, ಅಂತಹ ಕಾರ್ಯವೆಸಗಿ ಜೈಲಿಗೆ ಹೋಗುತ್ತಿರುವಾಗಲೂ 'ಶೌರ್ಯದ ಕಾರ್ಯ ಮಾಡಿದಂತೆ' ಬೀಗುವ ಮುಖಗಳನ್ನು ಪತ್ರಿಕೆಗಳು ಬಹಿರಂಗಪಡಿಸುತ್ತಿವೆ. ಇಂತಹ ಅಡ್ಡಿಗಳನ್ನು ಮರೆತೂ ಒಂದಾಗುವ ಎಳೆಯ ಜೋಡಿಗಳಿಗೆ ಬೆಚ್ಚನೆಯ ವಾತಾವರಣ ನೀಡುವ ಸಮುದಾಯಗಳು, ಕುಟುಂಬಗಳು ಎಷ್ಟಿವೆ? ಕಾಲದ ಜೊತೆ ಜಂಗಿ ಕುಸ್ತಿಗೆ ಇಳಿದಂತೆ ಸದಾ ಓಡುವ ಪ್ರತಿಯೊಬ್ಬರೂ ತಮ್ಮ 'ಕುಟುಂಬದ ಖಾಸಗಿ ಸಮಯ'ಕ್ಕೇ ಗುದ್ದಾಡಬೇಕಿರುವಾಗ, ಇನ್ನೊಬ್ಬರ ಬದುಕಿಗೆ ಆಸರೆಯಾಗುವ ಮಾತಂತೂ ದೂರದ ಸಂಗತಿ. ಇಂಥ ವಿಷಮ ಪರಿಸ್ಥಿತಿಯ ಫಲವಾಗಿ ನವ ತರುಣ ಪಡೆ ಇರುಳು ಕಂಡ ಬಾವಿಯಲ್ಲಿ ಹಗಲು ಬೀಳುತ್ತಿದೆ. ಈ ಎಲ್ಲ ಹಿನ್ನೆಲೆಗಳಲ್ಲಿ ಅಂತರ್‌ಮತೀಯ ವಿವಾಹಗಳು ಮತಾಂತರದಲ್ಲಿ ಕೊನೆಗೊಳ್ಳುತ್ತಿವೆ ಎನಿಸುತ್ತದೆ. ಇದಕ್ಕೆ ಯುವ ಪ್ರೇಮಿಗಳನ್ನು ಆಕ್ಷೇಪಿಸುವ, ಅವರ ವಿರುದ್ಧ ಸಮರ ಸಾರುವ ಬದಲು, ಅವರ ಆತಂಕಗಳನ್ನು ಅರ್ಥಮಾಡಿಕೊಳ್ಳುವ, ಅವರಿಗೆ ಸುರಕ್ಷಿತವಾಗಿ ಬದುಕಬಹುದಾದ ವಾತಾವರಣವನ್ನು ನಿರ್ಮಿಸುವ ಮತ್ತು ಬೆಚ್ಚನೆಯ ಪ್ರೀತಿಯನ್ನು ನೀಡುವ ಕೆಲಸ ಮಾನವೀಯತೆ ಎನಿಸಿಕೊಳ್ಳುತ್ತದೆ. ಅದು, ವೈಯಕ್ತಿಕ ನೆಲೆಯದೇ ಆಗಿರಲಿ, ಸಾಂಘಿಕ ನೆಲೆಯದೇ ಆಗಿರಲಿ, ಇಂದಿನ ಜರೂರು ಕೂಡ ಆಗಿದೆ.

ಡಾ॥ ಸಬಿಹಾ ಭೂಮೀಗೌಡ
ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳೂರು.

# ಸಮಾಜ ಮತ್ತು ಸಮೂಹ ಮಾಧ್ಯಮಗಳು




**ಬಿ. ಸುರೇಶ**

**ಸ**ಮಾಜ ಮತ್ತು ಸಮೂಹ ಎನ್ನುವಲ್ಲಿ ಎರಡು ಬಹುವಚನಗಳಿವೆ. ಇಲ್ಲಿ 'ಸಮಾಜ' ಎಂಬುದು ಸಮಾನ ಮನಸ್ಕರಾಗಿ ಬದುಕುವ ಜನಗಳ ಜಗತ್ತು, 'ಸಮೂಹ' ಎಂದರೆ ಒಂದು ಊಹಿತ ಸಮುದಾಯ. ಇಲ್ಲಿ 'ಊಹಿತ' ಎನ್ನುವುದು 'ಮಾಧ್ಯಮ' ಎಂಬ 'ಉದ್ಯಮ'ವು ಕಲ್ಪಿಸಿಕೊಂಡಿರುವ ಒಂದು ಸಮುದಾಯದ ಗುಂಪಿನ ಮೊತ್ತ. ಈ ಸಮೂಹಕ್ಕೆ ಆಕಾರವಿಲ್ಲ. ಇಂಥದೇ ಸ್ಥಳದಲ್ಲಿ ಇದು ಇದೆ ಎಂಬುದನ್ನು ಹೇಳಲಾಗುವುದಿಲ್ಲ. ಆದರೆ ಅಂಕಿ - ಸಂಖ್ಯೆಯಿದೆ. ಆ ಅಂಕಿ-ಸಂಖ್ಯೆಯಿಂದಲೇ ಈ ಮಾಧ್ಯಮ ಎಂದು ಕರೆಸಿಕೊಳ್ಳುವ ಉದ್ಯಮಕ್ಕೆ ಆದಾಯ. ಈ ವಿವರಗಳಿಗೆ ಹೋಗುವುದಕ್ಕೂ ಮುಂಚಿತವಾಗಿ ಈ ಮಾಧ್ಯಮ ಎಂಬ 'ಸಮೂಹಕ್ಕೆ ಸನ್ನಿ'ಯನ್ನು ನೀಡುವ ಉದ್ಯಮವನ್ನು ತಿಳಿದುಕೊಳ್ಳೋಣ.

**'ಸಮೂಹ ಮಾಧ್ಯಮ' ಎಂದರೆ ಏನು ?**

'ಸಮೂಹ ಮಾಧ್ಯಮ' ಎನ್ನುವುದೊಂದು ಅಪಾಯಕಾರಿ ಎನ್ನುವಷ್ಟು ಸರಳವಾಗಿ ಕಾಣುವ ಪದವಾದರೂ ಅದರ ಪರಿಧಿಯೊಳಗೆ ಅನೇಕಾನೇಕ ಭಿನ್ನ ಅಭಿಪ್ರಾಯ, ಭಿನ್ನ ಸಾಂಸ್ಕೃತಿಕ ಹಿನ್ನೆಲೆ, ಭಿನ್ನ ದೃಷ್ಟಿಕೋನ ಮತ್ತು ರಾಜಕೀಯ ನಿಲುವುಗಳಿರುವ ವ್ಯಕ್ತಿಗಳು ಮತ್ತು ಸಂಸ್ಥೆಗಳು ಇರುತ್ತವೆ. ಸಮೂಹ ಮಾಧ್ಯಮ ಎಂಬುದರೊಳಗೆ ಮಾಹಿತಿಯನ್ನು ನೀಡಬಲ್ಲ ಎಲ್ಲ ರೀತಿಯ ಪ್ರಕಾರಗಳು ಇವೆ. ಜನ ನೋಡುವಂತೆ ರಸ್ತೆಯ ಬದಿಯಲ್ಲಿ ತಗುಲಿಹಾಕಿದ ಯಾರದೋ ಮನೆಯ ಗೃಹಪ್ರವೇಶದ ಕೈಬರಹದ ಸಣ್ಣ ಬೋರ್ಡ್‌ನಿಂದ ಹಿಡಿದು, ಕಾಡಿನ ನಡುವೆ ಡ್ರಮ್ಮುಗಳ ಮೂಲಕವೇ ಸುದ್ದಿ ಹರಡುತ್ತಿದ್ದ ಜನಗಳವರೆಗೆ, ಅಂತರರಾಷ್ಟ್ರೀಯ ಸುದ್ದಿಜಾಲ ಹೊಂದಿರುವ ಅಂತರ್ಜಾಲ, ದೂರದರ್ಶನ, ಪತ್ರಿಕೆಗಳವರೆಗೆ ಎಲ್ಲವೂ ಈ ಪ್ರಕಾರದಲ್ಲಿ ಸೇರುತ್ತವೆ. ಆದರೆ ಒಂದು ಪ್ರಕಾರವನ್ನು 'ಸಮೂಹ ಮಾಧ್ಯಮ' ಎಂದು ಗುರುತಿಸುವುದಕ್ಕೆ ಇಷ್ಟೇ ಸಂಖ್ಯೆಯ ಜನ ಅದನ್ನು ಗಮನಿಸಬೇಕು ಎಂದೇನೂ ಇಲ್ಲ. ಒಬ್ಬ ವ್ಯಕ್ತಿಯು ಸರ್ಕಲ್ಲಿನಲ್ಲಿ ನಿಂತು ತಾನು ಮಾರುತ್ತಿರುವ ಸರಕನ್ನು ವಿವರಿಸುತ್ತಾ ಇದ್ದು, ಆ ಕೂಗನ್ನು ಸುತ್ತ ಇದ್ದ ಸಾವಿರಾರು ಜನ ಕೇಳಿಸಿಕೊಳ್ಳದೆ ನಡೆಯುತ್ತಾ ಇದ್ದರೂ ಆ ವ್ಯಕ್ತಿಯ ಕೂಗನ್ನು ಸಮೂಹ ಮಾಧ್ಯಮದ ಪ್ರಕಾರಗಳ ಒಳಗೆ ಸೇರಿಸಬೇಕಾಗುತ್ತದೆ. ನಾವು ಕೊಳ್ಳಲಾಗದ ಭಾರೀ ಕಾರಿನ ಜಾಹೀರಾತಿನಿಂದ ಹಿಡಿದು ವಿಶ್ವಸಂಸ್ಥೆಯ ಹೊಸ ನೀತಿಯವರೆಗೆ ಎಲ್ಲವೂ ಈ ಮಾಧ್ಯಮದಲ್ಲಿ ಕಾಣಿಸಿಕೊಳ್ಳುತ್ತವೆ. ಹೀಗಾಗಿ 'ಮಾಧ್ಯಮ' ಎಂಬುದರ ವ್ಯಾಪ್ತಿ ದೊಡ್ಡದು. ಇಂತಹುದರ ಬಗ್ಗೆ ಮಾತಿಗೆ ನಿಂತಾಗ ಅದಷ್ಟೂ ವಿವರವನ್ನು ಒಂದೆಡೆ ಹೇಳುವುದು ಸುಲಭಸಾಧ್ಯವಲ್ಲ. ಹಾಗಾಗಿ 'ಬಹುರಾಷ್ಟ್ರೀಯ ಕಂಪೆನಿಗಳ ಮತ್ತು ಬೃಹತ್ ಬಂಡವಾಳದಾರರು ಹಣ ಹೂಡಿರುವ, ಬೃಹತ್ ಪ್ರಕಾಶನ ಸಂಸ್ಥೆಗಳ ತಯಾರಿಕೆಗಳನ್ನು ಮಾತ್ರ' ಎಂದು ಗುರುತಿಸಿಕೊಂಡು ಈ ಲೇಖನದಲ್ಲಿ 'ಸಮಾಜ ಮತ್ತು ಸಮೂಹ ಮಾಧ್ಯಮಗಳು' ಎಂಬ ವಿಷಯದ ಬಗ್ಗೆ ಕೆಲವು ಮಾತುಗಳನ್ನು ಆಡುತ್ತೇನೆ. (ಈ ಮಾತಾಡುವಾಗ ಅನೇಕ ಸಣ್ಣ ಪತ್ರಿಕೆಗಳು ಮತ್ತು ಸಣ್ಣದು ಎಂದು ಕರೆಸಿಕೊಳ್ಳುತ್ತಲೇ ದೊಡ್ಡ ಕೆಲಸ ಮಾಡುತ್ತಿರುವ ಕೆಲವು ವಿವರಗಳನ್ನು ಸಹ ನೀಡುತ್ತೇನೆ. ಇಷ್ಟಾದರೂ ಇದು ಪೂರ್ಣ ಪ್ರಮಾಣದ ಸಮೂಹ ಮಾಧ್ಯಮಗಳ ವಿಶ್ಲೇಷಣೆ ಅಲ್ಲ ಎಂಬುದು ತಮಗೆ ತಿಳಿದಿರಲಿ.) ಮಾಧ್ಯಮದ ಬಗ್ಗೆ ಮಾತಾಡುವಾಗ ಮತ್ತೊಂದು ಗೊಂದಲ ಹುಟ್ಟಿಸುವ ಪದ 'ಸುದ್ದಿ ಮಾಧ್ಯಮ'. ಇದರಡಿಯಲ್ಲಿ ಸುದ್ದಿ ನೀಡುವ ಎಲ್ಲಾ ಮಾಧ್ಯಮಗಳೂ ಬರುತ್ತವೆ. ಇದನ್ನು ನ್ಯೂಸ್ ಮೀಡಿಯ ಅನ್ನುವ ಹಾಗೆಯೇ ಪ್ರೆಸ್ ಎಂತಲೂ ಕರೆಯುತ್ತಾರೆ. ಯಾವುದು ಸುದ್ದಿ? ಯಾವುದು ಮನರಂಜನೆ? ಎಂಬುದು ಸದಾಕಾಲ 'ಜಾಣ್ಮೆ'ಯ ವಿಷಯ. ತಾಂತ್ರಿಕವಾಗಿ ಹೇಳುವುದಾದರೆ ಸುದ್ದಿ ಎಂದರೆ ವಾಸ್ತವ ಮತ್ತು ವಾಸ್ತವದ ವ್ಯಾಖ್ಯಾನ. ಇದನ್ನು ಆಂಗ್ಲರು ಫ್ಯಾಕ್ಟ್ ಎನ್ನುತ್ತಾರೆ. ಈ ಫ್ಯಾಕ್ಟ್‌ಗಳ ಇಂಟರ್‌ಪ್ರಿಟೇಶನ್ ಇದ್ಯಲ್ಲ... ಅಲ್ಲಿ ಸುದ್ದಿಯೇ ಮನರಂಜನೆಯೂ ಆಗಬಹುದು, ಮನರಂಜನೆಯು ಸುದ್ದಿಯೂ ಆಗಬಹುದು. ಈ ಅಂತರದ ಸೃಷ್ಟಿಗೆ ಅನೇಕ ಕಾರಣಗಳಿವೆ. ಸಂಪಾದಕರ ಮನಃಸ್ಥಿತಿ, ಸಂಪಾದಕೀಯ ತಂಡದ ದೃಷ್ಟಿ, ಹೀಗೆ ಹತ್ತು ಹಲವು ವಿವರಗಳಿಂದ ಮಾಧ್ಯಮಗಳ ಮೂಲಕ ಸುದ್ದಿ ಬಿಂಬಿತವಾಗುತ್ತದೆ.

ಮನರಂಜನಾ ಮಾಧ್ಯಮಗಳ ವಿಸ್ತಾರವೂ ದೊಡ್ಡದು. ಅವುಗಳನ್ನು ಕುರಿತು ಮಾತಾಡಲು ಹೊರಟರೆ ಒಂದು ಇನ್ನೊಂದರ ಒಳಗೆ ಸೇರಿ ಗೊಂದಲವಾಗಬಹುದು. ಹಾಗಾಗಿ 'ಸುದ್ದಿ ಮಾಧ್ಯಮ'ಗಳಿಗೆ ಈ ಲೇಖನವನ್ನು ಸೀಮಿತಗೊಳಿಸುತ್ತೇನೆ. (ನಾನು ಮನರಂಜನಾ ಮಾಧ್ಯಮದಿಂದಲೇ ಅನ್ನ

ಇಂದಿನ ಉದ್ಯಮಶೀಲ ಜಗತ್ತಿನಲ್ಲಿ ಸುದ್ದಿ ಮಾಧ್ಯಮಗಳು ಉದ್ಯಮಗಳಾಗಿವೆ ಮತ್ತು ಅವು ಬೃಹತ್ತಾಗಿಯೂ ಬೆಳೆದಿವೆ. ಮನೆಯ ಹಾಲ್‌ನಲ್ಲಿ ಇರುವ ಟೆಲಿವಿಷನ್, ಮನೆಬಾಗಿಲಿಗೆ ಸೂರ್ಯನಿಗೂ ಮುಂಚೆಯೇ ಬಂದು ಬೀಳುವ ಪತ್ರಿಕೆ, ಕಾರಿನಲ್ಲಿ ಗುಂಯ್‌ಗುಡುವ ರೇಡಿಯೋ, ಕೆಲಸದ ಜಾಗದಲ್ಲಿ ಇರುವ ಕಂಪ್ಯೂಟರ್/ಇಂಟರ್‌ನೆಟ್, ಸಂಚಾರಿ [ಮೊಬೈಲ್] ದೂರವಾಣಿಗೆ ಬರುವ ಸಂದೇಶಗಳು ಮತ್ತು ಸುದ್ದಿಗಳು, ಈ-ಅಂಚೆಗೆ ಬರುವ ಸುದ್ದಿಗಳು ಹೀಗೆ ಎಲ್ಲವೂ ಏಕಕಾಲಕ್ಕೆ ಯಾವುದೋ ಸರಕನ್ನು ಮಾರುತ್ತಾ ಹೊಸ ಸುದ್ದಿಯನ್ನು ನೀಡುತ್ತಲೇ ಇರುತ್ತವೆ. ಔದ್ಯಮಿಕ ದೇಶಗಳಿಗಂತೂ ಈ ಮಾಧ್ಯಮಗಳು ಅನಿವಾರ್ಯ ಅಗತ್ಯ. ಈ ಮಾಧ್ಯಮದ ಮೂಲಕವೇ ನಮ್ಮ ಎಲ್ಲಾ ಉದ್ದಿಮೆಗಳ ಸರಕನ್ನು ಕೊಳ್ಳುವ ಬೃಹತ್ ಸಂತೆಯಾಗಿ ಜಗತ್ತನ್ನು ಮಾರ್ಪಡಿಸಲಾಗಿದೆ. ಜಾಗತಿಕ ಮತ್ತು ರಾಷ್ಟ್ರೀಯ ಸುದ್ದಿಗಳಿಗೆ ನಾವು ಈ ಮಾಧ್ಯಮಗಳನ್ನೇ ಅವಲಂಬಿಸಿದ್ದೇವೆ.

ಹುಟ್ಟಿಸಿಕೊಳ್ಳುತ್ತಾ ಇರುವುದರಿಂದಲೂ ಹೀಗೆ ಆಯ್ಕೆ ಮಾಡಿಕೊಳ್ಳಬೇಕಾಗಿದೆ. ಈ ಅನಿವಾರ್ಯವನ್ನು ಬಂಧುಗಳು ಅರ್ಥಮಾಡಿಕೊಳ್ಳುತ್ತೀರಿ ಅನ್ನುವ ನಂಬಿಕೆಯಿಂದ ಮುಂದುವರಿಯುತ್ತೇನೆ.)

**ಮಾಧ್ಯಮದ ಪಾರಮ್ಯ**

ಇಂದಿನ ಉದ್ಯಮಶೀಲ ಜಗತ್ತಿನಲ್ಲಿ ಸುದ್ದಿ ಮಾಧ್ಯಮಗಳು ಉದ್ಯಮಗಳಾಗಿವೆ ಮತ್ತು ಅವು ಬೃಹತ್ತಾಗಿಯೂ ಬೆಳೆದಿವೆ. ಮನೆಯ ಹಾಲ್‌ನಲ್ಲಿ ಇರುವ ಟೆಲಿವಿಷನ್, ಮನೆಬಾಗಿಲಿಗೆ ಸೂರ್ಯನಿಗೂ ಮುಂಚೆಯೇ ಬಂದು ಬೀಳುವ ಪತ್ರಿಕೆ, ಕಾರಿನಲ್ಲಿ ಗುಂಯ್‌ಗುಡುವ ರೇಡಿಯೋ, ಕೆಲಸದ ಜಾಗದಲ್ಲಿ ಇರುವ ಕಂಪ್ಯೂಟರ್/ಇಂಟರ್‌ನೆಟ್, ಸಂಚಾರಿ (ಮೊಬೈಲ್) ದೂರವಾಣಿಗೆ ಬರುವ ಸಂದೇಶಗಳು ಮತ್ತು ಸುದ್ದಿಗಳು, ಈ-ಅಂಚೆಗೆ ಬರುವ ಸುದ್ದಿಗಳು ಹೀಗೆ ಎಲ್ಲವೂ ಏಕಕಾಲಕ್ಕೆ ಯಾವುದೋ ಸರಕನ್ನು ಮಾರುತ್ತಾ ಹೊಸ ಸುದ್ದಿಯನ್ನು ನೀಡುತ್ತಲೇ ಇರುತ್ತವೆ. ಔದ್ಯಮಿಕ ದೇಶಗಳಿಗಂತೂ ಈ ಮಾಧ್ಯಮಗಳು ಅನಿವಾರ್ಯ ಅಗತ್ಯ. ಈ ಮಾಧ್ಯಮದ ಮೂಲಕವೆ ನಮ್ಮ ಎಲ್ಲಾ ಉದ್ದಿಮೆಗಳ ಸರಕನ್ನು ಕೊಳ್ಳುವ ಬೃಹತ್ ಸಂತೆಯಾಗಿ ಜಗತ್ತನ್ನು ಮಾರ್ಪಡಿಸಲಾಗಿದೆ. ಜಾಗತಿಕ ಮತ್ತು ರಾಷ್ಟ್ರೀಯ ಸುದ್ದಿಗಳಿಗೆ ನಾವು ಈ ಮಾಧ್ಯಮಗಳನ್ನೇ ಅವಲಂಬಿಸಿದ್ದೇವೆ. ನಮ್ಮ ಸುತ್ತಲ ಸಣ್ಣ ವಿವರಗಳನ್ನು ಮಾತ್ರ ನಾವೇ ತಿಳಿದುಕೊಳ್ಳಬೇಕು. ನಿಮ್ಮ ಮನೆಯ ಗುಲಾಬಿ ಗಿಡದಲ್ಲಿ ಹೂ ಅರಳಿದ ವಿವರ ಮಾಧ್ಯಮಕ್ಕೆ ಸುದ್ದಿಯಲ್ಲ. ಆದರೆ ನಿಮ್ಮ ಮನೆಮಗಳಿಗೆ ಅದು ದೊಡ್ಡ ಸುದ್ದಿ. ಆ ದಿನ ಆ ಮನೆಯ ದೇವರಿಗೋ ಇಲ್ಲ ಆ ಮನೆಯ ಮಗಳ ಸಿರಿಮುಡಿಗೋ ಅಪರೂಪದ ಬಣ್ಣ ಮತ್ತು ಘಮ ದಕ್ಕುತ್ತದೆ ಎಂಬುದು ಆ ಮನೆಯ ಒಳಗಿನ ಸಂಭ್ರಮ. ಅದು ಮಾಧ್ಯಮಕ್ಕೆ ಮುಖ್ಯವಲ್ಲ. ನಿಮ್ಮ ಏರಿಯಾದಲ್ಲಿ ನಡೆದ ಕ್ರಿಕೆಟ್‌ನಲ್ಲಿ ಸೆಂಚುರಿ ಹೊಡೆದವನು ಮಾರನೆಯ ದಿನ ಮಾಧ್ಯಮಗಳಲ್ಲಿ ಮುಖಪುಟದಲ್ಲಿ ಕಾಣಿಸುವುದಿಲ್ಲ. ಮಾಧ್ಯಮಕ್ಕೆ ಯಾರಿಂದ ಸರಕು ಮಾರಾಟ ಸಾಧ್ಯವೋ ಅಂತಹವನು ಸೆಂಚುರಿ ಹೊಡೆದರೆ ಮಾತ್ರ ಸುದ್ದಿ. ನಿನ್ನೆ ನಿಮ್ಮೂರಿನಲ್ಲಿ ಆದ ಅದ್ಭುತವಾದ ಪ್ರದರ್ಶನ ಮಾಧ್ಯಮಕ್ಕೆ ಸರಕಲ್ಲ. ಆದರೆ ಯಾವುದೋ ಭಾರೀ ನಟ ತನ್ನ ಹೆಂಡತಿಯನ್ನು ಬಿಟ್ಟು ಇನ್ಯಾರ ಜೊತೆಗೋ ಬೀದಿ ಸುತ್ತಿದರೆ ಅದು ಮಾಧ್ಯಮಕ್ಕೆ ಸರಕು. ಹೀಗಾಗಿಯೇ ಮಾಧ್ಯಮಗಳು ಕೇವಲ ಸುದ್ದಿಯನ್ನು ಹಂಚುವುದಿಲ್ಲ. ಬದಲಿಗೆ ಯಾವುದು ಸುದ್ದಿಯಾಗಬೇಕು ಎಂಬುದನ್ನೂ ನಿರ್ಧರಿಸುತ್ತವೆ.




ಒಂದು ವಾಸ್ತವ ವಿವರವನ್ನು ಸುದ್ದಿ ಎಂದು ಗುರುತಿಸಿದ ಮೇಲೆ ಅದಕ್ಕೆ ಎಷ್ಟು ಅವಕಾಶ (ಸ್ಪೇಸ್) ಕೊಡಬೇಕೆಂಬುದು ಸಹ ಒಂದು ರಾಜಕೀಯ ನಿರ್ಧಾರವೇ ಆಗಿರುತ್ತದೆ. ಆ ಸುದ್ದಿಯು ಯಾವ ಪುಟದಲ್ಲಿ ಬರಬೇಕು ಎನ್ನುವುದು ಸಹ ಅದೇ ರಾಜಕೀಯ ನಿರ್ಧಾರದಿಂದ ಪ್ರೇರಿತವಾಗಿರುತ್ತದೆ. ಒಂದು ಪತ್ರಿಕೆಗೆ ಆ ಊರಿನಲ್ಲಿ ಆದ ಕಟ್ಟಡದಲ್ಲಿನ ಬೆಂಕಿ ದುರಂತ ಮುಖಪುಟದ ಸುದ್ದಿಯಾದರೆ, ಅದೇ ಊರಲ್ಲಿ ಗಂಡನಿಂದ ಬೆಂಕಿಗಾಹುತಿಯಾದ ಹೆಣ್ಣುಮಗಳ ವಿವರ ಎರಡನೆಯ ಅಥವಾ ಮೂರನೆಯ ಪುಟದ ಸಿಂಗಲ್ ಕಾಲಂ ಸುದ್ದಿಯಾಗುತ್ತದೆ. ಪ್ರತೀ ವರ್ಷ ಬಡತನದ ಕಾರಣಕ್ಕೋ ಅಥವಾ ಸಾಲದ ಹೊರೆಗೋ ಆತ್ಮಹತ್ಯೆ ಮಾಡಿಕೊಳ್ಳುವ ರೈತರ ಸುದ್ದಿಯು ಮಾಧ್ಯಮಗಳಿಗೆ ಅನಗತ್ಯ. ಆದರೆ ಒಬ್ಬ ಸಾಫ್ಟ್‌ವೇರ್ ಎಂಜಿನಿಯರ್‌ನ ಆತ್ಮಹತ್ಯೆಯೋ - ಕೊಲೆಯೋ ಆದರೆ ಅದು ಪ್ರಮುಖ ಸುದ್ದಿಯಾಗುತ್ತದೆ. ಸರ್ ಎಂ. ವಿಶ್ವೇಶ್ವರಯ್ಯನವರ ಪ್ರತಿಮೆಯ ಬಳಿಯಲ್ಲಿ (ಅಥವಾ ಮಹಾತ್ಮ ಗಾಂಧೀಜಿಯವರ ವಿಗ್ರಹದ ಬಳಿಯಲ್ಲಿ) ಯಾರೋ ಗಲೀಜು ಮಾಡಿದರೆ ಅದು ಸುದ್ದಿಯಾಗುವುದಿಲ್ಲ. ಬದಲಿಗೆ ಅಂಬೇಡ್ಕರ್ (ಅಥವಾ ವರನಟ ಡಾ|| ರಾಜ್‌ಕುಮಾರ್) ವಿಗ್ರಹದ ಬಳಿ ಯಾರೋ ಏನೋ ಮಾಡಿದರೂ ಅದು ಭಾರೀ ಸುದ್ದಿಯಾಗುತ್ತದೆ.

ಥಟ್ಟನೆ ನನಗೊಂದು ಲ್ಯಾಟಿನ್ ಅಮೆರಿಕನ್ ಕತೆ ನೆನಪಾಗುತ್ತಿದೆ. ಕೆ. ಪಿ. ಸುರೇಶ್ ಅವರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅಮೆರಿಕಾ ಖಂಡಕ್ಕೆ ಬ್ರಿಟಿಷ್ ಮತ್ತು ಪೋರ್ಚುಗೀಸರು ಹೋದ ಸಂದರ್ಭದಲ್ಲಿ ಅಲ್ಲಿನ ಅನೇಕ ಮೂಲನಿವಾಸಿಗಳನ್ನು ಕ್ರೈಸ್ತ ಧರ್ಮಕ್ಕೆ ಮತಾಂತರ ಮಾಡುತ್ತಾರೆ. ಈ ಮತಾಂತರವೂ ಒಂದು ರಾಜಕೀಯವೇ. ಆ ಬಗ್ಗೆ ಮಾತಾಡಲು ಇದು ಸ್ಥಳವಲ್ಲ. ಹಾಗಾಗಿ ಕತೆಗೆ ಮರಳುತ್ತೇನೆ. ಹೀಗೆ ಮತಾಂತರಗೊಂಡ ಅಮೆರಿಕನ್ ಮೂಲ ನಿವಾಸಿಗಳು ತಮ್ಮ ಹೊಲಗಳಿಗೆ ಉಳುಮೆ ಮಾಡುವ ಮೊದಲು ಕ್ರೈಸ್ತನ ವಿಗ್ರಹವುಳ್ಳ ಕೊರಳ ಪದಕವನ್ನು ಪೂಜಿಸಿ, ಅದೇ ಹೊಲದಲ್ಲಿ ಹೂಳುತ್ತಾರೆ. ಅವರಿಗೆ ಈ ಕೆಲಸ ಮಾಡುವಾಗ ಹೊಸ ದೇವರಿಂದ ತಮ್ಮ ಹೊಲ ಸಮೃದ್ಧಿಯಾಗುತ್ತದೆ ಎಂಬ ನಂಬಿಕೆ ಇರುತ್ತದೆ. ಆದರೆ ಯೂರೋಪಿನ 'ಸುದ್ದಿ'ಗಾರರಿಗೆ ಇದು ಅಕ್ಷಮ್ಯ ಅಪರಾಧವಾಗಿ ಕಾಣುತ್ತದೆ. ತಮ್ಮ ಭಾಷೆ ತಿಳಿಯದ ಜನರನ್ನು ಅವರು ತಮ್ಮ ಕೋರ್ಟಿಗೆ ಕರೆತರುತ್ತಾರೆ. ಭಾಷೆ ಬಾರದವರ ಉತ್ತರವನ್ನೂ ಅರಿಯದ ಕೋರ್ಟ್ ಆ ಮೂಲನಿವಾಸಿಗಳಿಗೆ ಗಲ್ಲು ಶಿಕ್ಷೆ ವಿಧಿಸುತ್ತದೆ. ಹೀಗೆ ಸಂಸ್ಕೃತಿಯ ಅಂತರದಿಂದ ಆದ ಪೂಜಾ ವ್ಯತ್ಯಾಸವು ನಂತರದಲ್ಲಿ ಸುದ್ದಿಯಾಗುವಾಗ ಯಾರಿಗೆ ಬೇಕಾದರೂ ಉರುಳನ್ನು ತರಬಹುದು.

ಒಂದು ಮಾಧ್ಯಮ ಸಂಸ್ಥೆಯು ಆ ದಿನದ ಪ್ರಧಾನ ಸುದ್ದಿಯನ್ನು ಆರಿಸುವುದು ಕೂಡ ಒಂದು ವಿಶಿಷ್ಟ ರಾಜಕಾರಣ. (ಇದನ್ನು ಮಾಧ್ಯಮದ ಭಾಷೆಯಲ್ಲಿ ಟಾಪ್ ಸ್ಟೋರಿ ಎನ್ನಲಾಗುತ್ತದೆ. ಹೀಗೆ ಸುದ್ದಿಯನ್ನು 'ಕತೆ' ಎಂದು ಮಾಧ್ಯಮದವರು ಗುರುತಿಸುವುದರ ಹಿಂದೆ ಇರುವುದು ಕೂಡ ಮಾರಾಟದ ಗುಣವೇ.) ಯಾವ ಸುದ್ದಿಗೆ ಹೆಚ್ಚು ಬಿಕರಿಯಾಗುವ ಶಕ್ತಿ ಇದೆಯೋ ಅದು ಪ್ರಧಾನ ಸುದ್ದಿಯಾಗುತ್ತದೆ. ಇಲ್ಲಿ 'ಮಾರಾಟ' ಎನ್ನುವಾಗ ಒಂದು ಮಾಧ್ಯಮ ತಂಡಕ್ಕೆ ಆ ರಾಜ್ಯದ ಮಹಾನಾಯಕರ ಹುಟ್ಟುಹಬ್ಬದ ಆಚರಣೆ ಮುಖಪುಟದ ಸುದ್ದಿಯಾದರೆ ಮತ್ತೊಂದು ಮಾಧ್ಯಮ ತಂಡಕ್ಕೆ ಅದೇ ಸುದ್ದಿ 'ವ್ವೆವ್ವೆ' ಆಗುತ್ತದೆ. ಇಂತಹ ಪ್ರಧಾನ ಸುದ್ದಿಯನ್ನು ಯಾರು ಬರೆಯುತ್ತಾರೆ, ಯಾರನ್ನು ಸಂದರ್ಶನ ಮಾಡುತ್ತಾರೆ, ಯಾರಿಂದ ಮಾಹಿತಿ ಸಂಗ್ರಹ, ಯಾವ ಸ್ಥಿರಚಿತ್ರ ಬಳಸಬೇಕು, ಎಂಬುದನ್ನೆಲ್ಲಾ ಆಧರಿಸಿ ಒಂದು ಸುದ್ದಿಗೆ ಚೌಕಟ್ಟು ಬರೆಯಲಾಗುತ್ತದೆ. ಇದನ್ನು ಮಾಧ್ಯಮ ಮಿತ್ರರು ಫ್ರೇಮಿಂಗ್ ಎಂದು ಕರೆಯುತ್ತಾರೆ. ಈ ಫ್ರೇಮು ಹಾಕಿಸಿಕೊಳ್ಳುವುದಕ್ಕೆ ಮಾಧ್ಯಮಗಳ ಕಾರಣವಾಗಿಯೇ ಅನೇಕ ಧ್ವನಿತ ಅರ್ಥಗಳು ಸಹ ಸಿಕ್ಕಿವೆ. (ಇದೇ ಫ್ರೇಮ್ ಹಾಕಿಸಿಕೊಳ್ಳೋದು ಅನ್ನುವ ಶಬ್ದಕ್ಕೆ ಬೆಂಗಳೂರಿನ ಶಪೋರಿ ಕನ್ನಡದಲ್ಲಿ ಕೊಂದುಬಿಡುತ್ತೇನೆ ಎಂಬ ಅರ್ಥವೂ ಇದೆ.) ಪ್ರಾಯಶಃ ಮಾಧ್ಯಮದಲ್ಲಿ ಬಳಕೆಯಾಗುವ ಅನೇಕ ಪದಗಳು ನಿಘಂಟುಗಳನ್ನು ಬರೆಯುವವರಿಗೆ ಭಾರೀ ಹೊಸ ಸಾಮಗ್ರಿ ಒದಗಿಸಬಹುದು. (ಇದು ವಿಷಯಾಂತರ ಎನಿಸಿದರೂ ಒಂದು ತಮಾಷೆಯ ಪ್ರಸಂಗವನ್ನು ಇಲ್ಲಿ ಹೇಳಿಬಿಡುತ್ತೇನೆ. ನಮ್ಮ ಪ್ರಖ್ಯಾತ ಸಂಪಾದಕರೊಬ್ಬರಿಗೆ ಗಣೇಶನ ವಿಗ್ರಹಗಳನ್ನು ಸಂಗ್ರಹಿಸುವ ಭಾರೀ ಹವ್ಯಾಸವಿತ್ತು. ಅವರ ಕೋಣೆಯ ತುಂಬ ಗಣೇಶಗಳು ತುಂಬಿದ್ದವು. ಅಲ್ಲಿಗೆ ಬಂದ 'ಖ್ಯಾತ' ನಟಿಯೊಬ್ಬಳು ಆ ಗಣೇಶಗಳನ್ನು ನೋಡಿ ಸಂಭ್ರಮಿಸಿದಳು. 'ವೋ! ಐ ಲೌವ್ ಗಣೇಶ್! ಬಟ್ ವೈ ಡೂ ಯು ಹ್ಯಾವ್ ಸೊ ಮೆನಿ? ಹಿ ವಾಸ್ ಅ ಬ್ಯಾಚುಲರ್, ನೋ?' ಎಂದಳು. ಪಕ್ಕದಲ್ಲಿದ್ದ ತರಲೆ ಆ ಪ್ರಖ್ಯಾತರ ಪುರಾಣ ಬಲ್ಲವನಾಗಿದ್ದ. ಅವನು ಥಟ್ಟನೆ ಹೇಳಿದ: 'ಹಿ ವಾಸ್ ದಿ ಫಸ್ಟ್ ಒನ್ ಟು ಯ್ಯೂಸ್ ಮೌಸ್, ಅವರ್ ಮ್ಯಾನ್ ರಿಕ್ವೈರ್ಸ್ ಮೋರ್ ದ್ಯಾನ್ ಒನ್ ಮೌಸ್!' ಅಂತ. ಆ 'ಪ್ರಖ್ಯಾತ' ನಟಿಗೆ ಈ ಜೋಕ್ ಅರ್ಥವಾಗಲಿಲ್ಲ. ಆದರೆ ಅಲ್ಲಿದ್ದ ಎಲ್ಲಾ ಮಾಧ್ಯಮ ಮಿತ್ರರು ಇವತ್ತಿಗೂ ಈ ಜೋಕ್ ಹೇಳಿಕೊಂಡು ನಗುತ್ತಾರೆ. ಈ ಮೌಸ್ ಮತ್ತು ಮಾಧ್ಯಮಕ್ಕೆ ಈಗಂತೂ ಅವಿನಾಭಾವ ಸಂಬಂಧವಿದೆ.)

ಯಾವ ಕಾರಣಕ್ಕೆ ಒಂದು ವಿಷಯ ಪ್ರಾಧಾನ್ಯ ಪಡೆಯುತ್ತದೆ ಅಥವಾ ಮಾಧ್ಯಮದಲ್ಲಿ ಸಣ್ಣ ತುಣುಕಾಗಿ ಕಾಣಿಸುತ್ತದೆ ಎನ್ನುವುದನ್ನು ಆಧರಿಸಿ ಜಾಗತಿಕವಾಗಿ ಅಭಿಪ್ರಾಯ ಸೃಷ್ಟಿಯಾಗುತ್ತದೆ. ಹೀಗಾಗಿಯೇ ಇಂದು ಸುದ್ದಿ ಸೃಷ್ಟಿಕರ್ತರು ಜಗತ್ತಿನ ಅನಭಿಷಿಕ್ತ ದೊರೆಗಳಾಗಿದ್ದಾರೆ. ಇದೇ ಕಾರಣಕ್ಕೆ 'ಪ್ರೆಸ್' ಎಂಬ ಮಾಧ್ಯಮಿಕರು ಜಾಗತಿಕ ವಿದ್ಯಮಾನಗಳಲ್ಲಿ ಆಗುವ ಅನೇಕ ನಿರ್ಧಾರಗಳಿಗೆ ಕೂಡ ಕಾರಣರಾಗುತ್ತಾರೆ. ವಿಶೇಷವಾಗಿ ರಾಜಕೀಯ ಸಂದಿಗ್ಧಗಳ ಸಂದರ್ಭದಲ್ಲಿ ಮಾಧ್ಯಮದವರು ಹೇಳುವ ಮಾತುಗಳು ನಿರ್ಧಾರ ತೆಗೆದುಕೊಳ್ಳುವವರ ಮೇಲೆ ಭಾರೀ ಪರಿಣಾಮ ಬೀರುತ್ತವೆ ಎಂಬುದಂತೂ ಸತ್ಯ. (ಉದಾಹರಣೆ: ತಬರನ ಕತೆ ಸಿನಿಮಾಗೆ ಸ್ವರ್ಣಕಮಲ ಬರುವುದಕ್ಕೆ ಕಾರಣವಾದ ಅದೇ ದಿನ ಪ್ರಸಾರವಾದ ಪಿಂಚಣಿದಾರರನ್ನು ಕುರಿತ ಸಾಕ್ಷ್ಯಚಿತ್ರವನ್ನು ಗಮನಿಸಿ. ಆ

ಸಾಲಿನ ಪ್ರಶಸ್ತಿಗೆ ಸಿನಿಮಾಗಳನ್ನು ನೋಡಲು ನೇಮಿತವಾಗಿದ್ದ ಕಮಿಟಿಯಲ್ಲಿದ್ದವರೆಲ್ಲರೂ ಆ ದಿನ ಬೆಳಿಗ್ಗೆ ದೂರದರ್ಶನದಲ್ಲಿ ಪ್ರಸಾರವಾದ ಆ ಸಾಕ್ಷ್ಯಚಿತ್ರ ನೋಡಿದ್ದರಂತೆ. ಆಗಷ್ಟೇ ದೂರದರ್ಶನ ಎಂಬುದು ಈ ದೇಶಕ್ಕೆ ಬಂದಿತ್ತು. ಹಾಗಾಗಿ ಒಂದು ವಾಹಿನಿಯಲ್ಲಿ ಬಂದುದೆಲ್ಲವನ್ನೂ ಎಲ್ಲರೂ ನೋಡಿರುತ್ತಿದ್ದರು. ಅದು ಅದೇ ದಿನ ಪ್ರಸಾರವಾಗಲು ಗಿರೀಶ್ ಕಾಸರವಳ್ಳಿಯವರು ಕಾರಣವಲ್ಲವಾದರೂ ಆ ಸಾಕ್ಷ್ಯಚಿತ್ರದ ಪರಿಣಾಮವಾಗಿ ಪಿಂಚಣಿದಾರನದ್ದೇ ವಿಷಯ ಹೊಂದಿದ್ದ 'ತಬರನ ಕತೆ'ಗೆ ಸ್ವರ್ಣಕಮಲ ಸಿಕ್ಕಿತ್ತು.) ಯಾವುದಾದರೂ ಒಂದು ಸನ್ನಿವೇಶ ಅಥವಾ ಸಂದಿಗ್ಧವು 'ಸುದ್ದಿ'ಯಾಗದಿದ್ದರೆ ಅದು ಘಟಿಸಿಯೇ ಇಲ್ಲ ಎಂಬ ಪ್ರವೃತ್ತಿ ಸಹ ಕಳೆದ ಎರಡು ಶತಮಾನಗಳಿಂದ ಉಂಟಾಗಿದೆ. ಇದು ಹೇಗೆ ಎಂದರೆ, ಎರಡು ದೇಶಗಳ ನಡುವೆ ಆಗುವ ಮಾತುಕತೆಯ ಆರಂಭವು ಸುದ್ದಿಯಾಗಿ ನಂತರ ಅಲ್ಲಿ ಆದ ಮಾತುಕತೆಯ ತಿರುಳು ಸುದ್ದಿಯಾಗದೆ ಇರುತ್ತದಲ್ಲ, ಹಾಗೆ. (ಉದಾಹರಣೆಗೆ, ಭಾರತ-ಪಾಕಿಸ್ತಾನದ ನಡುವೆ ಮಾತುಕತೆ ನಡೆಯುವಾಗ ಅಲ್ಲಿ ಕಾಶ್ಮೀರದ ವಿಷಯವಿದ್ದರೆ ಸುದ್ದಿಯಾಗಿ, ಎರಡು ದೇಶಗಳ ನಡುವಣ ವ್ಯಾಪಾರದ ಒಪ್ಪಂದಗಳು ಸುದ್ದಿಯಾಗುವುದಿಲ್ಲವಲ್ಲ.)

ಈ ಎಲ್ಲಾ ವಿವರಗಳಿಂದ ಒಂದು ಸತ್ಯವಂತೂ ಸ್ಪಷ್ಟ. ಮಾಧ್ಯಮಗಳನ್ನು 'ನಾಲ್ಕನೆಯ ಆಯಾಮ' ಎನ್ನುತ್ತಾರೆ. ಆದರೆ ಕಳೆದ ಕೆಲವು ದಶಕಗಳಿಂದ ನ್ಯಾಯಾಂಗ, ಕಾರ್ಯಾಂಗ ಮತ್ತು ರಾಜ್ಯಾಂಗಗಳ ಸಾರಥಿಯೇ ಸುದ್ದಿಮಾಧ್ಯಮ ಆಗಿರುವುದರಿಂದ ಇದನ್ನು 'ಮೊದಲ ಆಯಾಮ', ಮೊದಲ ಆಧಾರ ಸ್ತಂಭ ಎಂದು ಗುರುತಿಸುವುದೇ ಸೂಕ್ತ. ಇಂದು ಜಾಗತಿಕವಾಗಿ ಅನೇಕ ತೀರ್ಮಾನಗಳಾಗುವುದಕ್ಕೆ ಸುದ್ದಿ ಮಾಧ್ಯಮ ಕಾರಣವಾಗಿದೆ. ಇದನ್ನು ನೋಮ್ ಚೋಮ್ಸ್ಕಿ ತನ್ನ ಮ್ಯಾನುಫ್ಯಾಕ್ಚರ್ ಆಫ್ ಕನ್‌ಸೆಂಟ್ ಪುಸ್ತಕದಲ್ಲಿ ವಿಸ್ತೃತವಾಗಿ ಚರ್ಚಿಸುತ್ತಾನೆ. ಆ ಪುಸ್ತಕದಲ್ಲಂತೂ ಅಮೆರಿಕನ್ ಬೃಹತ್ ಉದ್ಯಮಗಳು ಮಾಧ್ಯಮಗಳನ್ನು ಹೇಗೆ ತಮ್ಮ ಹಿಡಿತದಲ್ಲಿ ಇರಿಸಿಕೊಂಡು ಜನಾಭಿಪ್ರಾಯ ರೂಪಿಸುತ್ತವೆ ಹಾಗೂ ಸರ್ಕಾರವನ್ನು ನಿಯಂತ್ರಿಸುತ್ತವೆ ಎಂಬುದನ್ನು ಸಾದ್ಯಂತವಾಗಿ ಚರ್ಚಿಸಲಾಗಿದೆ.

ಇಂತಹ ಸುದ್ದಿ ಮಾಧ್ಯಮದ ಗುಣಾತ್ಮಕ ಮತ್ತು ಋಣಾತ್ಮಕ ಅಂಶಗಳನ್ನು ಸಮಕಾಲೀನ ಪರಿಸ್ಥಿತಿಯಲ್ಲಿ ಗಮನಿಸಬೇಕಾದ್ದು ಅನಿವಾರ್ಯ ಅಗತ್ಯ. ಆ ಮೂಲಕ ನಮ್ಮ ಸಮಕಾಲೀನ ಸ್ಥಿತಿಗೆ ಈ ಸುದ್ದಿ ಮಾಧ್ಯಮಗಳು ಹೇಗೆ ಕಾರಣವಾಗಿವೆ ಎಂಬುದನ್ನು ಸಹ ನಾವು ನಿಗದಿಪಡಿಸಿಕೊಳ್ಳಬೇಕಾಗಿದೆ. ಈ ಕಾರಣಕ್ಕಾಗಿ ಮೊದಲು ಋಣಾತ್ಮಕ ಅಂಶಗಳನ್ನು ಗಮನಿಸೋಣ.

**'ಮಾಧ್ಯಮ ಋಣ' ಅಥವಾ ಋಣಾತ್ಮಕ ಅಂಶಗಳು**

ಸುದ್ದಿ ಮಾಧ್ಯಮಗಳು ಬದುಕುವುದೇ ಸಂದಿಗ್ಧಗಳನ್ನು ಮತ್ತು ಕಾನ್‌ಫ್ಲಿಕ್ಟ್‌ಗಳನ್ನು ಆಧರಿಸಿ. ಅವುಗಳೇ ಸುದ್ದಿ ಮಾಧ್ಯಮಗಳಿಗೆ ಪ್ರಧಾನ ಆಹಾರ. ಇಂದಿನ ಬಹುತೇಕ ಸುದ್ದಿ ಮಾಧ್ಯಮಗಳಲ್ಲಿ ಪ್ರಧಾನ ಸುದ್ದಿಯಾಗುವುದು ತೀರಾ ಈಚಿಗಿನ ಪ್ರಕೃತಿ ವಿಕೋಪ ಅಥವಾ ಬೃಹತ್ ದುರಂತ ಅಥವಾ ಹೇಯ ಅಪರಾಧ. ಸಂದಿಗ್ಧಗಳು ಹೆಚ್ಚು ಜನ ಓದುಗರನ್ನು/ ನೋಡುಗರನ್ನು/ಕೇಳುಗರನ್ನು ಸೆಳೆಯುತ್ತವೆ ಎಂಬುದು ಮಾಧ್ಯಮದವರು ಹೇಳುವ ಮಾತು. ಇದನ್ನು ಮಾಧ್ಯಮದವರೇ ರೂಪಿಸಿದ ಸಿದ್ಧಾಂತ ಎನ್ನಬಹುದು. ಆ ಸಂದಿಗ್ಧ ದೊಡ್ಡದಾದಷ್ಟೂ ಅಷ್ಟೇ ದೊಡ್ಡ ಸಂಖ್ಯೆಯ ಗ್ರಾಹಕರು ಆಯಾ ಮಾಧ್ಯಮಕ್ಕೆ ಒದಗಿಬರುತ್ತಾರೆ. ಹೆಚ್ಚು ಗ್ರಾಹಕರು ದೊರೆತ ಮಾಧ್ಯಮವು ಅತ್ಯಂತ ಯಶಸ್ವಿ ಮಾಧ್ಯಮ ಎಂದು ಕರೆಸಿಕೊಳ್ಳುತ್ತದೆ. (ಇಲ್ಲಿ ಹೆಚ್ಚು ಗ್ರಾಹಕರು ಎಂಬುದರ ನಿರ್ಣಯವು ಸಹ ಮಾಧ್ಯಮದಲ್ಲಿರುವ ಉದ್ಯಮಿಗಳೇ ರೂಪಿಸಿದ ವಿಶಿಷ್ಟ ಮಾರ್ಗದಿಂದ ಆಗುತ್ತದೆ. ಮುದ್ರಣ ಮಾಧ್ಯಮಕ್ಕೆ ಪ್ರಸಾರ ಸಂಖ್ಯೆ ಎಂಬ ಅಂಕಿ ದೊರೆಯುತ್ತಾದರೂ ಅಲ್ಲಿ ಪ್ರಿಂಟ್ ಆರ್ಡರ್ ಎಂಬ ಅಂಕಿಯನ್ನು ಆಧರಿಸಿ ಜನಪ್ರಿಯತೆಯನ್ನು ಅಳೆಯಲಾಗುತ್ತದೆ. ಟೆಲಿವಿಷನ್‌ನಲ್ಲಿ ಮಾಧ್ಯಮದವರೇ ನಡೆಸುವ ಸಂಸ್ಥೆಯೊಂದು ಪ್ರಸಾರವಾದ ಕಾರ್ಯಕ್ರಮಗಳನ್ನು ಎಷ್ಟು ಜನ ನೋಡಿದರು ಎಂಬುದನ್ನು ಸ್ಯಾಂಪಲ್‌ಗಳ ಲೆಕ್ಕ ಹಿಡಿದು ನಿರ್ಧರಿಸುತ್ತದೆ. ಇದಕ್ಕೆ ಅವರು ಟಿ.ಆರ್.ಪಿ. ಎನ್ನುತ್ತಾರೆ. ಅಂತರ್ಜಾಲದಲ್ಲಿ ಹಿಟ್ಸ್ ಎಂಬ ಲೆಕ್ಕವಿದೆ. ಒಂದು ಅಂತರ್ಜಾಲ ತೋಟವನ್ನು ಎಷ್ಟು ಜನ ನೋಡಿದರು ಎಂಬುದರ ಲೆಕ್ಕ ಇಲ್ಲಿ ಸಿಗುತ್ತದೆ. ಇಲ್ಲಿ ಒಬ್ಬನೇ ವ್ಯಕ್ತಿ ಆ ತೋಟವನ್ನು ಹತ್ತು ಬಾರಿ ನೋಡಿದರೂ ಅದು ಅಷ್ಟು ಜನ ನೋಡಿದರು ಎಂತಲೇ ದಾಖಲಾಗುತ್ತದೆ. ಇಂತಹ ಅಂಕಿಸಂಖ್ಯೆಯನ್ನು ಆಧರಿಸಿ ಆಯಾ ಮಾಧ್ಯಮಕ್ಕೆ ಜಾಹೀರಾತು ದೊರೆಯುತ್ತದೆ. ಆ ಜಾಹೀರಾತುಗಳೇ ಎಲ್ಲ ಮಾಧ್ಯಮಗಳಿಗೆ ಪ್ರಧಾನ ಆದಾಯ ಆಗಿದೆ. ಹೀಗಾಗಿ ಜಾಹೀರಾತು ಪಡೆಯಲು ಎಲ್ಲ ಮಾಧ್ಯಮ ಮಿತ್ರರೂ ಅನೇಕಾನೇಕ ಸರ್ಕಸ್‌ಗಳನ್ನು ಮಾಡುತ್ತಲೇ ಇರುತ್ತಾರೆ. ಈ ಸರ್ಕಸ್‌ಗಳಿಗೆ ಸಂದಿಗ್ಧವನ್ನು ಹುಡುಕಿ ತನ್ನ ಗ್ರಾಹಕನಿಗೆ ಒದಗಿಸುವುದೇ ಪ್ರಧಾನ ಆಸಕ್ತಿ. ತಮ್ಮ ಮಾಧ್ಯಮಗಳ ಮೌಲ್ಯಮಾಪನ ಆಗುವಾಗ ಅಂಕಿ-ಸಂಖ್ಯೆಗಳು ಹೆಚ್ಚಾಗಿ ಕಂಡುಬಂದರೆ ಅದಕ್ಕೆ ಈ ಸಂದಿಗ್ಧದ ಸುದ್ದಿಯೇ ಕಾರಣ ಎಂಬ ಭ್ರಮೆಯೂ ಮಾಧ್ಯಮ 'ಉದ್ಯಮಿ'ಗಳಲ್ಲಿ ಇದೆ.) ಹೀಗಾಗಿಯೇ ಮಾಧ್ಯಮಕ್ಕೆ ಸಂದಿಗ್ಧಗಳಲ್ಲಿ ಆಸಕ್ತಿ. ಎಲ್ಲಿಯೂ ಸಂದಿಗ್ಧಗಳು ದೊರೆಯದೆ ಇದ್ದಾಗ ಮಾಧ್ಯಮವು ಸ್ವತಃ ಅಂತಹದೊಂದು ಸಂದಿಗ್ಧವನ್ನು ತಾನೇ ಸೃಷ್ಟಿಸಿಕೊಳ್ಳಬೇಕಾದ ಅನಿವಾರ್ಯ ಸ್ಥಿತಿಗೆ ಇಂದು ತಲುಪಿದ್ದೇವೆ. (ಉದಾಹರಣೆಗೆ: ಕ್ರೀಡಾಂಗಣದಲ್ಲಿ ಯುದ್ಧಸೃಷ್ಟಿಯಂತಹುದರ ಹಿನ್ನೆಲೆಯಲ್ಲಿ ಆರಂಭವಾದ ಐಪಿಎಲ್ ನಂತಹುದು. ಅಲ್ಲಿ ಕೆಲವು ತಂಡಗಳಿಗೆ ಗ್ರೀಕ್ ಯೋಧರ, ಇನ್ನು ಕೆಲವರಿಗೆ ರೋಮನ್ ಯೋಧರ ಪೋಷಾಕು ಹಾಕಿ ಮಾಡಿದ್ದ ಜಾಹೀರಾತುಗಳನ್ನು ನೆನೆಯಬಹುದು. ಇಲ್ಲಿ ಆಟವನ್ನೇ ಯುದ್ಧವೆಂದು ಘೋಷಿಸುವ ಗುಣದ ಹಿಂದೆ ಅದೇ ಸಂದಿಗ್ಧ ಸೃಷ್ಟಿಯ ವಿವರಗಳಿವೆ.) ಈ ಕಾರಣಕ್ಕಾಗಿಯೇ ಮಾಧ್ಯಮಗಳು ಸಂದಿಗ್ಧವನ್ನು ಸೃಷ್ಟಿಸುವುದಲ್ಲದೇ, ತಮಗೆ ಬೇಕಾದಂತಹ ಬಣ್ಣವನ್ನೂ ಅವುಗಳಿಗೆ ಕಟ್ಟುತ್ತವೆ. ಕೆಲವೊಮ್ಮೆ ಸತ್ತುಹೋದ ವಿಷಯವೂ ಮಾಧ್ಯಮಕ್ಕೆ ಬೃಹತ್ ಸಂದಿಗ್ಧ ಎಂದೆನ್ನಿಸಬಹುದು. (ಉದಾಹರಣೆಗೆ: ಜಂಬೂಸವಾರಿಯ ಆನೆಯ ಮೇಲೆ ಕನ್ನಡಮ್ಮ ಇರಬೇಕೆ? ಚಾಮುಂಡೇಶ್ವರಿ ಇರಬೇಕೆ? ಅಥವಾ ಮಹಾರಾಜ ಇರಬೇಕೆ? ಎಂಬುದು. ಇವರಲ್ಲಿ ಯಾರು ಕೂತರೂ ಈ ನಾಡಿನ ಜನಕ್ಕೆ ಯಾವ ಲಾಭವೂ ಇಲ್ಲ. ಆದರೆ ಮಾಧ್ಯಮಗಳು ಇದನ್ನು ಬೃಹದಾಕಾರಗೊಳಿಸಿ ಈ ನಾಡಿನ ಅತ್ಯಂತ ಪ್ರಮುಖ ವಿಷಯ ಇದೇ ಎಂದು ಬಿಂಬಿಸಬಲ್ಲವು.) ಆದರೆ ಈ ಸಂದಿಗ್ಧಗಳು ಪರಿಹಾರವಾದ ವಿಷಯ ಮಾಧ್ಯಮಕ್ಕೆ ನೀರಸವಾದುವು. ಹಾಗಾಗಿಯೇ ಸಂದಿಗ್ಧಕ್ಕೆ ಕೊಟ್ಟಷ್ಟು ಪ್ರಾಮುಖ್ಯವನ್ನು ಮಾಧ್ಯಮಗಳು ಪರಿಹಾರ ಕೇಂದ್ರಿತ ಮಾಹಿತಿಗಳನ್ನು ಸುದ್ದಿಯಾಗಿಸುವಾಗ ನೀಡುವುದಿಲ್ಲ. (ಉದಾಹರಣೆಗೆ: ಒಬ್ಬ ಸಂನ್ಯಾಸಿಯು ಮಾಡಿದ ಕೊಲೆ ಎಂದು ಬಂದ ಸುದ್ದಿಗೆ ನಂತರ ತನಿಖೆಯಿಂದ ಆ ಸ್ವಾಮಿಯು ತಪ್ಪಿತಸ್ಥನಲ್ಲವೋ ಹೌದೋ ಎಂಬುದು ತೀರ್ಮಾನವಾದಾಗ ಮಾಧ್ಯಮಗಳು ಆ ಸುದ್ದಿಗೆ ನೀಡುವ ಅವಕಾಶ (ಟೈಮ್ ಅಂಡ್ ಸ್ಪೇಸ್) ಕಡಿಮೆ ಇರುತ್ತದೆ.) ಹಾಗೆಯೇ, ಒಬ್ಬ ಆತಂಕವಾದಿಯು ಬಾಂಬ್ ಎಸೆದ ಸಂದರ್ಭವನ್ನು ಮಾಧ್ಯಮಗಳು ವರದಿ ಮಾಡುವಾಗೆಲ್ಲಾ ಯಾವುದೋ ದಿನಾಂಕದೊಂದಿಗೆ ಸಮೀಕರಿಸಿ ವರದಿ ಮಾಡುತ್ತವೆ. ಆತಂಕವಾದಿಗಳು ಸಹ ಮಾಧ್ಯಮಗಳ ಮೂಲಕವೇ ಆತಂಕ ಸೃಷ್ಟಿಗೆ ಬೇಕಾದ ನೆರವನ್ನು ಪಡೆಯುವಂತೆ ದಿನಾಂಕ, ಸ್ಥಳ ಗೊತ್ತುಪಡಿಸಿಕೊಳ್ಳುತ್ತಾರೆ. 'ತಮ್ಮ ಬಾಂಬಿಗೆ ಸಾಯುವ ವ್ಯಕ್ತಿಯೂ ರಾಜಕೀಯವಾಗಿ ಪ್ರಮುಖನಲ್ಲವಾದರೆ ಆ ಸಂಖ್ಯೆಯಾದರೂ ಜಾಸ್ತಿಯಾಗಲಿ ಎಂಬ ಗುಣ ಆತಂಕವಾದಿಗಳಲ್ಲಿಯೂ ಬಂದಿರಬಹುದು' ಎನ್ನುತ್ತಾರೆ ಅಮೆರಿಕಾದ ಮಾಧ್ಯಮ ವಿಶ್ಲೇಷಕ ಜೆನ್ನಿಫರ್ ಅಕಿನ್ ತಮ್ಮ 'ಮಾಸ್ ಮೀಡಿಯ ಟುಡೇ' ಪುಸ್ತಕದಲ್ಲಿ.

ಮಾಧ್ಯಮಗಳಿಂದಾಗಿ ಹೋರಾಟಗಾರರ ವರ್ತನೆಯೂ ಸಹ ಬದಲಾಗಿದೆ. ಯಾವುದೋ ವಿಷಯದ ವಿರುದ್ಧ ಧಿಕ್ಕಾರ ಕೂಗಲು, ನ್ಯಾಯ ಕೇಳಲು, ಹೋರಾಟ ಮಾಡಲು ಬಂದಿರುವ ಜನ ಸಹ ಮಾಧ್ಯಮದವರು ಎದುರಿಗೆ ಬಂದಾಗ ಮಾತ್ರ ತಮ್ಮ ಘೋಷಣೆಗಳನ್ನು ಕೂಗುತ್ತಾರೆ, ತಾವು ಸಿಟ್ಟಾಗಿದ್ದೇವೆ ಎಂದು ತೋರಿಸಿಕೊಳ್ಳುತ್ತಾರೆ. ಮಾಧ್ಯಮದವರ ಎದುರಿಗೆ ಮಾತ್ರ ಅತಿ ಉದ್ವೇಗದಿಂದ ಮಾತಾಡುತ್ತಾರೆ. ಕೆಲವೊಮ್ಮೆ ಮಾಧ್ಯಮ ಮಿತ್ರರು ಸ್ವತಃ ಹೋರಾಟಗಾರರಿಗೆ ಹೀಗೆಯೇ ನಿಲ್ಲಿ ಎಂದು ತಮ್ಮ ಕ್ಯಾಮೆರಾಗಳಲ್ಲಿ ಸೆರೆ ಹಿಡಿಯುವುದು ಸಹ ಉಂಟು. (ನಾವು ವಾಹಿನಿಯೊಂದಕ್ಕೆ ಕ್ರೈಂ ಕಾರ್ಯಕ್ರಮ ಮಾಡುತ್ತಿದ್ದಾಗ ಎಲ್ಲಿಯೋ ಕೊಲೆ ಆಗಿದೆ ಎಂದು ಅಲ್ಲಿಗೆ ಕ್ಯಾಮೆರಾ ಕೊಂಡೊಯ್ದರೆ, ಅಲ್ಲಿ ಇರುತ್ತಿದ್ದ ಜನ ಅವರೆಗೂ ಸುಮ್ಮನಿದ್ದವರು, ಕ್ಯಾಮೆರಾ ಬಂದಿದೆ ಎಂದು ತಿಳಿದ ಕೂಡಲೇ ಅತ್ಯಂತ ನಾಟಕೀಯವಾಗಿ ಅಳುತ್ತಾ ಇದ್ದದ್ದನ್ನು ನೋಡಿದ್ದೇವೆ. ಹೋರಾಟಗಳಿಂದಲೇ ಹೆಸರು ಮಾಡಿದ ಈ ನಾಡಿನ 'ಮಹಾನ್' ಸಾಹಿತಿ ನಾಯಕರೊಬ್ಬರು ಈಗ ತಾವು ಹೋರಾಟಕ್ಕೆ ಬರಬೇಕೆಂದರೆ ಯಾವ ಯಾವ

**ಹೊಸತು** ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಅವರು ರಚಿಸಿರುವ **ಮಾರ್ಕ್ಸ್ ಮತ್ತು ವಿಜ್ಞಾನ** ಎಂಬ ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತು ೨೦೦೯ನೇ ಸಾಲಿನಲ್ಲಿ ಪ್ರಕಟವಾದ ಕೃತಿಗಳಿಗೆ ನೀಡುವ **ಡಾ|| ಎಚ್. ನರಸಿಂಹಯ್ಯ ದತ್ತಿ** ಬಹುಮಾನ ದೊರೆತಿರುವುದು ಈ ಕೃತಿಯ ಪ್ರಕಾಶಕರಾದ ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಹೆಮ್ಮೆಯ ವಿಷಯ. ಡಾ|| ಜಿ. ಆರ್. ಅವರಿಗೆ ಅಭಿನಂದನೆಗಳು.

ಮಾಧ್ಯಮದವರು ಬರುತ್ತಾರೆ ಎಂದು ಕೇಳುವ ಹಾಗೆ ಆಗಿದ್ದಾರೆ. ಆಕಸ್ಮಿಕವಾಗಿ ಆ ಹಿರಿಯರು ಬಂದಾಗ ಯಾವ ಮಾಧ್ಯಮದವರೂ ಬಾರದಿದ್ದರೆ ಅವರು ಕಾರಿಂದ ಇಳಿಯುವುದೂ ಇಲ್ಲ) ಅಂದರೆ ನಮ್ಮ ಸಮಕಾಲೀನ ಹೋರಾಟಗಳು/ಸಮಾರಂಭಗಳು/ಸನ್ಮಾನಗಳು ಕೂಡ ಕೇವಲ ಮಾಧ್ಯಮಗಳಲ್ಲಿ ಕಾಣಿಸಿಕೊಳ್ಳಲು ಮಾಡುವ ನಾಟಕದ ಹಾಗೆ ಆಗಿವೆ. ಈ ಬದಲಾದ ಸಾಮಾಜಿಕ ವರ್ತನೆಯನ್ನು 'ಮಾಧ್ಯಮ ಋಣ' ಎನ್ನಬಹುದು. ಈ ಋಣ ಪಟ್ಟಿಗೆ ಸೇರಬೇಕಾದ ಇನ್ನೂ ಕೆಲವು ವಿಷಯಗಳಿವೆ. ಮಾಧ್ಯಮದವರು ತಮಗೆ ಬೇಕಾದಂತೆ ಹೋರಾಟಗಾರರನ್ನೋ ಅಥವಾ ಯಾವುದೋ ಸಮಾರಂಭ/ಸನ್ಮಾನದ ಜನರನ್ನು ನಿಲ್ಲಿಸುವುದು ಒಂದು ಕಡೆಯಾದರೆ, ಒಂದೇ ದಿನ ಎರಡು ಮೂರು ಕಾರ್ಯಕ್ರಮಗಳೂ ಒಂದೇ ಸಮಯದಲ್ಲಿ ಇದ್ದರೆ, ಮಾಧ್ಯಮದವರು ಬರುವವರೆಗೆ ಪ್ರಧಾನ ಕಾರ್ಯಕ್ರಮ ಆಗುವುದಿಲ್ಲ ಎಂಬುದು ಒಂದು ವಿಷಯ. ಮಾಧ್ಯಮದವರು ಮತ್ತೆಲ್ಲೋ ಹೋಗಬೇಕು ಎಂದು ತಮ್ಮ ಕಾರ್ಯಕ್ರಮದ ಪ್ರಧಾನ ವಿಷಯವನ್ನು ಅಗತ್ಯಕ್ಕಿಂತ ಮುಂಚಿತವಾಗಿ ಮಾಡುವ ಅಭ್ಯಾಸವೂ ಈಗ ರೂಢಿಯಾಗಿದೆ. ನಮ್ಮ ಸಾರ್ವಜನಿಕರು ಸಹ ತಮ್ಮ ಸಮಯಕ್ಕಿಂತ ಮಾಧ್ಯಮದವರ ಸಮಯವೇ ಮುಖ್ಯ ಎಂಬಂತೆ ಆಡುವಷ್ಟರ ಮಟ್ಟಿಗೆ ಮಾಧ್ಯಮಗಳು ಪ್ರಬಲವಾಗಿವೆ.



ಮತ್ತೊಂದು ಪ್ರಮುಖ ಮಾಧ್ಯಮ ಋಣೀ ವರ್ತನೆಯನ್ನು ಸಮಕಾಲೀನ ಸಮಾಜದಲ್ಲಿ ಗಮನಿಸಬಹುದು. ಅದು ಯಾವುದೋ ನಾಯಕನ ಸಾವಿನ ನಂತರ ನಡೆದುಕೊಳ್ಳುವ ರೀತಿ. ಆ ನಾಯಕ ಎಂತಹವನೋ ಎಂಬ ವಿಷಯ ಹೇಗಾದರೂ ಇರಲಿ, ಆತ ತೀರಿಕೊಂಡ ಕೂಡಲೇ ಅಲ್ಲಿಗೆ ಬರುವ ಮಾಧ್ಯಮದವರ ಕ್ಯಾಮೆರಾ ಕಂಡು ಸಾರ್ವಜನಿಕರು ಹಲ್ಕಿರಿದು ಟಾಟಾ ಹೇಳುವುದನ್ನು ನಾವೆಲ್ಲರೂ ನೋಡಿದ್ದೇವೆ. ಅತ್ಯಂತ ದುಃಖದ ಸನ್ನಿವೇಶದ ನಡುವೆಯೂ ಸಾರ್ವಜನಿಕರು ಹೀಗೆ ಮಂಗಗಳಂತೆ ಆಡುವುದಕ್ಕೆ ಕಾರಣವಾಗಿರುವುದು ಸಹ ಮಾಧ್ಯಮಗಳಲ್ಲಿ ತಮ್ಮ ಮುಖ ಬರುತ್ತದೆ ಎಂಬ ಹುಚ್ಚು ನಂಬಿಕೆ. ಇದೇ ರೀತಿಯ ಸಂದರ್ಭದಲ್ಲಿ ಬೀದಿ ಬೀದಿಯಲ್ಲಿ ಬೆಂಕಿ ಹಚ್ಚಿ ಸುದ್ದಿ ಮಾಧ್ಯಮದವರನ್ನು ಅಲ್ಲಿಗೆ ಸೆಳೆಯುವುದು ಮತ್ತು ಆಯಾ ಬಡಾವಣೆಗಳಲ್ಲಿ ತಮ್ಮ ನಾಯಕನ ಫ್ಲೆಕ್ಸ್‌ಗಳನ್ನು ಹಾಕಿ, ಶ್ರದ್ಧಾಂಜಲಿ ಬರೆಯುವುದು ಕೂಡ ಈಚೆಗಿನ ವಿಶಿಷ್ಟ ವಿದ್ಯಮಾನ. ಈಚೆಗೆ ಈ ವಿದ್ಯಮಾನವು ಮುಂದುವರಿದು ಜನರಿಗೆ ಪರಿಚಿತವೇ ಅಲ್ಲದ ಯಾವುದೋ ವ್ಯಕ್ತಿಯ ಸಾವು, ಹುಟ್ಟಿದ ಹಬ್ಬಕ್ಕೂ ಫ್ಲೆಕ್ಸ್ ಹಾಕುವ ಅಭ್ಯಾಸವೂ ಬಂದಿದೆ. ಅಂತಹ ಫೋಟೋಗಳನ್ನು ನೋಡಿದಾಗೆಲ್ಲಾ ನನ್ನಂತಹ ಅನೇಕರ ಮುಖದಲ್ಲಿ ವಿಷಾದದ ನಗೆಯೊಂದು ಹುಟ್ಟುತ್ತದೆ. ಇನ್ನು ಜನನಾಯಕರ ಹುಟ್ಟುಹಬ್ಬಕ್ಕೆ ಕಟ್ಟಲಾಗುವ ಫ್ಲೆಕ್ಸ್‌ಗಳಂತೂ ಅಬ್ಬಬ್ಬಾ! ಅದು ಇಡೀ ನಗರವನ್ನೇ ವಿಕಾರಗೊಳಿಸುವುದನ್ನು ನೋಡಿದ್ದೇವೆ.

ಇದೇ ಅವಧಿಯಲ್ಲಿ ತುಂಬ ಪ್ರಚಾರಕ್ಕೆ ಬಂದಿರುವ ಮತ್ತೊಂದು ಮಾಧ್ಯಮ ವಿವರ '೩೦ ಸೆಕೆಂಡ್ಸ್ ಬೈಟ್'. ಇದು ವಿಶೇಷವಾಗಿ ವಿದ್ಯುನ್ಮಾನ ಮಾಧ್ಯಮಗಳ ಕೊಡುಗೆ. ಯಾರ ಎದುರಿಗಾದರೂ ಇಂದು ಕ್ಯಾಮೆರಾ ಹಿಡಿಯಿರಿ ಕೇವಲ ೩೦ ಸೆಕೆಂಡುಗಳ ಒಳಗೆ ತಾವು ಹೇಳಬೇಕಾದ ಪ್ರಧಾನ ವಿಷಯ ಹೇಳುವುದು ಬಹುತೇಕ ನಮ್ಮ ಹಿರಿಯರಿಗೆ ಈಗ ಅಭ್ಯಾಸವಾಗಿದೆ. ಈ ಬೈಟ್‌ಗಳನ್ನು ಮಾಧ್ಯಮದವರು ತಮ್ಮ ಅನುಕೂಲಕ್ಕೆ ತಕ್ಕಂತೆ ಮರುಸಂಕಲಿಸಿಬಿಡುತ್ತಾರೆ. ಆ ಮೂಲಕ ಸಾರ್ವಜನಿಕ ಅಭಿಪ್ರಾಯ ರೂಪಿಸುವುದಕ್ಕೆ ಕಾರಣರಾಗುತ್ತಾರೆ.

ಉದ್ಯಮ ಪ್ರೇರಿತ ಮಾಧ್ಯಮಗಳಲ್ಲಿ ಸುದ್ದಿ ಎನ್ನುವುದು 'ಮಾರಾಟ ಯೋಗ್ಯ' ಆಗಿರಬೇಕು. ಅದನ್ನವರು 'ಸೆಲ್ಲಿಂಗ್ ನ್ಯೂಸ್' ಎಂದು ಗುರುತಿಸುತ್ತಾರೆ. ಹೀಗೆ ಹೆಸರಿಸುವುದಕ್ಕೆ, ಆ ಮಾಧ್ಯಮಗಳನ್ನು ನಡೆಸುವ ಉದ್ಯಮಪತಿಗಳು ಸದಾಕಾಲ ಲಾಭವನ್ನು ಹುಡುಕುವವರು ಎಂಬುದು ಪ್ರಧಾನ ಕಾರಣ. ಆ ಉದ್ಯಮದ ಷೇರು ಕೊಂಡವರಿಗೆ ವರ್ಷಾಂತ್ಯದಲ್ಲಿ ಲಾಭ ತೋರಿಸಬೇಕು ಎಂಬುದಕ್ಕಾಗಿಯೇ ಆಯಾ ಉದ್ಯಮದ ಅಲಿಯಾಸ್ ಮಾಧ್ಯಮದ ಮುಖ್ಯಸ್ಥರು (ಸಿಇಒ)ಗಳು ಭಾರೀ ಒತ್ತಡದಲ್ಲಿ ಇರುತ್ತಾರೆ. ಕತ್ತು ಹಿಸುಕುವಂತಹ ಬಜೆಟ್‌ನ ಜೊತೆಗೆ ಈ ಉದ್ಯಮಗಳಿಗೆ ತೀವ್ರ ಸ್ಪರ್ಧೆಯೂ ಇರುತ್ತದೆ. ಹೀಗಾಗಿಯೇ ಇಂದು ಬಹುತೇಕ ಮಾಧ್ಯಮಗಳು 'ಸೆನ್ಸೇಷನಲ್' ಸುದ್ದಿ ಮಾಡುತ್ತವೆ. ಇದಕ್ಕಾಗಿ ಅವರ ಮೇಲೆ ನಿರಂತರವಾಗಿ ಹೊಸ ಕತೆಯನ್ನು (ಸುದ್ದಿಯನ್ನಲ್ಲ ಎಂಬುದು ನೆನಪಲ್ಲಿರಲಿ) ಹುಡುಕುವ ಒತ್ತಡ ಇರುತ್ತದೆ. ಈ ಕೆಲಸವನ್ನು ಅತ್ಯಂತ ಕಡಿಮೆ ಸಿಬ್ಬಂದಿಯ ಜೊತೆಗೆ ಮಾಡಬೇಕಾಗಿಯೂ ಇರುತ್ತದೆ. ಹಾಗಾಗಿ ಮಾಧ್ಯಮದವರು ಅನೇಕ ಕಡೆ ತಮಗಾಗಿ ಬಾತ್ಮೀದಾರರನ್ನು ಅಥವಾ ಮಾಹಿತಿದಾರರನ್ನು ಇಟ್ಟುಕೊಂಡಿರುತ್ತಾರೆ. ಇಂತಹ ಪ್ರತಿನಿಧಿಗಳ/ಬಾತ್ಮೀದಾರರ ಹಿನ್ನೆಲೆ ಮತ್ತು ರಾಜಕೀಯ ದೃಷ್ಟಿಕೋನದಿಂದಾಗಿ ಅನೇಕ ವಿಚಿತ್ರ ಸುದ್ದಿಗಳು ಸಹ ಮಾಧ್ಯಮದಲ್ಲಿ ಬರುವುದುಂಟು. ಇದರಿಂದಾಗಿ ಅನೇಕ ಬಾರಿ ಆಯಾ ಮಾಧ್ಯಮ ಮುಖ್ಯಸ್ಥರು ಲಾಭಗಳನ್ನು ಮತ್ತು ನಷ್ಟಗಳನ್ನು ಅನುಭವಿಸಿರುವುದುಂಟು. ಇದಕ್ಕಾಗಿ ಹಲವರು ವಾರಕ್ಕೊಮ್ಮೆ ಕೋರ್ಟಿನ ಮುಖ ನೋಡುವ ಹಾಗೆ ಆಗಿರುವುದೂ ಉಂಟು. ಹೀಗೆ ಸುದ್ದಿ ಹುಡುಕುವ ಧಾವಂತದಲ್ಲಿ ಹುಟ್ಟಿರುವ ಮತ್ತೊಂದು ವಿಶೇಷ 'ಪ್ಯಾರಾಚೂಟ್ ಜರ್ನಲಿಸಂ.' ಇದರಲ್ಲಿ ಸಿಬ್ಬಂದಿ ಕೊರತೆ ಇರುವ ಮಾಧ್ಯಮವು ತನ್ನ ಸಿಬ್ಬಂದಿಯಲ್ಲಿ ಕೆಲವರನ್ನು ಅಥವಾ ಮಾಧ್ಯಮವೇ ನಿಯೋಜಿಸಿದ ಪೂರ್ಣಾವಧಿ ಪತ್ರಕರ್ತರಲ್ಲದ ಕೆಲವರನ್ನು ಯಾವುದೋ ಸಂದಿಗ್ಧ ಅಥವಾ ಆತಂಕ ಅಥವಾ ಯುದ್ಧ ನಡೆಯುವ ತಾಣಕ್ಕೆ ಕಳಿಸುತ್ತದೆ. ಆ ಜನ ಅಲ್ಲಿಂದ ವಿಶೇಷ ಸ್ಟೋರಿಗಳನ್ನು ಹುಡುಕಿ ಹುಡುಕಿ ತರುತ್ತಾರೆ. ಈ ಸ್ಟೋರಿಗಳಿಗೆ ಮಾಹಿತಿಯನ್ನು ನೀಡುವ ಗುಣಕ್ಕಿಂತ ಸಮಾಜವನ್ನು ಆತಂಕದಲ್ಲಿ ಅಥವಾ ಒಂದು ಅಪರೂಪದ ಪ್ರಶ್ನೆಯ ಎದುರಿಗೆ ಮುಖಾಮುಖಿಯಾಗಿಸುವ ಗುಣ ಇರುತ್ತದೆ. ಇಂತಹ ವಿಶೇಷ ವರದಿಗಳಿಗಾಗಿ ನಮ್ಮ ಮಾಧ್ಯಮಮಿತ್ರರು ವಿದೇಶದಲ್ಲಿ ನಡೆಯುವ ಯುದ್ಧದ ಜಾಗಕ್ಕೆ ಅಥವಾ ಈ ದೇಶದಲ್ಲಿಯೇ ಆದ ಪ್ರಕೃತಿ ವಿಕೋಪಕ್ಕೆ ಗುರಿಯಾಗಿರುವ ತಾಣಕ್ಕೆ ಅಥವಾ ಒಂದು ಬೃಹತ್ ಕೋಮುಗಲಭೆ ಜರುಗಿದ ಊರಿಗೆ ಅಥವಾ ಯಾವುದೋ ಊರಿನಲ್ಲಿ ವ್ಯಕ್ತಿಯೊಬ್ಬನಿಂದ ಆದ ಬದಲಾವಣೆ ನೋಡುವುದಕ್ಕೆ ಅಥವಾ ಒಂದು ಸ್ತ್ರೀಯರ ಗುಂಪು ಮಾಡಿದ ಸಾಧನೆಯ ಪರಿಶೀಲನೆಗೆ... ಹೀಗೆ ಹೋಗಿ ಬಂದಿರುವುದನ್ನು ನಾವು ಕಾಣುತ್ತೇವೆ. ಹೀಗೆ ಹೋಗಿ ಬಂದವರು ಬರೆವ ವರದಿಗಳಲ್ಲಿ (ಕ್ಷಮಿಸಿ, 'ಸ್ಟೋರಿ'ಗಳಲ್ಲಿ) ಮಾನವಿಕಗಳ ಹೆಸರಲ್ಲಿ ಯಾವುದೋ ಒಂದು ಬಣವನ್ನು ದೂಷಿಸುವ ಅಥವಾ ತಪ್ಪುಗಳನ್ನು ಹುಡುಕುವ ಅಥವಾ ಯಾರದ್ದೋ ನಿಷ್ಕ್ರಿಯತೆಯನ್ನು ಕುರಿತಾದ ಮಾತಿರುತ್ತದೆ. ಆದರೆ ಆ ವರದಿಯ ನಂತರ ಅಲ್ಲಿನ ಜನಕ್ಕೆ ಏನಾಯಿತು ಎಂಬ ಫಾಲೊಅಪ್ ಎಂದಿಗೂ ನಡೆಯುವುದೇ ಇಲ್ಲ. ಆಕಸ್ಮಿಕವಾಗಿ ಕೆಲವು ಆಸಕ್ತರು ಅಂತಹ ಕೆಲಸ ಮಾಡಿದರೂ ಅದು 'ಸೆಲ್ಲಿಂಗ್ ಸ್ಟೋರಿ' ಅಲ್ಲವಾದ್ದರಿಂದ ಪತ್ರಿಕೆಯಲ್ಲಿ ಕಾಣಿಸುವುದು ವಿರಳ.

ಮಾಧ್ಯಮವು ಎದುರಿಸುವ ಮತ್ತೊಂದು ಋಣಾತ್ಮಕ ವಿಷಯ ಜಾಹೀರಾತಿನಿಂದ ಬರುವಂತಹದು. ಒಂದು ಮಾಧ್ಯಮಕ್ಕೆ ಅತಿ ಹೆಚ್ಚು ಜಾಹೀರಾತು ಒದಗಿಸುವ ಉದ್ಯಮದಿಂದ ಯಾವುದೇ ಅವಘಡವಾದರೂ ಅಥವಾ ಅವಘಡವಾಗುವ ಸೂಚನೆ ಇದ್ದರೂ ಅವುಗಳನ್ನು ಮಾಧ್ಯಮವು ವರದಿ ಮಾಡುವುದೇ ಇಲ್ಲ. ಆಕಸ್ಮಿಕವಾಗಿ ಯಾರೋ ಉತ್ಸಾಹಿ ಪತ್ರಕರ್ತ ಅಂತಹ ಕೆಲಸ ಮಾಡಿದರೆ ಆತನಿಗೆ ಆ ಮಾಧ್ಯಮದ ಮುಖ್ಯಸ್ಥರು ಧಮಕಿ ಹಾಕುತ್ತಾರೆ ಅಥವಾ ಆತನನ್ನು ಬೇರೆಡೆಗೆ ವರ್ಗಾಯಿಸುತ್ತಾರೆ ಅಥವಾ ಅಂತಹವರ ಕೆಲಸವೇ ಹೋಗಬಹುದು. ಇದಕ್ಕೂ ನಮ್ಮಲ್ಲಿ ಅನೇಕ ಉದಾಹರಣೆಗಳಿವೆ. ಕೆಲವೊಮ್ಮೆ ಮಾಧ್ಯಮದ ಮುಖ್ಯಸ್ಥರು ಅಧಿಕಾರಸ್ಥರ ವಿರುದ್ಧ ತಮ್ಮ ಸಿಬ್ಬಂದಿಯನ್ನು

ಛೂ ಬಿಟ್ಟು ಅದರ ಪರಿಣಾಮವಾಗಿ ಅಂತಹ ಕೆಲವರ ದುರ್ಮರಣಗಳಾಗಿರುವುದನ್ನು ಸಹ ನಾವು ಕಂಡಿದ್ದೇವೆ. ಇಲ್ಲಿ ಅಧಿಕಾರಸ್ಥರು ಎಂದರೆ ಶಕ್ತಿ ಕೇಂದ್ರ ನಡೆಸುವವರು. ಆ ಪಟ್ಟಿಯಲ್ಲಿ ಭೂಗತ ಜಗತ್ತಿನವರೂ ಇದ್ದಾರೆ, ಮಠಾಧೀಶರೂ ಇದ್ದಾರೆ, ಬೃಹತ್ ಉದ್ಯಮದವರೂ ಇದ್ದಾರೆ. ಹೀಗಾಗಿ ಮಾಧ್ಯಮದವರು ಎಷ್ಟು ಶಕ್ತಿಶಾಲಿಗಳೋ ಅವರಿಗೆ ಅಷ್ಟೇ ದೊಡ್ಡ ವೈರಿಗಳ ಪಡೆಯೂ ಇರುತ್ತದೆ. ಈ ಪರಿಸ್ಥಿತಿಯಿಂದಾಗಿ ಹುಟ್ಟಿರುವ ಹೊಸ ವಿದ್ಯಮಾನವೊಂದಿದೆ. ಹೊಸದು ಎಂದರೆ ತೀರಾ ಈಚೆಗಿನದ್ದೇನಲ್ಲ. ಮೊದಲು ಅಮೆರಿಕಾದಲ್ಲಿ ಆರಂಭವಾದ ಈ ಚಾಳಿ ಈಗ ನಮ್ಮ ದೇಶಕ್ಕೂ ಬಂದಿದೆ. ಅದು ಮಾಧ್ಯಮಗಳನ್ನು ಬೃಹತ್ ಉದ್ಯಮಪತಿಗಳು ಕೊಳ್ಳುವುದು ಹಾಗೂ ನಿರ್ವಹಿಸುವುದು. ಬೃಹತ್ ಕಾರ್ಪೊರೇಷನ್‌ಗಳು ಎಂದು ಕರೆಸಿಕೊಳ್ಳುವ ಸಂಸ್ಥೆಗಳ ಕೈಯಲ್ಲಿ ಮಾಧ್ಯಮಗಳು ಹೋದ ಕೂಡಲೇ ಅದರಿಂದ ಆಗುವ ಬದಲಾವಣೆಗಳು ಬೃಹತ್ತಾದ್ದು. ಅಂತಹ ಸಂಸ್ಥೆಗಳು ತಮ್ಮ ಲಾಭಕ್ಕಾಗಿ ನಡೆಸುವ ಅನೇಕ ಯೋಜನೆಗಳು ಸಮಾಜವಿರೋಧಿಯೇ ಆಗಿದ್ದರೂ ಮಾಧ್ಯಮದ ಮೂಲಕ ಸರ್ಕಾರಗಳ ಮೇಲೆ ಒತ್ತಡ ಹೇರಿ, ಜನಾಭಿಪ್ರಾಯ ತಮಗೆ ಬೇಕಾದಂತೆ ರೂಪಿಸುವುದು ಈ ಬೃಹತ್ ಉದ್ಯಮಪತಿಗಳಿಗೆ ಸಾಧ್ಯ. ಕಳೆದ ಎರಡು ದಶಕಗಳಿಂದ ನಮ್ಮ ಚುನಾವಣೆಯಲ್ಲಿ ಪಾಲ್ಗೊಳ್ಳುವ ವಿದ್ಯಾವಂತರ ಸಂಖ್ಯೆ ಕಡಿಮೆಯಾಗುವುದಕ್ಕೂ ಇಂತಹ ಉದ್ಯಮಪತಿಗಳು ನೇರವಾಗಿ ಕಾರಣ ಎಂಬುದನ್ನು ತಾವೆಲ್ಲರೂ ಬಲ್ಲಿರಿ. ರಾಜಕಾರಣವೇ ಅತ್ಯಂತ ಹೇಯ ಕೆಲಸ, ಜನಪ್ರತಿನಿಧಿಯಾಗುವುದೇ ಅತ್ಯಂತ ಮೂರ್ಖ ಕೆಲಸ ಎಂಬಂತೆ ಮಾಧ್ಯಮಗಳ ಮೂಲಕ ಹೇಳಿ, ಅಕ್ಷರಸ್ಥರಲ್ಲಿ ಇವರು ಮೂಡಿಸಿರುವ ಜನಾಭಿಪ್ರಾಯದಿಂದಾಗಿ ನಮ್ಮ ದೇಶದ ಪ್ರಜಾಪ್ರಭುತ್ವ ಸಹ ಒಂದು ಹಾಸ್ಯಾಸ್ಪದ ಸ್ಥಿತಿ ತಲುಪಿರುವುದನ್ನು ನಾವು ನೋಡಿದ್ದೇವೆ. ಇದರಿಂದಾಗಿ ನಮ್ಮ ಮತಗಟ್ಟೆಗೆ ಬರುವ ವಿದ್ಯಾವಂತರ ಸಂಖ್ಯೆ ಕಡಿಮೆ ಆಗಿರುವುದು ಸಹ ನಮ್ಮ ಕಣ್ಣೆದುರಿಗೇ ಇರುವ ಸತ್ಯ. ಈ ಸ್ಥಿತಿಯನ್ನು ತಪ್ಪಿಸಲು ಕೆಲವರು ಮಾಧ್ಯಮದ ಮೂಲಕವೇ ಪ್ರಯತ್ನಿಸುತ್ತಿದ್ದಾರಾದರೂ ಈ ರೋಗ ಗುಣವಾಗಲು ಬಹಳ ಕಾಲ ಬೇಕು ಎಂಬುದು ಮಾಧ್ಯಮದ ಮತ್ತೊಂದು ಋಣಾತ್ಮಕ ವಿಷಯ.

ಹೀಗೆ ಮಾಲೀಕರ ಒತ್ತಡದಿಂದ ರೂಪಿತವಾಗುವ ಸುದ್ದಿಗಳು ಒಂದೆಡೆಯಾದರೆ, ಸರ್ಕಾರಗಳು ಮೇಲ್ನೋಟಕ್ಕೆ ಅಭಿವ್ಯಕ್ತಿ ಸ್ವಾತಂತ್ರ್ಯ ಎಂಬ ಮಾತಾಡುತ್ತಲೇ ಹಿಂಬಾಗಿಲಿನಿಂದ ಒತ್ತಡಗಳನ್ನು ಹೇರುವುದನ್ನು ಸಹ ನಾವು ನೋಡಿದ್ದೇವೆ. ಸರ್ಕಾರವೂ ಸಹ ಮಾಧ್ಯಮಗಳನ್ನು ಜಾಹೀರಾತು ಕೊಡುವ ಮೂಲಕ ನಿಯಂತ್ರಿಸುತ್ತದೆ. ಈಚೆಗೆ ಪತ್ರಿಕೆಯೊಂದು ಒಬ್ಬ ಮುಖ್ಯಮಂತ್ರಿಯ ಬಗ್ಗೆ ಖಾರವಾಗಿ ಬರೆದಾಗ ಆ ಪತ್ರಿಕೆಗೆ ಸರ್ಕಾರೀ ಜಾಹೀರಾತುಗಳನ್ನು ನಿಲ್ಲಿಸಿ, ಅದೇ ಪತ್ರಿಕೆಯು ಮುಖ್ಯ ಮಂತ್ರಿಗಳನ್ನು ಹೊಗಳುವ ಹಂತಕ್ಕೆ ಬಂದಿರುವುದನ್ನು ನಾವು ನೋಡಿದ್ದೇವೆ. ಈ ಹಿನ್ನೆಲೆಯಲ್ಲಿ ಎಷ್ಟೋ ದೊಡ್ಡ ಹಗರಣಗಳು ವರದಿಯೇ ಆಗಿಲ್ಲದೆ ಇರುವುದು ಸಹ ಉಂಟು. ಅಥವಾ ಒಬ್ಬ ಸರ್ಕಾರೀ ಯಂತ್ರವನ್ನು ನಿಯಂತ್ರಿಸುವಂತಹ ಸ್ಥಾನದಲ್ಲಿರುವ ವ್ಯಕ್ತಿಯು ಕೊಲೆಯಂತಹ ಅಪರಾಧ ಮಾಡಿಯೂ ಅದು ಸುದ್ದಿಯಾಗದೆ, ಅದು ನ್ಯಾಯಾಲಯದ ಕಟ್ಟೆಯನ್ನು ಏರದೆ ಇರುವ ಸಂದರ್ಭಗಳೂ ಉಂಟು. ನಮ್ಮಲ್ಲಿನ ಅನೇಕ ರಾಜಕಾರಣಿಗಳನ್ನು ಈ ಪಟ್ಟಿಗೆ ಸೇರಿಸಬಹುದು ಎಂಬುದನ್ನು ಅನೇಕರು ಬಲ್ಲರು. ಆದರೆ ಆ ಶಕ್ತಿವಂತರು ಸಾಕ್ಷಿಗಳನ್ನು ನಾಶಮಾಡಿರುತ್ತಾರೆ. ಹೀಗಾಗಿ ಅಂತಹ ಸುದ್ದಿ ಬರೆದವನು ಶಕ್ತಿವಂತರ ವಿರೋಧ ಕಟ್ಟಿಕೊಂಡು ಅಪರಾಧಿಯೂ ಆಗಿಬಿಡುತ್ತಾನೆ.

ಒಟ್ಟಾರೆಯಾಗಿ, ಇಂದಿನ ಸಮಕಾಲೀನ ಸಮಾಜ ಮಾಧ್ಯಮಕ್ಕೆ ಋಣಿಯಾಗಿಯೇ ಇದೆ. ಇಂದು ಮಾಧ್ಯಮವೇ ಸಾರ್ವಜನಿಕರಿಗೆ ಇಂತಹ ವಿಷಯದ ಬಗ್ಗೆ ಮುಷ್ಕರ ಮಾಡಿ, ಪ್ರತಿಭಟಿಸಿ ಎಂತಲೂ ಹೇಳುತ್ತಿದೆ. ಕೆಲವೊಮ್ಮೆ ಪ್ರತಿಭಟನೆಯಿಂದಲೇ ಸುದ್ದಿಯಾದ ಜನರು ತಟಸ್ಥರಾಗಿ ಕುಳಿತಾಗ ಮಾಧ್ಯಮವು ಅಂತಹವರನ್ನು ಎಚ್ಚರಿಸುವ ಕೆಲಸವನ್ನೂ ಮಾಡುತ್ತಿದೆ. ಈ ನಿಟ್ಟಿನಲ್ಲಿ ಇಂದು ಕಾರ್ಮಿಕ ಸಂಘಟನೆಗಳು, ಪ್ರಗತಿಗಾಮಿ ಚಿಂತಕರು, ಇತ್ಯಾದಿ ಹಲವು ಹತ್ತು ಹೆಸರಿನ ಸಮಾಜವನ್ನು ಕಾವಲು ಕಾಯುವ ಕೆಲಸ ಮಾಡುತ್ತಿದ್ದ ಸಂಘಟನೆಗಳು ಬಡಕಲಾಗಿವೆ. ಆ ಸಂಘಟನೆಗಳ ಜಾಗವನ್ನು ಮಾಧ್ಯಮ ಸ್ವತಃ ವಹಿಸಿಕೊಂಡಿದೆ. ಹೀಗಾಗಿ ಇಂದಿನ ಸಮಾಜವು ಮಾಧ್ಯಮಕ್ಕೆ ಋಣಿಯೂ ಆಗಬೇಕಿದೆ. ಇಂತಹ ಹಲವು ಧನಾತ್ಮಕ ಅಂಶಗಳನ್ನು ಗಮನಿಸೋಣ.

**ಧನಾತ್ಮಕ ವಿವರಗಳು**

ಜಾಗತೀಕರಣದ ಕಾಲದ ಬದುಕಲ್ಲಿ, ಮಾಧ್ಯಮ ಎಂಬುದು ಇಲ್ಲದೇ ಬಹುತೇಕ ಮಂದಿಗೆ ತಮ್ಮ ನೆರೆಹೊರೆಯ ವಿಷಯವೇ ತಿಳಿಯುವುದು ಅಸಾಧ್ಯ. ನಾವು-ನಮ್ಮವರು ಎಂಬ ಪರಿಧಿಯ ಆಚೆಗೆ ಹೋದಂತೆ ವೃತ್ತ ದೊಡ್ಡದಾಗುತ್ತದೆ. ಹೀಗಾಗಿ ಮಾಹಿತಿ ಎಂಬುದನ್ನು ದಕ್ಕಿಸಿಕೊಳ್ಳುವುದು ಕಷ್ಟವಾಗತೊಡಗುತ್ತದೆ. ಆದರೆ ಸುದ್ದಿ ಮಾಧ್ಯಮ ಎಂಬುದರಿಂದಾಗಿ, ಟೆಲಿವಿಷನ್ ಚಾಲೂ ಮಾಡುವುದರಿಂದಲೋ, ಅಂತರ್ಜಾಲದ ಪುಟದ ಮೂಲಕವೋ, ಮುದ್ರಣ ಮಾಧ್ಯಮದ ಮೂಲಕವೋ, ಅಶರೀರವಾಣಿಗಳಾದ ರೇಡಿಯೋ, ಇತ್ಯಾದಿಗಳಿಂದಲೋ, ನಮ್ಮ ಸೊಂಟಕ್ಕೆ ಸದಾ ಸಿಕ್ಕಿಸಿಕೊಂಡಿರುವ ಸಂಚಾರಿ ದೂರವಾಣಿಯಿಂದಲೋ ಮಾಹಿತಿ ಎಂಬುದು ಅನೇಕ ಬಗೆಯಲ್ಲಿ ಜನರಿಗೆ ತಲುಪುತ್ತಿದೆ. ಹೆಚ್ಚು ಬಗೆಯ ಮಾಧ್ಯಮಗಳನ್ನು ನೋಡುವವರು ಅಲ್ಲಿ ದೊರೆಯುವ ಎಲ್ಲಾ ಮಾಹಿತಿಗಳನ್ನು ಸ್ವತಃ ಸಂಕಲಿಸಿಕೊಂಡು ತಮ್ಮದೇ ಆದ ಅವೃತ್ತಿಯೊಂದನ್ನು (ದೃಷ್ಟಿಕೋನವೊಂದನ್ನು) ಸಹ ರೂಢಿಸಿಕೊಳ್ಳಬಹುದು.

ಬೃಹತ್ ಉದ್ದಿಮೆಗಳ ಹಿಡಿತದಲ್ಲಿರುವ ಮಾಧ್ಯಮಗಳಲ್ಲದೆ ಅನೇಕ ಸ್ವತಂತ್ರ ಸುದ್ದಿ ಮಾಧ್ಯಮ ಜಾಲಗಳೂ ಇವೆ. ಇವುಗಳನ್ನು ಬ್ಲಾಗ್‌ಲೋಕ ಎಂತಲೂ, ಅಂತರ್ಜಾಲ ತೋಟ ಎಂತಲೂ, ಖಾಸಗಿ ಪ್ರಸಾರದ ಪತ್ರಿಕೆ ಎಂತಲೂ, ಸಮುದಾಯ ಟೆಲಿವಿಷನ್ ಮತ್ತು ರೇಡಿಯೋಗಳಲ್ಲಿ ನೋಡಬಹುದು. ಇವುಗಳು ಬೃಹತ್ ಉದ್ದಿಮೆದಾರರ ಮಾಹಿತಿಗಿಂತ ಭಿನ್ನ ಮಾಹಿತಿಯನ್ನು ವಿಭಿನ್ನ ದೃಷ್ಟಿ ಕೋನದಿಂದ ನೀಡುತ್ತಾ ಇವೆ. ಹೀಗಾಗಿಯೇ ಜಗತ್ತಿನ ಯಾವುದೇ ಮೂಲೆಯಲ್ಲಿ ಇರುವವರಿಗೂ ಇನ್ನಾವುದೋ ಮೂಲೆಯಲ್ಲಿ ಆದ, ಆಯಾ ವ್ಯಕ್ತಿಗೆ ಅಗತ್ಯವೆನಿಸುವ ಮಾಹಿತಿ ಬಹುಬೇಗ ಸಿಗುತ್ತಿದೆ.

ಮಾಧ್ಯಮದ ಬಹುದೊಡ್ಡ ಧನಾತ್ಮಕ ಅಂಶ ಎಂದರೆ ವೇಗದ ಮಾಹಿತಿ. ಯಾವುದೋ ಪ್ರಕೃತಿ ವಿಕೋಪ ಒದಗಬಹುದೆಂಬ ವಿವರವನ್ನು ಮುಂಚಿತವಾಗಿ ಜನರಿಗೆ ತಿಳಿಸಿ, ಆ ಜನರನ್ನು ಸುರಕ್ಷಿತ ಸ್ಥಳಕ್ಕೆ ತಲುಪಿಸಬಹುದು. ಯುದ್ಧದಲ್ಲಿರುವ ದೇಶವೊಂದರ ಜನಕ್ಕೆ ಸುದ್ದಿ ಮಾಧ್ಯಮದಿಂದ ಯಾವ ಜಾಗದಲ್ಲಿ ಹೆಚ್ಚು ಅಪಾಯವಿದೆ ಎಂಬುದು ತಿಳಿಯಬಹುದು. ಹಾಗೆಯೇ ಯುದ್ಧವಿರಾಮದ ಕಾಲದಲ್ಲಿ ಯಾವ ರಸ್ತೆಯಲ್ಲಿ ಟ್ರಾಫಿಕ್ ಜಾಮ್ ಆಗಿದೆ ಎಂತಲೂ ಇದೇ ಮಾಧ್ಯಮಗಳು ತಿಳಿಸಲು ಸಾಧ್ಯ. ಇದಲ್ಲದೆ ಜನಪ್ರತಿನಿಧಿಗಳು ತಮ್ಮ ಕ್ಷೇತ್ರದ ಜನರೊಂದಿಗೆ ನೇರ ಸಂವಾದದಲ್ಲಿ ತೊಡಗುವುದಕ್ಕೂ ಈ ಟೆಲಿವಿಷನ್, ರೇಡಿಯೋ ಅಲ್ಲದೆ ವಿಡಿಯೋ ಸಂವಾದಗಳಂತಹ ತಂತ್ರವನ್ನು ಬಳಸಬಹುದು. ಎರಡು ಬಣಗಳ ನಡುವಿನ ವಿವಾದವನ್ನು ಬಗೆಹರಿಸುವಲ್ಲಿ, ಎರಡೂ ಬಣಗಳ ನಡುವೆ ಸಂವಾದ ಹುಟ್ಟಿಸುವಲ್ಲಿ ಸಹ ಮಾಧ್ಯಮಗಳು ಬಹುದೊಡ್ಡ ಪಾತ್ರ ವಹಿಸಲು ಸಾಧ್ಯ. ಮಾಹಿತಿ ಎನ್ನುವುದು ಜನರ ಬದುಕಿಗೆ ಅಗತ್ಯವಾದ ವಿವರ. ಈ ವಿವರವನ್ನು ಜನರ ನೆಮ್ಮದಿಗೆ ಬಳಸುವಲ್ಲಿ ಮಾಹಿತಿ ತಂತ್ರಜ್ಞಾನ ಎಂಬುದು ಬೃಹತ್ತಾದ ಕೆಲಸ ಮಾಡುತ್ತಿದೆ, ಮಾಡುತ್ತಲೇ ಇರಬೇಕಿದೆ.

ಮಾಧ್ಯಮದ ಋಣಾತ್ಮಕ ಮತ್ತು ಧನಾತ್ಮಕ ಅಂಶಗಳೆರಡೂ ಇರುವ ವಿವರ 'ಮಾಧ್ಯಮ ಪರಿಣಾಮ'. ಈ ಪರಿಣಾಮವನ್ನು ಪ್ರತ್ಯೇಕವಾಗಿಯೇ ಗಮನಿಸಬೇಕಾದುದು ಅಗತ್ಯ.

(ಮುಂದುವರಿಯುವುದು)

ಬಿ. ಸುರೇಶ
ನಂ. ೧೧೬೨, ೨೨ನೇ ಅಡ್ಡರಸ್ತೆ, ೨೩ನೇ ಮುಖ್ಯರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦



## ಅಭಿನಂದನೆಗಳು

ಡಾ|| ಎಲ್. ಬಸವರಾಜು ಅವರು ಸ್ಥಾಪಿಸಿರುವ ಅಮೃತಮಹೋತ್ಸವ ಸವಿನೆನಪಿನಲ್ಲಿ ೨೦೦೯ರ ಸಾಲಿನಲ್ಲಿ ಪ್ರಕಟವಾದ ಕೃತಿಗಳಿಗೆ ಕನ್ನಡ ಸಾಹಿತ್ಯ ಪರಿಷತ್ತು ನೀಡುವ ಬಹುಮಾನವು ನಾ. ದಿವಾಕರ ಅವರು ರಚಿಸಿರುವ **ದಲಿತರು - ವಿಮೋಚನೆಯ ಹಾದಿ : ಒಂದು ಅವಲೋಕನ** ಎಂಬ ಕೃತಿಗೆ ದೊರಕಿರುವುದು ಈ ಕೃತಿಯ ಪ್ರಕಾಶಕರಾದ ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಹೆಮ್ಮೆಯ ವಿಷಯ. ಶ್ರೀ ನಾ. ದಿವಾಕರ ಅವರಿಗೆ ಅಭಿನಂದನೆಗಳು.



# ಪರಂಪರೆಯನ್ನು ಪ್ರಶ್ನಿಸುತ್ತಲೇ 'ಮಣ್ಣಿಂದ ಎದ್ದವರು'

ಪ್ರಕಾಶಕರು : **ನವಕರ್ನಾಟಕ ಪ್ರಕಾಶನ** ಪುಟಗಳು : ೧೩೨
ಲೇಖಕರು : **ಕುಸುಮಾ ಶಾನುಭಾಗ** ಬೆಲೆ : ರೂ. ೮೦

೨೦೦೯ರಲ್ಲಿ ನವಕರ್ನಾಟಕ ಪ್ರಕಾಶನದ 'ವನಿತಾ ಚಿಂತನ ಮಾಲೆ'ಯಿಂದ ಹೊರಬಂದ ಕುಸುಮಾ ಶಾನುಭಾಗರ 'ಮಣ್ಣಿಂದ ಎದ್ದವರು' ಎಂಬ ಈ ವಿಶಿಷ್ಟ ಕಾದಂಬರಿ, ಸ್ತ್ರೀ ಸಮುದಾಯದ ಒಳ ಕಾಳಜಿಗಳ ಒಟ್ಟಾರೆ ಆಳ ಹಾಗೂ ಅಗಲವನ್ನು ತೆರೆದಿಡುವ ಕೌಟುಂಬಿಕ ವಿಸ್ತಾರದ ಸುದೀರ್ಘ ಬರವಣಿಗೆಯ ತಾಜಾ ಕೃತಿ. ಇಂತಹ ದೀರ್ಘ ಸಂವಾದ ನಮ್ಮ ಕಾಲದ ಒಂದು ಆತ್ಯಂತಿಕ ತುರ್ತು. ಮುನ್ನುಡಿಕಾರರಾದ ಎಚ್. ಎಲ್. ಕೇಶವಮೂರ್ತಿಯವರು ''ಇದೊಂದು ಹೆಣ್ಣು ಸಮುದಾಯದ ಶೋಷಣೆ ಹಾಗೂ ಮಣ್ಣಿನ ಕತೆ''ಯೆಂದು ಗುರುತಿಸಿದ್ದಾರೆ. ಕಾದಂಬರಿ ಒಳಗಿಳಿಯುತ್ತಿದ್ದಂತೆಯೇ, ಕಾವೇರಿ ಸಾವಿತ್ರಿ ಶೈಲಜಾ ಸುಬ್ಬಮ್ಮ ಸೀತೆ ಎಂಬಿತ್ಯಾದಿ ವಿಭಿನ್ನ ಪಾತ್ರಗಳ ಜೀವನ ಶೋಧನೆಯ ಮೂಲಕ ಕಾದಂಬರಿಗೊಂದು ಜೀವ ಮಿಡಿತದ ತಲ್ಲಣ, ಅಂದಂದಿನ ಚಾರಿತ್ರಿಕ ಮೌಲ್ಯ, ವ್ಯಕ್ತಿವ್ಯಕ್ತಿಗಳ ನಡುವಿನ ಮಾನಸಿಕ, ಸಾಮಾಜಿಕ ಸಂಘರ್ಷ ಇಂಥವುಗಳು ಇದ್ದಲ್ಲೇ ಮರುಸೃಷ್ಟಿಗೊಳ್ಳುತ್ತಾ ಸಾಗುತ್ತವೆ. ಇಡೀ ಕಾದಂಬರಿ ಸರಳವಾಗಿ ಓದಿಸಿಕೊಳ್ಳುವ ರೀತಿ ಖುಷಿಕೊಡುತ್ತದೆ. ಅಲ್ಲಲ್ಲಿ ಕುತೂಹಲಕಾರಿಯಾಗಿಯೂ ಕಥನ ಬೆಳೆಯುತ್ತದೆ.

ಜಾತ್ರೆಯ ವಿಶೇಷ ವಿವರಣೆಯೊಂದಿಗೆ ಆರಂಭವಾಗುವ ಈ ಕತೆ, ವ್ಯಕ್ತಿವ್ಯಕ್ತಿಗಳ ನಡುವಿನ ಸಂಬಂಧಗಳು, ಹಳ್ಳಿಯ ಜೀವನಶೈಲಿಯಲ್ಲಿ ನಿತ್ಯದ ಬದುಕು ಹೊರಳುವ ವಿಧಾನ, ಗ್ರಾಮೀಣ ಪರಿಸರ, ವೈದಿಕ ಸಂಪ್ರದಾಯದ ರೀತಿ ರಿವಾಜುಗಳು, ಅದರಿಂದ ಹೆಣ್ಣುಮಕ್ಕಳ ದಾರಿ ದಿಕ್ಕೆಡುವ ಪರಿ, ಅಜ್ಜಿಯ ತಲೆಮಾರಿನಿಂದ ಸಾಗಿ ಬಂದ ಸ್ತ್ರೀಯರ ಏಕರೂಪವಾದ ಶೋಷಣೆ, ಪುರುಷಪ್ರಧಾನ ಸಮಾಜದಲ್ಲಿ ನಡೆವ ಅನೇಕ ಆತಂಕಗಳು, ವೈಪರೀತ್ಯಗಳು, ಆಸ್ತಿ ವಿವರಗಳು, ದಾಯಾದಿಗಳ ವಿರಸ, ಇವೆಲ್ಲವೂ ಕಾದಂಬರಿಯ ಒಳ ಹೂರಣವನ್ನು ಶ್ರೀಮಂತಗೊಳಿಸಿವೆ. ಕಾದಂಬರಿಯ ಶೀರ್ಷಿಕೆಯೇ ಇಲ್ಲಿಯ ಪಾತ್ರ ಜಗತ್ತಿಗೆ ಮತ್ತು ಲೇಖಕಿಯ ಆಶಯಕ್ಕೆ ಹೊಸದೊಂದು ಒಳನೋಟವನ್ನು ಕೂಡ ನೀಡುವಂಥದು. ಹೆಣ್ಣುಮಗಳಿಗೆ ಆಸ್ತಿಯಲ್ಲಿ ಪಾಲು ಕೊಡಬಾರದೆಂಬ ಗೋಪಾಲಯ್ಯ ಹಾಗೂ ಮಗ ವಿಶ್ವನಾಥ ಮತ್ತು ಸಂಬಂಧಿಗಳೆಲ್ಲರ ಮನಸ್ಸುಗಳು ಮೂಲಭೂತವಾದಿಗಳ ಮನಃಸ್ಥಿತಿಯಿಂದ ಕೂಡಿದ್ದಾಗಿ ಕಾಣಿಸುವಲ್ಲಿ ಲೇಖಕಿ ಹೆಚ್ಚು ಒತ್ತು ಕೊಟ್ಟಿದ್ದಾರೆ ಅನಿಸುತ್ತದೆ.

ಐದು ವರ್ಷದಿಂದ ಕೋರ್ಟಿಗೆ ಅಲೆದು ಗೆದ್ದ ಕಾವೇರಿ, ಬೆಟ್ಟದ ತಪ್ಪಲಿನ ಇನ್ನೊಂದು ಮೂಲೆಯಲ್ಲಿ ಮನೆಕಟ್ಟಿಕೊಂಡು ಒಂಟಿಯಾಗಿ ವಾಸಿಸುವ ಕೆಚ್ಚೆದೆ ಉಳ್ಳವಳು. ಸುಬ್ರಾಯ ಭಟ್ಟರ ಎರಡನೇ ಮೊಮ್ಮಗ ಗೋಪಾಲಯ್ಯನ ಮಗಳಾದ ಕಾದಂಬರಿ ನಾಯಕಿಯೂ ಆದ ಇವಳು, ತನ್ನ ಅಜ್ಜಿ ಸುಬ್ಬಮ್ಮನ ಎಲ್ಲ ಧೈರ್ಯಸ್ಥೈರ್ಯ ಹಾಗೂ ಮುನ್ನುಗ್ಗುವ ಛಲವನ್ನೂ ಮೈಗೂಡಿಸಿಕೊಂಡು ಬೆಳೆದವಳು. ಜಾತ್ರೆ ಆರಂಭವಾಗಿ ಏಳನೇ ದಿನ ಸ್ವಂತ ಅಣ್ಣನಿಂದಲೇ ಉತ್ಸವಮೂರ್ತಿಯಾದ ಭಗವತಿಯ ಕಳುವು ನಡೆದು, ಮುಂದೆ ಅದೇ ಕಾರಣಕ್ಕೆ




ಇಡೀ ಕುಟುಂಬ ಸ್ಥಳ ಬದಲಾವಣೆಯ ಕಾರ್ಯವನ್ನು ಕೈಕೊಂಡು ವಲಸೆಯಾಗುತ್ತದೆ. ಹೀಗೆ ಇಡೀ ಕುಟುಂಬವೊಂದು ಬೇರೆಯದೇ ಊರಿನಲ್ಲಿ ನೆಲೆಗೊಳ್ಳುವ ಸಂದರ್ಭದಲ್ಲಿ ಪರಂಪರಾಗತವಾಗಿ ಬಂದ ದೇವಸ್ಥಾನಗಳ ಪೂಜಾರಿಕೆಯ ಕೆಲಸವು ಅವರನ್ನು ಪೋಷಿಸುವುದು ಇಲ್ಲಿ ವಿಧಿವತ್ತಾಗಿ ನಿರೂಪಿಸಲ್ಪಟ್ಟಿದೆ. ಬ್ರಾಹ್ಮಣ ಸಮುದಾಯದ ಹೆಂಗಸರ ನೋವು, ಅನಾಥಪ್ರಜ್ಞೆ, ಹಾಗೂ ಬದುಕಿನ ಗತಿಗಳನ್ನು ಲೇಖಕಿ ತೀಕ್ಷ್ಣವಾಗಿ ಮೂಡಿಸಿದ್ದಾರೆ.

ಪಾಲಂಗಾಲ, ಒಳ್ಮೆ, ಕರಡ, ಚಯ್ಯಂಡಾಣೆ, ನಾಪೋಕ್ಲು, ಚೇರಂಬಾಣೆ ಎಂಬೆಲ್ಲ ಕೊಡಗಿನ ಪ್ರಾದೇಶಿಕ ಗ್ರಾಮಗಳ ಹೆಸರುಗಳೇ ನಮ್ಮ ಕಡೆಯ ಓದುಗರಿಗೆ ಹೊಸದು. ಕಾವೇರಿ ಇಡಿಯಾಗಿ ಅಪ್ಪಟ ಮಣ್ಣಿನ ಮಗಳಾಗಿ ಮೂಡಿಬಂದಿರುವುದಷ್ಟೇ ಅಲ್ಲದೆ ಕೊಡಗಿನ ಪೂಜಾರಿಗಳ ಹಾಗೂ ಅಲ್ಲಿಯ ರೈತ ಸಮುದಾಯದ ಬದುಕಿನ ಚಿತ್ರಗಳು ಅಚ್ಚೊತ್ತಿದಂತೆ ಕಾಡುತ್ತವೆ. ಕೊಡಗಿನ ಅಡಿಗೆಯ ರೀತಿ-ನೀತಿ ರುಚಿಗಳು, ಅಲ್ಲಿಯ ಜನಜೀವನದ ಎಲ್ಲ ಸೂಕ್ಷ್ಮಗಳೂ ನಮ್ಮನ್ನು ತಟ್ಟುತ್ತಲೇ, ಕಾವೇರಿಯ ಕೊಟ್ಟಿಗೆಯೊಳಗಿನ ಗೋಪಕ್ಕ ಎಂಬ ಹಸುವಿನ ಹೆರಿಗೆಯ ವಿವರಗಳು ಮಾತ್ರ ವಿಶೇಷವಾಗಿ ಮನಕಲಕುತ್ತವೆ. ಕದಿರು ಕಟ್ಟುವ ಮುಂತಾದ ಕೊಡಗಿನ ಹುತ್ತರಿ ಹಬ್ಬದ ಆಚರಣೆಗಳು ಕಾದಂಬರಿಯಲ್ಲಿ ಒಂದೊಂದೂ ಪ್ರತ್ಯೇಕ ರೂಪಕದಂತೆ ಕಂಡುಬರುತ್ತವೆ. ಅಜ್ಜಿಯ ವೃದ್ಧಾಪ್ಯ ಹಾಗೂ ತಾಯಿಯ ಅನಾರೋಗ್ಯದ ಕಾರಣದಿಂದ ಮಗಳ ಬದುಕಿನ ದಾರಿಯನ್ನು ಮೊಟಕುಗೊಳಿಸಿದ ಗೋಪಾಲಯ್ಯನಂತಹ ತಂದೆಯ ಸ್ವಾರ್ಥ ತುಂಬಿದ ನಡವಳಿಕೆಗಳು ಅಸಹ್ಯ ಹುಟ್ಟಿಸುತ್ತವೆ.

ಹೆಂಗಸಿಗೂ ಗಂಡಸಿನಷ್ಟೇ ಸಮನಾಗಿ ಬದುಕುವ ಹಕ್ಕು ಉಂಟು ಎಂಬ ಮಾತು ಕಾದಂಬರಿಯ ಜೀವ ವ್ಯಾಖ್ಯೆಯಂತೆ ಬಳಕೆಯಾಗಿದೆ. 'ಬ್ರಾಹ್ಮಣರು ಗದ್ದೆ ಉಳ್ತಾರಾ ?' ಎಂಬ ಪ್ರಶ್ನೆಗೆ ವಿರುದ್ಧವಾಗಿ ಕಾವೇರಿಯ ಹೋರಾಟದ ದಾರಿ ಬಿಚ್ಚಿಕೊಳ್ಳುತ್ತದೆ. ಭತ್ತ, ಕಾಫಿ, ಕಿತ್ತಳೆ, ಮೆಣಸು ಇತ್ಯಾದಿ ಬೆಳೆಗಳನ್ನು ತೆಗೆಯುವ ಮತ್ತು ಮಾರಾಟಕ್ಕೆ ಕಾವೇರಿಯೇ ಮಾರುಕಟ್ಟೆಗೆ ಹೋಗುವ, ತನಗಾದ ಅನ್ಯಾಯದ ವಿರುದ್ಧ ಕೋರ್ಟು, ಕಛೇರಿ, ವಕೀಲರು ಅಂತೆಲ್ಲ ಅಲೆಯುವ ಅವಳ ಗಂಡೆದೆಯ ನೀಳ ವ್ಯಕ್ತಿತ್ವವನ್ನೂ ತೋರಿಸುತ್ತ ಕಥನ ವೇಗವಾಗಿ ಬೆಳೆಯುತ್ತದೆ. ಸಂಪ್ರದಾಯಸ್ಥ ಮನೆತನದಲ್ಲಿ ಹುಟ್ಟಿ ಬೆಳೆದ, ನಾಲ್ಕನೇ ಕ್ಲಾಸಿಗೆ ಶಾಲೆಯಿಂದ ವಂಚಿತಳಾದ ಈಕೆ, ಮುಂದೊಂದು ದಿನ, ಪತ್ರಿಕೆ ಜಾಹಿರಾತು ಕೊಟ್ಟು, ಸ್ವತಂತ್ರವಾಗಿ ಗಂಡು ಹುಡುಕಿ ಮದುವೆಯಾಗುವಂತಹ ತನ್ನ ವೈಚಾರಿಕತೆಯ ವಿಸ್ತಾರವನ್ನು ಕಾವೇರಿ ಗಳಿಸಿಕೊಂಡಿದ್ದರೂ, ಆ ಹಾದಿಯಲ್ಲಿ ಅವಳು ಎಡವಿದಳೆಂದೇ ತೋರಿಸುವ ಚಿತ್ರಗಳು ಮುಂದಿನ ಬರವಣಿಗೆಯಲ್ಲಿ ಕಾಣಸಿಗುತ್ತವೆ. ವಿಶ್ವಾಸದ್ರೋಹಿ ಮತ್ತು ಸ್ವಾಭಿಮಾನಿಯಲ್ಲದವ ಎಂದೆಲ್ಲ ಗಂಡ ನಾರಾಯಣನ ಕುರಿತು ಅಂದುಕೊಳ್ಳುವಲ್ಲಿಯೇ ಕಾವೇರಿಯ ಅಸಹನೆ ಹಾಗೂ ಸಿಟ್ಟು ಸಾಬೀತಾಗುತ್ತದೆ. ಅವಳಿಗೆ ಇಂತಹ ಮದುವೆಯೊಂದು ಅನಿವಾರ್ಯವಾಗಿತ್ತೇ ಎಂಬುದರ ಕುರಿತು ಓದುಗರಲ್ಲಿ ಕೂಡ ಜಿಜ್ಞಾಸೆ ಹುಟ್ಟಿಕೊಳ್ಳುತ್ತದೆ.

ಇಲ್ಲಿ ಯಾವ ಪಾತ್ರಗಳೂ ಪರಸ್ಪರ ಹೊಂದಾಣಿಕೆಯ ಮನೋಭಾವವಿಲ್ಲದೆ ತಮ್ಮದೇ ಮೂಗಿನ ನೇರಕ್ಕೆ ನಡೆವ ಗುಣವುಳ್ಳವರು. ಎಂದಿಗೂ ತಲೆ ಎತ್ತಿ ನಡೆವ, ಮಾತಿನಲ್ಲಿ ಆತ್ಮವಿಶ್ವಾಸವನ್ನೇ ವ್ಯಕ್ತಪಡಿಸುವ ಕಾವೇರಿ, ಗೆಳತಿ ಶೈಲಜಾಳಿಗೆ ಕೂಡ ಬದುಕಿನ ಅರ್ಥ ಹೇಳಿ ಕೊಡುವವಳು. ಶೈಲಜಾಗೆ ಗಂಡ ಮತ್ತು ಮಗ ಕೊಡುವ

**ಸುನಂದಾ ಪ್ರಕಾಶ ಕಡಮೆ**

ಹಿಂಸೆ, ಅದನ್ನವಳು ಸಹಿಸಿಕೊಂಡಿರುವ ಬಗೆ ತೀವ್ರವಾದ ಸಂಕಟದಿಂದ ತುಂಬಿದೆ. ಆ ಸಹನೆ ಯಾಕೋ ಅತಿರೇಕದ್ದು ಅನ್ನಿಸಲು ಆರಂಭವಾಗುತ್ತಿದ್ದಂತೆಯೇ ಶೈಲಜಾ ಸಿಡಿದೇಳುವ ಲಕ್ಷಣಗಳು ತೋರಿ ಸಮಾಧಾನವಾಗುತ್ತದೆ. ಸೀತೆಯ ಗಂಡ ಕೇಚುವಿನ ಸ್ವಭಾವ ಒಂದು ರೀತಿಯ ಸಹಜ ಸ್ಪಂದನದಿಂದ ಕಾಡುವಂಥದು. ತಾಯಿಯ ಆತ್ಮಹತ್ಯೆ ಸುದ್ದಿಯಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಲು ಎಂಬಂತೆ ಸೀತೆ ಕಲಿತ ಕುಡಿತದಂತಹ ದುಶ್ಚಟದ ವಿರಾಟರೂಪ ಓದುಗರನ್ನು ಸಹ ಕ್ಷಣ ನಡುಗಿಸಿಬಿಡುವಂಥದು.

ಕುಸುಮಾ ಶಾನುಭಾಗ ಅವರು ಒಂದು ರೀತಿಯ ನಿರುದ್ವೇಗದ ಶೈಲಿಯಲ್ಲಿ ಕತೆ ಹೇಳುತ್ತಾ ಹೋಗುತ್ತಾರೆ. ಇವರ ಕೃತಕವಾಗದ ವಿಧಾನದಲ್ಲಿ ತಮ್ಮ ಅನುಭವವನ್ನೂ ಹಾಗೂ ತಮ್ಮದಲ್ಲದ ಅನುಭವವನ್ನೂ ನಮ್ಮ ಅನುಭವಕ್ಕೆ ನಿಲುಕುವಂತೆ ಕಾದಂಬರಿಯ ಹಂದರದೊಳಗೆ ಕುಸುಮಾ ನಿಭಾಯಿಸುತ್ತಾರೆ. ಮಹತ್ವದ್ದೇನನ್ನೂ ಸಾಧಿಸಲು ಅರ್ಹತೆ ಇಲ್ಲದವರು ಸಹ ಮನೆಯ ಹೆಣ್ಣುಮಕ್ಕಳನ್ನು ನಡೆಸಿಕೊಳ್ಳುವ ಮಾತುಗಳು, ವರ್ತನೆಗಳು, ಭಂಡತನಗಳು ತಮ್ಮವೇ ಆದ ಒಂದು ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಸಶಕ್ತವಾಗಿ ತಮ್ಮ ಶಕ್ತಿ ಮೀರಿ ಹೆಣೆಯಲು ಯತ್ನಿಸಿ ಕಾದಂಬರಿಗಾರ್ತಿ ಗೆದ್ದಿದ್ದಾರೆ. ಇದು ಒಂದು ರೀತಿಯಲ್ಲಿ ಸ್ತ್ರೀ ಸಮುದಾಯದ ಎಲ್ಲ ಮುಖಗಳ ಖಚಿತ ಪ್ರತಿಬಿಂಬವೂ ಹೌದು.

ಹೆಣ್ಣುಮಕ್ಕಳ ಮನಸ್ಸಿನ ಭಾವನೆಗಳನ್ನು ಎಳೆಎಳೆಯಾಗಿ ಬಿಡಿಸಿ ಬಿಚ್ಚಿಡುತ್ತ, ಗಂಡುಗಳ ಅವಗುಣಗಳನ್ನು ಅನಾವರಣಗೊಳಿಸುವ ಹಾದಿಯಲ್ಲಿ, ಒಂದು ಬಗೆಯ ಕಾಲಾತೀತವಾದಂತಹ ನೇರ ಸರಳ ನಿರೂಪಣೆಯ ಚರಿತ್ರೆಯಿದು. ಕೆಲವರು ಇದ್ದು ಸತ್ತಂತಿರುವವರು, ಹಲವರು ಎಲ್ಲವನ್ನೂ ಸಹಿಸಿಕೊಳ್ಳುತ್ತ ಜೀವಿಸಿದ ಗಟ್ಟಿಗಿತ್ತಿಯರು, ಇವರೆಲ್ಲ ನಮ್ಮದೇ ನೆರಳಿನಂತೆ ನಮ್ಮಗಳ ಸುತ್ತಲೇ ಸುತ್ತುತ್ತಾರೆ. ಒಂದೊಂದಾಗಿ ಹೇಳುವ ವಿವರಗಳೊಂದಿಗೆ ಮೊದಲ ಭಾಗದಲ್ಲೇ ಕುಸುಮಾ ಅವರ ಸುಲಲಿತ ಶೈಲಿ ನಮಗೆ ಪರಿಚಯವಾಗುತ್ತದೆ. ಪದಗಳ ಆಡಂಬರವಿಲ್ಲದೆ ಕಾದಂಬರಿ ವಿಸ್ತಾರದಲ್ಲಿ ತೆರೆದುಕೊಂಡಿರುವ, ಹೆಸರಿಲ್ಲದ ಅನೇಕ ಸಂಬಂಧಗಳು, ಅಪ್ಪಟ ಮಾನವೀಯ ದೌರ್ಬಲ್ಯಗಳು, ಮತ್ತು ಬದಲಾದ ಬದುಕಿನ ಮೌಲ್ಯಗಳ ತೀವ್ರ ಮುಖಾಮುಖಿಯನ್ನು ಇಲ್ಲಿಯ ಬರವಣಿಗೆಯುದ್ದಕ್ಕೂ ಕಾಣುತ್ತೇವೆ.

ಹಳ್ಳಿಯ ಗಾಢ ಸಂಬಂಧಗಳ ನಡುವಿನ ಕಾವೇರಿ, ನಂತರ ಅಲ್ಲೇ ಕಳೆದು ಹೋಗುವ ಪರಿಯನ್ನು ಮನಗಾಣುತ್ತೇವೆ. ಹರಿಯುವ ನೀರಿನ ಅಲೆಗಳಂತೆ ಹೆಣ್ಣಿನ ಎದೆಯ ಮಾತುಗಳು ಕುಸುಮಾ ಅವರ ಬರಹದಲ್ಲಿ ಸರಾಗವಾಗಿ ಸರಿಯುತ್ತ ಮನಸ್ಸನ್ನು ತೇವಗೊಳಿಸುತ್ತವೆ. ಅನುಭವಗಳು ಹೀಗೆ ನೆನಪುಗಳಾಗಿ ಅವು ಮಾಯದ ಗಾಯಗಳಾಗುತ್ತವೆ. ಸ್ತ್ರೀಪ್ರಜ್ಞೆಯನ್ನು ಉದ್ದೀಪಿಸುವಂತಹ ಕಾದಂಬರಿಯಿದು. ಒಬ್ಬ ಹೆಣ್ಣಿನ ಹೋರಾಟದ, ವಾಸ್ತವ ಜೀವನದ ತಲ್ಲಣ ಆತಂಕಗಳನ್ನು ತೆರೆದು ತೋರುತ್ತಲೇ, ನಮ್ಮ ಹಳ್ಳಿಯ ಮಹಿಳೆಯರು ಸಾಗಿಬಂದ ದಾರಿಯನ್ನು ನಿರೂಪಿಸುವ ಈ ಕೃತಿ ಅತ್ಯಂತ ಆಳವೂ ನಿಗೂಢವೂ ಆದ ಪರಂಪರೆಯನ್ನು ಪ್ರಶ್ನಿಸುತ್ತದೆ. ಇಲ್ಲಿ ಹೆಣ್ಣಿನ ಅಳಲನ್ನು ಹಳಹಳಿಕೆಯನ್ನು ಇಲ್ಲವಾಗಿಸಿ ಅವರ ಮೇರು ವ್ಯಕ್ತಿತ್ವವನ್ನು ಕಾಣಿಸಲು ಕುಸುಮಾ ಪ್ರಯತ್ನಿಸಿದ್ದಾರೆ. ಬದುಕಿನ ಜಂಜಡಗಳನ್ನು ಮೆಟ್ಟಿ ನಿಲ್ಲುವ ಕಾವೇರಿಯಂತಹ ಹೆಣ್ಣುಮಕ್ಕಳು ಎಲ್ಲಾ ಕಾಲಕ್ಕೂ ಅಪರೂಪವೇ. ಎಂಥ ತಣ್ಣನೆಯ ಕ್ರೌರ್ಯದಲ್ಲೂ ಮಣ್ಣಿನಿಂದ ಎದ್ದು ಬಂದವರಂತೆ ಇಲ್ಲಿನ ಹೆಣ್ಣುಗಳು ಜೀವಿಸುತ್ತಾರೆ.

ಬದುಕಿನ ಗತಿಯನ್ನೇ ಬದಲಿಸಿ ತೇಲಿಸುವುದು ಮತ್ತು ವಿಷಾದದ ಭಾವವನ್ನು ಆದಷ್ಟು ಕಡಿಮೆಗೊಳಿಸುವುದು ಈ ಕಾದಂಬರಿಕಾರ್ತಿಯ ಸದುದ್ದೇಶಗಳಲ್ಲೊಂದು. ಇಲ್ಲಿ ಹೆಣ್ಣ ಕಣ್ಣೀರಿನ ಧಾರೆಗೆ ಆಸ್ಪದವಿಲ್ಲ. ಸಂವೇದನಾಶೀಲ ಸೂಕ್ಷ್ಮ ಲೇಖಕಿಯೊಬ್ಬಳು ತನ್ನ ಬಾಲ್ಯದ ನೆನಪುಗಳಿಗೆ, ಕಂಡು ಕೇಳಿದ ಘಟನೆಗಳನ್ನು ಇಷ್ಟರಮಟ್ಟಿಗೆ ತನ್ನೆದೆಗೆ ಹಚ್ಚಿಕೊಂಡು ಆಪ್ತವಾಗಿ ಸ್ಪಂದಿಸಿ, ನಮಗೂ ಅದರ ಗುಂಗನ್ನು ತಲುಪಿಸುವ ರೀತಿ ಅಚ್ಚರಿಗೊಳಿಸುವಂತಹದು. ಹೆಣ್ಣಿನ ಬಿಡುಗಡೆಯ ಹಂಬಲದ ಜೊತೆ ಮಹಾತ್ವಾಕಾಂಕ್ಷೆಯ ಭವಿಷ್ಯತ್ತಿನ ದಿನಗಳನ್ನು ಕಾಯುವಂತೆ ಮಾಡುವ, ನೂರಾಮೂವತ್ತು ಪುಟಗಳ ಈ ಯಶಸ್ವೀ ಕೃತಿಯೊಂದನ್ನು ಕನ್ನಡ ಕಾದಂಬರಿ ಲೋಕಕ್ಕೆ ಕೊಟ್ಟ, ಸೂಕ್ಷ್ಮ ಕಥೆಗಾರ್ತಿಯೂ ಆಗಿರುವ ಕುಸುಮಾ ಶಾನುಭಾಗ ಅಭಿನಂದನೆಗೆ ಅರ್ಹರು.

**ಸುನಂದಾ ಪ್ರಕಾಶ ಕಡಮೆ**
ನಂ. ೯೦, ನಾಗಸುಧೆ, ಕಾಳಿದಾಸನಗರ
ವಿದ್ಯಾನಗರ ವಿಸ್ತೀರ್ಣ
ಹುಬ್ಬಳ್ಳಿ - ೫೮೦ ೦೩೧

# ಬೆಕ್ಕಿನಂಥ ಸಾವು



**ಹೊ**ರಗೆ ಅಂಗಳದ ತುಂಬೆಲ್ಲಾ
ಅರೆ ಬಿರಿದ ಗುಲಾಬಿ ಸಂಪಿಗೆ ಮಲ್ಲಿಗೆ ಸೇವಂತಿಗೆ
ಸೆಳೆಯುತ್ತಿದೆ ಕರೆಯುತ್ತಿದೆ ಸುಂದರ ಬದುಕು ಬಾಗಿಲಿಂದಾಚೆಗೆ
ಆದರೇನು, ಹೋಗಲು ಬಿಡುತ್ತಿಲ್ಲ ನನ್ನನ್ನು ಸಾವು ಹೊರಗೆ
ಹೆಗಲೇರಿ ಕುಳಿತುಬಿಟ್ಟಿದೆ ತಣ್ಣಗೆ
ನೆಕ್ಕುತ್ತಾ ಕುತ್ತಿಗೆ
ಮುದ್ದುಗಾರ ಬೆಕ್ಕಿನ ಹಾಗೆ !
ಕುಳಿತಿದ್ದೇನೆ ಹೆಳವಿ – ಕಿಟಕಿಯ ಬಳಿ
ಇಲ್ಲಿರಲಾರೆ ಹೋಗಲಾರೆ ಹೊರಗೆ !

ಸುಕನ್ಯಾ ಕಳಸ
'ಭೂಮಿಗೀತ', ಅಪೂರ್ವ ಕಾಂಪ್ಲೆಕ್ಸ್ ಹಿಂಭಾಗ, ದೊಡ್ಡಣ್ಣಗುಡ್ಡೆ
ಉಡುಪಿ - ೫೭೬ ೧೦೨

# ಕೈದಾಳ : ಒಂದು ಅಧ್ಯಯನ

ಡಾ॥ ಎಚ್. ಚಂದ್ರಶೇಖರ

**ಕೈ**ದಾಳ ಒಂದು ಚಿಕ್ಕ ಹಳ್ಳಿ. ಪ್ರಗತಿಪಥದಲ್ಲಿರುವ ತುಮಕೂರು ನಗರದಿಂದ ಸುಮಾರು ೫ (ಐದು) ಕಿ.ಮೀ. ನೈಋತ್ಯ ದಿಕ್ಕಿನಲ್ಲಿರುವ ಈ ಗ್ರಾಮದಲ್ಲಿ ಒಂದು ಶ್ರೇಷ್ಠ ಮಟ್ಟದ ಕಲಾಕೃತಿ ಇದೆ. ಅದೇ ಚೆನ್ನಕೇಶವ ಗುಡಿಯ ಗರ್ಭಗುಡಿಯಲ್ಲಿರುವ ಚೆನ್ನಿಗರಾಯ ಮೂರ್ತಿ – ಚೆಲುವ ಚೆನ್ನಿಗರಾಯ ಎಂಬ ಮಾತು ಇಲ್ಲಿ ಸಾರ್ಥಕವಾಗಿದೆ.

ಈ ಶಿಲ್ಪವನ್ನು ಬೇರೆ ಬೇರೆ ಕಾಲದಲ್ಲಿ ಬಳಪದ ಕಲ್ಲಿನಲ್ಲಿ ಕಡೆಯಲಾಗಿದೆ. ಶಿಲ್ಪದ ಶೈಲಿ ಮತ್ತು ಲಕ್ಷಣಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇದು ಹೊಯ್ಸಳ ಕಾಲದ ಶಿಲ್ಪ ಎಂಬುದು ವಿದಿತವಾಗುತ್ತದೆ. ಆದರೆ ಗರ್ಭಗುಡಿಯ ಮುಂದಿರುವ ಮಂಟಪ ಮತ್ತು ಮಹಾದ್ವಾರಗಳನ್ನು ವಿಜಯನಗರ ಶೈಲಿಯಲ್ಲಿ ಒರಟು ಮತ್ತು ಅಸಮನಾದ ಹರಳುಗಳುಳ್ಳ ಕಣಶಿಲೆಯಲ್ಲಿ ಕಟ್ಟಲಾಗಿದೆ. ಇದರರ್ಥ ಮೂರ್ತಿ ಮತ್ತು ದೇವಸ್ಥಾನದ ಕಟ್ಟಡಗಳ ಕಾಲ ಬೇರೆ ಬೇರೆ.

ಈ ದೇವಸ್ಥಾನದ ಆವರಣದೊಳಗೆ ಗರುಡನಿಗೊಂದು, ವಿಷ್ಣುವಿಗೊಂದು ಪ್ರತ್ಯೇಕವಾದ ಚಿಕ್ಕಚಿಕ್ಕ ಗುಡಿಗಳಿವೆ. ಈ ಎರಡೂ ಶಿಲ್ಪಗಳು ಸುಂದರವಾಗಿವೆ. ಆದರೆ ಒರಟು ಕಣಶಿಲೆಯಲ್ಲಿ ಕಡೆಯಲಾಗಿರುವುದರಿಂದ ಶಿಲ್ಪದಲ್ಲಿ ಭಾವನೆಗಳನ್ನು ಮೂಡಿಸುವುದು ಶಿಲ್ಪಿಗೆ ಸಾಧ್ಯವಾಗಿಲ್ಲ. ಆದರೆ ಈ ಎರಡೂ ಮೂರ್ತಿಗಳ ಅಲಂಕರಣ ಸುಂದರವಾಗಿದೆ. ಶಿಲ್ಪಿ ಈ ಎರಡೂ ಮೂರ್ತಿಗಳ ಉಡುಗೆ-ತೊಡುಗೆ ಮತ್ತು ಆಯುಧಗಳನ್ನು ಸೂಕ್ಷ್ಮವಾಗಿ ಕೆತ್ತಿದ್ದಾನೆ. ಈ ಎರಡೂ ಶಿಲ್ಪಗಳು ವಿಜಯನಗರ ಶೈಲಿಯಲ್ಲಿವೆ.

ಈ ಗುಡಿಯ ಮಹಾದ್ವಾರವನ್ನು ಕಣಶಿಲೆಯಲ್ಲಿ ಕಡೆಯಲಾಗಿದೆ. ಬೃಹತ್ ಆಕಾರದ, ಅಷ್ಟೇ ಕಲಾತ್ಮಕವಾದ ಶಾರ್ದೂಲ ಸ್ತಂಭಗಳು ಹಂಪಿಯ ವಿಜಯ ವಿಠ್ಠಲ ದೇವಸ್ಥಾನದ ಕಲ್ಯಾಣ ಮಂಟಪದ ಸ್ತಂಭಗಳನ್ನು ನೆನಪಿಸುತ್ತವೆ. ಮಹಾದ್ವಾರದ ಮೇಲಿನ ಗೋಪುರವನ್ನು ಇತ್ತೀಚೆಗೆ ಸಿಮೆಂಟಿನಲ್ಲಿ ಪಲ್ಲವ-ಚೋಳ ಶೈಲಿಯಲ್ಲಿ ನಿರ್ಮಿಸಿ ನೀಲಿ ಬಣ್ಣವನ್ನು ಬಳಿದು ಕಲಾ ವೈಭವಕ್ಕೆ ಕುಂದುಂಟುಮಾಡಲಾಗಿದೆ. ಇದೊಂದು ಆಭಾಸಕಾರಿಯಾದ ಸಂಗತಿ.

**ದಂತ ಕಥೆ**

ಈ ಊರಿಗೆ ಕೈದಾಳ ಎಂದು ಹೆಸರು ಬರಲು ಒಂದು ದಂತಕಥೆಯನ್ನು ಜನಪದರು ಹೇಳುತ್ತಾರೆ.



ಹೊಯ್ಸಳ ಶೈಲಿಯ ಕೇಶವ ಶಿಲ್ಪ



ಕಲಾತ್ಮಕ ಹಾಗೂ ಬೃಹತ್ ಆಕಾರದ ಶಾರ್ದೂಲ ಸ್ತಂಭಗಳು, ವಿಜಯನಗರ ಶೈಲಿಯಲ್ಲಿ

ದಂತಕಥೆಯ ನಾಯಕ ಹಾಗೂ ಐತಿಹಾಸಿಕ ಪುರುಷನಲ್ಲದ ಜಕಣಾಚಾರಿ ಶಿಲ್ಪಿಯು ತನ್ನ ಮಗ ಒಡ್ಡಿದ ಪಂಥಾಹ್ವಾನದಲ್ಲಿ ಸೋತು ಬೇಲೂರಿನಲ್ಲಿ (ಹಾಸನ ಜಿಲ್ಲೆ) ತನ್ನ ಬಲಗೈಯನ್ನು ಕತ್ತರಿಸಿಕೊಂಡ ನಂತರ ತನ್ನ ಹುಟ್ಟೂರಿಗೆ ಬಂದು ಕೈದಾಳದಲ್ಲಿ ಚೆನ್ನಿಗರಾಯನ ಈ ಅಪೂರ್ವ ಶಿಲ್ಪವನ್ನು ಎಡಗೈಯಿಂದ ಕೆತ್ತಿದನು. ಆಗ ದೇವರು ಇವನ ಕಲೆ ಮತ್ತು ಭಕ್ತಿಗೆ ಮೆಚ್ಚಿ ಬಲಗೈಯನ್ನು ವರದಾನವಾಗಿ ನೀಡಿದನಂತೆ. ಇದೊಂದು ರೀತಿಯಲ್ಲಿ ಇಂದಿನ ಪ್ಲಾಸ್ಟಿಕ್ ಸರ್ಜರಿಗೆ ಸಮನಾದ ಅದ್ಭುತ ಕಲ್ಪನೆ !! ಹಾಗಾದರೆ ಈ ಘಟನೆ ನಡೆಯುವುದಕ್ಕೆ ಪೂರ್ವದಲ್ಲಿ ಈ ಊರಿಗೆ ಹೆಸರೇ ಇರಲಿಲ್ಲವೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಉತ್ತರವಾಗಿ ನಾನು ಮುಂದೆ ಚರ್ಚಿಸಲಿರುವ ಈ ಗುಡಿಯ ಪಕ್ಕದಲ್ಲಿರುವ ಗಂಗಾಧರೇಶ್ವರ ಗುಡಿಯಲ್ಲಿರುವ ಎರಡು ಶಾಸನಗಳು ಪರಿಹಾರವನ್ನು ನೀಡುತ್ತವೆ. ಸದ್ಯಕ್ಕೆ ಜಕಣಾಚಾರಿಯ ದಂತಕಥೆಯನ್ನು ಚರ್ಚಿಸುತ್ತೇನೆ.

**ಕಾಲ್ಪನಿಕ ವ್ಯಕ್ತಿ**

ಈ ಜಕಣಾಚಾರಿ ಎಂಬ ಕಾಲ್ಪನಿಕ ವ್ಯಕ್ತಿ ಎಷ್ಟು ಗಟ್ಟಿಯಾಗಿ ಜನಮಾನಸದಲ್ಲಿ ನೆಲೆಯೂರಿದ್ದಾನೆಂದರೆ, ಕರ್ನಾಟಕದ ಯಾವುದೇ ಕಾಲದ ಯಾವುದೇ ದೇವಾಲಯವನ್ನು (ವಿಶೇಷವಾಗಿ ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ದೇವಾಲಯಗಳು), ಇದನ್ನು ಜಕಣಾಚಾರಿಯೇ ಕಡೆದಿದ್ದಾನೆ ಎಂದು ಜನರು ಹೇಳುತ್ತಾರೆ. ಈ ಮಾತನ್ನು ನಂಬಿದರೆ ಈ ಕಾಲ್ಪನಿಕ ವ್ಯಕ್ತಿ ಸುಮಾರು ೨೦೦ ವರ್ಷಗಳ ಕಾಲ ದೇವಾಲಯಗಳನ್ನು ಕಟ್ಟಿದನೆಂದು ಒಪ್ಪಬೇಕಾದೀತು !! ಇದೊಂದು ತೀರ ಆಭಾಸಕಾರಿ ಕಲ್ಪನೆ.

ಈ ತೆರನ ಕಲ್ಪನೆ ಬೆಳೆದುಬರಲು ೨೦ನೇ ಶತಮಾನದ ಆರಂಭದ ಕಾಲದ ಪಠ್ಯಪುಸ್ತಕಗಳಲ್ಲಿ ಈ ಕಥೆಯನ್ನು ಐತಿಹಾಸಿಕವಾಗಿ ಜರುಗಿದ ಸತ್ಯ ಘಟನೆ ಎಂಬಂತೆ ನಮೂದಿಸಲಾಗಿತ್ತು. ನಾನು ಬಾಲ್ಯದಲ್ಲಿ ಇಂಥ ಕಥೆ ಓದಿದ್ದೆ, ನಂಬಿದ್ದೆ ಕೂಡ. ಆದರೆ ಇತ್ತೀಚೆಗೆ ಇತಿಹಾಸಕಾರರು ಈ ಬಗೆಯ ದಂತಕಥೆಗಳನ್ನು ನಿರಾಧಾರವೆಂದು ಬರೆಯಲು ಆರಂಭಿಸಿದ್ದಾರೆ. ತೀರ ಇತ್ತೀಚೆಗೆ ಡಾ॥ ಶೆಟ್ಟರ್ ಅವರು ತಮ್ಮ ಸೋಮನಾಥಪುರ ಪುಸ್ತಕದಲ್ಲಿ ಸ್ವಲ್ಪ ಹೆಚ್ಚು ವಿವರವಾಗಿ ಚರ್ಚಿಸಿದ್ದಾರೆ. ಇಂಥ ರೂವಾರಿ ಇರಲಿಲ್ಲವೆಂದು ಹೇಳಿದ್ದಲ್ಲದೆ, ಜಕ್ಕಣ ಎಂಬ ಶಬ್ದದ ಮೂಲ 'ಯಕ್ಷ' ಎಂಬ ಊಹೆಯನ್ನೂ ಹೇಳುತ್ತಾರೆ. ಮುಂದುವರಿದು ಜಕ್ಕವ್ವೆ, ಜಕ್ಕಬ್ಬೆ, ಜಕ್ಕಿ ಅಥವಾ ಜಕ್ಕ ಎಂಬ ಹೆಸರುಗಳು ಕನ್ನಡದ ದಾಖಲೆಗಳಲ್ಲಿವೆ; ಆದರೆ ಜಕ್ಕಣಾಚಾರಿ ಎಂಬ ಹೆಸರಿನ ಉಲ್ಲೇಖವಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಾರೆ.

ಇನ್ನು ಹೊಯ್ಸಳರ ಕಾಲದ ಸ್ಥಪತಿಗಳ, ರೂವಾರಿಗಳ ಅಥವಾ ಶಿಲ್ಪಿಗಳ ಹೆಸರುಗಳನ್ನು ಪರಿಶೀಲಿಸೋಣ. ಡಾ|| ರಾಜಶೇಖರ ಅವರು ಹೊಯ್ಸಳರ ಕಾಲದ ಶಾಸನೋಕ್ತ ರೂವಾರಿಗಳ ಹೆಸರುಗಳ ದೊಡ್ಡ ಪಟ್ಟಿಯನ್ನೇ ನೀಡಿದ್ದಾರೆ. ಉದಾಹರಣೆಗೆ, ದಾಸೋಜ, ಹೊನ್ನೋಜ, ಕಾಳಿದಾಸ, ಸುಬಂಜ, ಮಲ್ಲಿತಮ್ಮ ಇತ್ಯಾದಿ. ಎಲ್ಲಿಯೂ ಜಕ್ಕಣಾಚಾರಿ ಮತ್ತು ಡಂಕಣ್ಣನ ಉಲ್ಲೇಖವಿಲ್ಲ. ಅಂದರೆ ಜಕ್ಕಣಾಚಾರಿ ಮತ್ತು ಡಂಕಣ್ಣ ಇಬ್ಬರೂ ಕಾಲ್ಪನಿಕ ವ್ಯಕ್ತಿಗಳು ಹಾಗೂ ಕೈದಾಳಕ್ಕೂ ಈ ಕಾಲ್ಪನಿಕ ವ್ಯಕ್ತಿಗಳಿಗೂ ಯಾವುದೇ ಬಗೆಯ ಸಂಬಂಧವಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಇಂಥ ಕಾಲ್ಪನಿಕ ವ್ಯಕ್ತಿಯ ಹೆಸರಿನಲ್ಲಿ ಕರ್ನಾಟಕ ಸರ್ಕಾರ ಶಿಲ್ಪಿಗಳಿಗೆ ಶ್ರೇಷ್ಠ ಪ್ರಶಸ್ತಿ ನೀಡುತ್ತಿರುವುದು ಆಭಾಸಕಾರಿಯಾದ ಸಂಗತಿ. ಇದನ್ನು ಬದಲಾಯಿಸಬೇಕೆಂದು ಸರ್ಕಾರಕ್ಕೆ ಸಲಹೆ ನೀಡುವುದು ಅವಶ್ಯ.

**ಕೈದಾಳದ ಕೇಶವ**

ಇದೇ ಊರಿನಲ್ಲಿ ಚೆನ್ನಿಗರಾಯ ದೇವಸ್ಥಾನದ ಪಕ್ಕದಲ್ಲಿರುವ ಗಂಗಾಧರೇಶ್ವರ ದೇವಸ್ಥಾನದಲ್ಲಿ ಕ್ರಿ.ಶ. ೧೦೫೧ರ ಎರಡು ಶಾಸನಗಳೂ ಪ್ರಕಟವಾಗಿವೆ. ಇವುಗಳಲ್ಲಿ ಎರಡನೆಯ ಶಾಸನ ಹಲವಾರು ಪ್ರಮುಖ ವಿಷಯಗಳನ್ನು ತಿಳಿಸುತ್ತದೆ ಮತ್ತು ನಮ್ಮ ಈ ಚರ್ಚೆಗೆ ಪ್ರಸ್ತುತವಾಗಿದೆ. ಈ ಶಾಸನದ ಪ್ರಕಾರ ಈ ಊರಿನ ಹೆಸರು 'ಕಯ್ಯಾಳ'ವೆಂದು ಉಲ್ಲೇಖಿತವಾಗಿದೆ. ಮುಂದೆ 'ಕೈದಾಳ' ಎಂದು ಚಲಾವಣೆಯ ಹೆಸರಾಯಿತು.

ಈ ಪ್ರದೇಶವನ್ನು ಹೊಯ್ಸಳ ದೊರೆ ವಿಷ್ಣುವರ್ಧನನ ಸಾಮಂತನಾದ ಗೂಳಿಬಾಚಿದೇವನು ಆಳುತ್ತಿದ್ದನು. ಅವನು ಹಲವಾರು ಜನಪರ ಕಾರ್ಯಗಳನ್ನು ಮಾಡಿಸುತ್ತಿದ್ದನೆಂದು ಈ ಶಾಸನದಲ್ಲಿ ಅವನನ್ನು ಪ್ರಶಂಸಿಸಲಾಗಿದೆ. ಅವನು ತನ್ನ ತಂದೆಗೆ ಪರೋಕ್ಷ ವಿನಯವಾಗಿ ಗಂಗೇಶ್ವರ ಮತ್ತು ಕೇಶವ ದೇವರ ದೇವಾಲಯಗಳನ್ನೂ, ತನ್ನ ಹೆಂಡತಿ ಭೀಮವ್ವೆ ನಾಯಕಿತಿಗೆ ಪರೋಕ್ಷ ವಿನಯವಾಗಿ ಭೀಮ ಜಿನಾಲಯವನ್ನೂ, ಮಗಳು ಚೆನ್ನವ್ವೆ ನಾಯಕಿತಿಗೆ ಪರೋಕ್ಷ ವಿನಯವಾಗಿ ರಾಮೇಶ್ವರ ದೇವಾಲಯವನ್ನೂ ಮತ್ತು ಮುತ್ತಯ್ಯನಿಗೆ ಪರೋಕ್ಷ ವಿನಯವಾಗಿ ಚಲವರೇಶ್ವರ ದೇವಾಲಯವನ್ನೂ ಕಟ್ಟಿಸಿದನು. ಸದ್ಯ ಗಂಗೇಶ್ವರ (ಗಂಗಾಧರೇಶ್ವರ) ಮತ್ತು ಕೇಶವ (ಚೆನ್ನಿಗರಾಯಸ್ವಾಮಿ) ದೇವಾಲಯಗಳ ಹೊರತಾಗಿ ಉಳಿದ ಗುಡಿಗಳು ನಾಶವಾಗಿಹೋಗಿವೆ.



*ಚೆನ್ನಕೇಶವ ದೇವಾಲಯದ ಆವರಣದ ಒಂದು ಚಿಕ್ಕ ಗುಡಿಯಲ್ಲಿರುವ ಗರುಡ ಶಿಲ್ಪ*

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಗೂಳಿಬಾಚಿದೇವ ಸ್ಥಾಪಿಸಿದ್ದ ಮೂರ್ತಿಯ ಹೆಸರು 'ಕೇಶವ'. ಬಹುಶಃ ಬೇಲೂರಿನ ಚೆನ್ನಕೇಶವ ಮೂರ್ತಿಗೆ ಸಮನಾದ ಹೆಸರಿರಲಿ ಎಂಬುದು ಅವನ ಉದ್ದೇಶ. ಆದರೆ ಜನಪದರು ಈ ಹೆಸರನ್ನೂ ಬದಲಾಯಿಸಿ 'ಚೆನ್ನಿಗರಾಯಸ್ವಾಮಿ' ಎಂದು ಕರೆಯಲಾರಂಭಿಸಿದರು. ಯಾರು ಈ ಬದಲಾವಣೆಯನ್ನು ತಂದರೆಂಬುದು ತಿಳಿಯದು.

**ಪರೋಕ್ಷ ವಿನಯ**

ಪರೋಕ್ಷ ವಿನಯದ ಬಗ್ಗೆ ಒಂದೆರಡು ಮಾತುಗಳು ಅವಶ್ಯ ಎನಿಸುತ್ತದೆ. ಈ ಪರಿಕಲ್ಪನೆಯನ್ನು ಡಾ|| ಗೋಪಾಲ ರಾವ್ ಕೊಂಚ ಚರ್ಚಿಸಿದ್ದಾರೆ. ಡಾ|| ಆರ್. ಶೇಷಶಾಸ್ತ್ರಿ ಮತ್ತು ಡಾ|| ಚಿದಾನಂದಮೂರ್ತಿಗಳ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ. ಆದರೆ ಡಾ|| ಗೋಪಾಲ ರಾವ್ ಅವರ ವಿವರಣೆ ಸೂಕ್ತವೆನಿಸುತ್ತದೆ. ಸತ್ತ ವ್ಯಕ್ತಿ ಬದುಕಿದ್ದಾಗ ಗಳಿಸಿದ ಯಶಸ್ಸು ಮತ್ತು ಕೀರ್ತಿ ಅವನ ನಂತರವೂ ಜನರ ಮನಸ್ಸಿನಲ್ಲಿ ಉಳಿಯಲಿ ಎಂಬ ಕಾರಣಕ್ಕಾಗಿ ಪರೋಕ್ಷವಾಗಿ ಮಾಡುವ ಕಾರ್ಯವೇ ಪರೋಕ್ಷ ವಿನಯ ಎಂಬ ವಿವರಣೆಯು ಸಮ್ಮತವಾದುದಾಗಿದೆ. ಈ ದೃಷ್ಟಿಯಿಂದ ನೋಡಿದಾಗ ಗೂಳಿಬಾಚಿದೇವನು ತನ್ನ ಅಜ್ಜ, ತಂದೆ, ಹೆಂಡತಿ ಮತ್ತು ಮಗಳ ಬಗ್ಗೆ ಗೌರವಾದರಗಳನ್ನೂ, ಪ್ರೀತಿಯನ್ನೂ ಹೊಂದಿದ್ದನೆಂಬುದು ವ್ಯಕ್ತವಾಗುತ್ತದೆ.

**ಪೂರ್ಣ ಪ್ರಮಾಣದ ಗುಡಿ ಎಲ್ಲಿ?**

ಕೇಶವ ದೇವಾಲಯದ ಶಿಲ್ಪ ಮಾತ್ರ ಹೊಯ್ಸಳ ಶೈಲಿಯಲ್ಲಿದೆ ಎಂದು ಹೇಳಿದೆ. ಆದರೆ ಅದರ ಸುತ್ತಲಿರುವ ಗರ್ಭಗುಡಿ, ಮಂಟಪ ಮತ್ತು ಸುತ್ತಲಿನ ಪೌಳಿ ಯಾವುದೇ ಬಗೆಯ ಹೊಯ್ಸಳ ಶೈಲಿಯ ಅವಶೇಷಗಳನ್ನು ಹೊಂದಿಲ್ಲದಿರುವುದು ಅಚ್ಚರಿಯ ಸಂಗತಿ. ಯಾರಾದರೂ ವೈರಿಗಳು ಈ ದೇವಾಲಯದ ರಂಗಮಂಟಪ ಇತ್ಯಾದಿಗಳನ್ನು ನಾಶಮಾಡಿದ್ದರೆ ಎಲ್ಲಿಯಾದರೂ ಒಂದೆರಡು ಶಿಲ್ಪಗಳು, ಅಧಿಷ್ಠಾನದ ಅಥವಾ ಕಕ್ಷಾಸನದ ಕಲ್ಲುಗಳು ಖಂಡಿತವಾಗಿಯೂ ಈ ಪರಿಸರದಲ್ಲಿ ಬಿದ್ದಿರುತ್ತಿದ್ದವು; ಹಾಗಿಲ್ಲ, ಆದ್ದರಿಂದ ಗೂಳಿಬಾಚಿದೇವನಿಗೆ ಈ ಸುಂದರ ಶಿಲ್ಪವನ್ನು ಮಾತ್ರ ಪ್ರತಿಷ್ಠಾಪಿಸಲು ಸಾಧ್ಯವಾಯಿತು. ಈ ಶಿಲ್ಪಕ್ಕೆ ತಕ್ಕುದಾದ ಪೂರ್ಣ ಪ್ರಮಾಣದ ದೇಗುಲವನ್ನು ಕಟ್ಟಿಸಲು ಯಾವುದೋ ಕಾರಣಗಳಿಂದ ಸಾಧ್ಯವಾಗಿಲ್ಲ ಎಂದು ಊಹಿಸಬಹುದು; ಬಹುಶಃ ಇನ್ನೂ ಹೆಚ್ಚಿನ ಆಧಾರಗಳು ಸಿಗುವವರೆಗೆ ಇದನ್ನೊಪ್ಪಿಕೊಳ್ಳುವುದು ವಿಹಿತ.

**ಒಂದು ಘಟನೆ**

ಇನ್ನೂ ಒಂದು ವಿಷಯವನ್ನು ದಾಖಲಿಸಲೇಬೇಕು. ಈ ವಿಷಯ ಇದುವರೆಗೆ ದಾಖಲಾಗಲಿಲ್ಲ. ಈಗ್ಗೆ ಸುಮಾರು ೪-೫ ವರ್ಷಗಳ ಹಿಂದೆ ಈ ಕೇಶವ ದೇಗುಲಕ್ಕೆ (ಚೆನ್ನಿಗರಾಯಸ್ವಾಮಿ) ಸೇರಿದ್ದ ಜಮೀನನ್ನು ಕಳೆದುಕೊಂಡ ರೈತನು ಸೇಡಿಗಾಗಿ ಈ ಸುಂದರ ಶಿಲ್ಪದ ಎಡಹಸ್ತವನ್ನು ತುಂಡರಿಸಿದನು. ಇದೊಂದು ಶುದ್ಧ ಅವಿವೇಕದ ಕೆಲಸ. ಕೂಡಲೆ ಕಾರ್ಯಪ್ರವೃತ್ತವಾದ ಜಿಲ್ಲಾಡಳಿತ ಮತ್ತು ರಾಜ್ಯ ಪುರಾತತ್ವ ಇಲಾಖೆಯು ಆರೋಪಿಯನ್ನು ಪತ್ತೆ ಹಚ್ಚಿ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆಯನ್ನು ಹೂಡಿದರು.

ಈ ಮಧ್ಯೆ ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟ್ ವತಿಯಿಂದ ನೇಮಕಗೊಂಡ ನಿರ್ಮಾಣ ಶಿಲ್ಪಿಯು ಆ ಕೈಯನ್ನು ಅದೇ ಶೈಲಿಯಲ್ಲಿ ನಿರ್ಮಿಸಿ ಜೋಡಿಸಿದನು. ಈಗ ನಾವು ಸೂಕ್ಷ್ಮವಾಗಿ ನೋಡಿದರೂ ಯಾವ ಕುಂದೂ ಕಂಡುಬರುವುದಿಲ್ಲ. ಇದೊಂದು ದಾಖಲಿಸಲೇಬೇಕಾದ ಸ್ತುತ್ಯರ್ಹ ಕಾರ್ಯ.

ಈ ಹಿನ್ನೆಲೆಯಲ್ಲಿ ತುಮಕೂರಿಗೆ ತೀರ ಹತ್ತಿರದಲ್ಲಿರುವ ಕೈದಾಳದ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ನಡೆಯುವ ಅವಶ್ಯಕತೆ ಇದೆ.

**ಡಾ|| ಎಚ್. ಚಂದ್ರಶೇಖರ**
ಎಮ್.ಐ.ಜಿ.-೭೭, ೬ನೇ ಕ್ರಾಸ್, ೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಕೊಲ್ಕತ್ತೆಯ ಕನ್ನಡಿಗ : ಕುಮಾರಪ್ಪ



ಕೊಲ್ಕತ್ತೆಯಲ್ಲಿ ೨೬ ವರ್ಷಗಳಿಂದ ಇರುವ ಕುಮಾರಪ್ಪ, ಅಲ್ಲಿನ ನ್ಯಾಶನಲ್ ಲೈಬ್ರರಿಯಲ್ಲಿ ಕನ್ನಡ ವಿಭಾಗದ ಗ್ರಂಥಪಾಲಕರು. ಅದೊಂದು ವರ್ಗಾವಣೆಯಿಲ್ಲದ ಕೆಲಸ. ಅಲ್ಲಿಯೇ ನಿವೃತ್ತರಾಗಬೇಕು. ಆದರೆ ಕುಮಾರಪ್ಪನವರಿಗೆ ಸದಾ ಊರಿನ ತುಡಿತ. ಒಮ್ಮೆ ಕರ್ನಾಟಕಕ್ಕೆ ಮರಳಿ ಬರುವ ಆಸೆಯಿಂದ, ಅವರು ಇಲ್ಲಿನ ಗ್ರಂಥಾಲಯಕ್ಕೆ ಅರ್ಜಿ ಹಾಕಿಕೊಂಡು ಒಂದು ಸಂದರ್ಶನಕ್ಕೆ ಬಂದರು. ಬಂದವರೇ ಲೇಖಕರಾದ ಪ್ರಭುಶಂಕರ ಅವರನ್ನು ಭೇಟಿಯಾದರು. ಪ್ರಭುಶಂಕರ ಅವರು ವಿಷಯ ತಿಳಿದು, ''ಕುಮಾರಪ್ಪ, ನಾನು ಇಂಟರ್‌ವ್ಯೂ ಕಮಿಟಿಯಲ್ಲಿ ಇಲ್ಲ. ಇದ್ದಿದ್ದರೆ ನಿಮಗೆ ಖಂಡಿತ ಕೆಲಸ ಸಿಗದಂತೆ ನೋಡಿಕೊಳ್ಳುತ್ತಿದ್ದೆ'' ಎಂದು ಹೇಳಿದರಂತೆ. ಗಾಬರಿಯಾದ ಕುಮಾರಪ್ಪ ''ಯಾಕೆ ಸಾರ್ ? ನಾನೇನಂಥ ತಪ್ಪು ಮಾಡಿದೆ ?'' ಎಂದು ಕೇಳಲು, ''ನೋಡಿ, ನೀವು ಬಂಗಾಳಕ್ಕೂ ಕರ್ನಾಟಕಕ್ಕೂ ಏಕೈಕ ಸಾಂಸ್ಕೃತಿಕ ಕೊಂಡಿ ತರಹ ಇದ್ದೀರಿ. ನೀವು ಬಂದರೆ ಆ ಕೊಂಡಿಯೇ ಕಳಚಿಹೋಗುತ್ತದೆ. ನೀವಲ್ಲಿ ಇರುವುದರಿಂದ ಎರಡೂ ಭಾಷೆಗಳ ನಡುವೆ ಕೊಡುಕೊಳು ನಡೆಯುತ್ತಿದೆ. ನೀವಲ್ಲೇ ಇದ್ದು ಕೆಲಸ ಮಾಡಬೇಕು'' ಎಂದರಂತೆ. ಪ್ರಭುಶಂಕರ್ ಅವರ ಮಾತಲ್ಲಿ ಕನ್ನಡದ ಕೆಲಸಕ್ಕಾಗಿ ಒಬ್ಬ ವ್ಯಕ್ತಿಯ ವೈಯಕ್ತಿಕ ಆಶೋತ್ತರವನ್ನು ಕಡೆಗಣಿಸುವ ಅಂಶವಿರುವುದು ನಿಜ. ಆದರೆ ಅದರಲ್ಲಿ ಒಂದು ಸಾಂಸ್ಕೃತಿಕ ಸತ್ಯವೂ ಇದೆ. ಆ ಸತ್ಯವು ಕೊಲ್ಕತ್ತೆಗೆ ಹೋದಾಗ ನನಗೂ ಮನವರಿಕೆಯಾಯಿತು.

ಕುಮಾರಪ್ಪ ಮೂಲತಃ ಚಿತ್ರದುರ್ಗ ಜಿಲ್ಲೆಯ ಬಸಾಪುರದವರು. ಅವರು ಕೊಲ್ಕತ್ತೆಯಲ್ಲಿರುವುದು ನನಗೆ ಗೊತ್ತಾಗಿದ್ದು ಅವರ ಅನುವಾದಗಳಿಂದ. ಅವರು ಕನ್ನಡಿಸಿರುವ ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರ 'ಮಾತೆಯರು ಮಾನ್ಯರಾಗಿದ್ದಾಗ' ಎಂಬ ಕೃತಿಯನ್ನು ನಾನು ಓದಿಕೊಂಡಿದ್ದೆನಾದರೂ, ಅದರ ಅನುವಾದಕರನ್ನು ಮರೆತಿದ್ದೆ. ಆದರೆ ಬಂಗಾಳದ ಬಾವುಲರ ಮೇಲಿನ ಅವರ ಲೇಖನ ಓದಿದ ಬಳಿಕ ಕುಮಾರಪ್ಪನವರ ಹೆಸರು ಮನಸ್ಸಲ್ಲಿ ಕೂತುಬಿಟ್ಟಿತು. ಕುಮಾರಪ್ಪ ಸಹ ಕರ್ನಾಟಕಕ್ಕೆ ಬಂದಾಗಲೆಲ್ಲ ಹಂಪಿಗೆ ಬಂದು ಮಾತಾಡಿಸಿ ಹೋಗುತ್ತಿದ್ದರು. ಇಂತಹ ಸಣ್ಣಪುಟ್ಟ ಎಳೆ ಹಿಡಿದುಕೊಂಡು, ''ಬಂಗಾಳ ನೋಡಲು ಬರುತ್ತಿದ್ದೇವೆ. ಮಾರ್ಗದರ್ಶನ ಮಾಡುವಿರಾ'' ಎಂದು ಕೇಳಿದೆ. ಅವರು ಉತ್ಸಾಹದಿಂದ ಬನ್ನಿ ಬನ್ನಿ ಎಂದರು. ಜತೆಗೆ ನಮಗಾಗಿ ಹೌರಾದಲ್ಲಿ ಒಂದು ಹೋಟೆಲನ್ನೂ ನೋಡಿಟ್ಟಿದ್ದರು. ಆ ಹೋಟೆಲು ಕೊಲ್ಕತ್ತೆಯ ಅಸ್ಮಿತೆಯಂತಿರುವ ಹೌರಾ ಸೇತುವೆಯ ಪಕ್ಕದಲ್ಲಿ ಹೂಗ್ಲಿಯ ದಡದಲ್ಲಿದೆ ಎಂದು ತಿಳಿದು ನನಗಂತೂ ಸಂತೋಷವಾಗಿತ್ತು. ಏನಿಲ್ಲವೆಂದರೂ ಹೊಳೆಯಲ್ಲಿ ಸಾಗುವ ದೋಣಿಗಳನ್ನು ನೋಡಿಕೊಂಡಿರಬಹುದು ಎಂದು ಉಮೇದಿನಲ್ಲಿದ್ದೆ.

ಹೌರಾ ಸ್ಟೇಷನ್ನಿನಲ್ಲಿ ನಾನು ಮತ್ತು ಬಾನು ಇಳಿದ ಕೂಡಲೆ ಕುಮಾರಪ್ಪ ಬಂದವರೇ ಕೈಹಿಡಿದುಕೊಂಡರು. ನಾನು ಇದನ್ನು ನಿರೀಕ್ಷಿಸಿರಲಿಲ್ಲ. ಕನ್ನಡಿಗರನ್ನು ಕಾಣಲು ಅವರಿಗಿದ್ದ ಕಾತರವೂ ಅವರ ಸಹಜ ಸಜ್ಜನಿಕೆಯ ಪರಿಣಾಮವೂ ತಿಳಿಯದು. ನಮಗಂತೂ ಅವರನ್ನು ಕಂಡ ಕೂಡಲೆ, ಹೊಸ ಪ್ರದೇಶದಲ್ಲಿರುವ ಸಹಜ ಅಪರಿಚಿತತೆಯ ಅಳುಕು ಅಲ್ಲೇ ಬಾಜು ಹರಿಯುತ್ತಿದ್ದ ಹೂಗ್ಲಿ ಹೊಳೆಯಲ್ಲಿ ಕೊಚ್ಚಿಹೋಯಿತು.

ಕೊಲ್ಕತ್ತೆಗೆ ಹೋಗಿಬರುವ ಬಹುತೇಕ ಕನ್ನಡ ಲೇಖಕರು-ಕಲಾವಿದರು, ಅಲ್ಲಿನ ಪ್ರಸಿದ್ಧ ವಿಕ್ಟೋರಿಯಾ ಮೆಮೋರಿಯಲ್ ನೋಡದಿದ್ದರೂ, ಅಲ್ಲಿರುವ ಕುಮಾರಪ್ಪ ಅವರನ್ನು ಕಂಡೇ ಕಾಣುತ್ತಾರೆ ಎನ್ನಬಹುದು. ನಿಜ ಹೇಳಬೇಕೆಂದರೆ, ಕನ್ನಡ ಲೇಖಕರು ಬರುವ ಸುಳಿವನ್ನು ಹೇಗೊ ಕಂಡುಹಿಡಿದು, ಕುಮಾರಪ್ಪನವರೇ ಬಂದು ಅವರನ್ನು ಹಿಡಿದುಹಾಕುತ್ತಾರೆ. ಅವರು ಕೊಲ್ಕತ್ತೆಯನ್ನು ಕನ್ನಡಿಗರಿಗೆ ತೋರಿಸುವ ಕಾಯಕಕ್ಕೆ ತಮ್ಮನ್ನು ಸ್ವಯಂ ನೇಮಕ ಮಾಡಿಕೊಂಡಂತೆ ತೋರುತ್ತದೆ. ಅಧಿಕಾರಿಯಾಗಿರುವ ತಾನು ಹೀಗೆ ಮಾಡಬಹುದೇ ಎಂಬ ಬಗ್ಗೆ ಅವರಿಗೆ ಸಂಕೋಚವೇನಿಲ್ಲ. ಪಟಪಟ ಅರಳು ಹುರಿದಂತೆ ಮಾತಾಡುವ, ತಮಗೆ ತಿಳಿದದ್ದನ್ನೆಲ್ಲ ಸುರಿದುಬಿಡುವ, ಸ್ವಾರಸ್ಯಕರವಾದ ನೂರಾರು ಪ್ರಸಂಗಗಳನ್ನು ಹಂಚಿಕೊಳ್ಳುವ ಕುಮಾರಪ್ಪನವರು ಒಬ್ಬ ಅಪೂರ್ವ ಮಾರ್ಗದರ್ಶಿ. ಈ 'ಕುಮಾರಕೃಪೆ'ಗೆ ಒಳಗಾದವರ ಪಟ್ಟಿ ನಿಡಿದಾಗಿದೆ. ಜಿ. ಎಸ್. ಶಿವರುದ್ರಪ್ಪ, ಚಿದಾನಂದಮೂರ್ತಿ, ಮಹದೇವ ಬಣಕಾರ, ಎಸ್. ಎಲ್. ಭೈರಪ್ಪ, ಶ್ರೀನಿವಾಸ ಕಪ್ಪಣ್ಣ, ಪ್ರಭುಶಂಕರ, ಪೀರ್ ಬಾಷಾ, ಸುಧಾಮೂರ್ತಿ, ಶೂದ್ರ ಶ್ರೀನಿವಾಸ, ವಿಕ್ರಮ ವಿಸಾಜಿ, ರಾಘವೇಂದ್ರ ಖಾಸನೀಸ, ಲಕ್ಷ್ಮೀನಾರಾಯಣ ಭಟ್ಟ, ಶಶಿಕಲಾ ವಸ್ತ್ರದ, ಚಂದ್ರಶೇಖರ ತಾಳ್ಯ, ಚಂದ್ರಶೇಖರ ಕಂಬಾರ, ರಾಘವೇಂದ್ರ ಪಾಟೀಲ – ಹೀಗೆ. (ಬಂಗಾಳ ಪ್ರವಾಸ ಕಥನ ಬರೆದಿರುವ ಎಚ್. ಎಸ್. ರಾಘವೇಂದ್ರರಾವ್ ಹೇಗೊ ಅವರಿಂದ ತಪ್ಪಿಸಿಕೊಂಡಂತಿದೆ.) ನಾವಿದ್ದಷ್ಟು ದಿನ, ಬಂಗಾಳವನ್ನು ಸಾಂಸ್ಕೃತಿಕವಾಗಿ ನೋಡಲು ಬೇಕಾದ ನೋಟಗಳನ್ನು ಅವರು ನಮಗೊದಗಿಸಿದರು.

**ಪ್ರೊ|| ರಹಮತ್ ತರೀಕೆರೆ**

ಕುಮಾರಪ್ಪನವರ ವಿಶೇಷತೆಯೆಂದರೆ, ಬಂಗಾಳ ಸಂಸ್ಕೃತಿಯಲ್ಲಿ ಅಡಗಿರುವ ಕರ್ನಾಟಕವನ್ನು ಕಾಣಿಸಲು ಮಾಡುವ ಯತ್ನ. ಇದರಲ್ಲಿ ಕರ್ನಾಟಕದ ಉಲ್ಲೇಖವಿರುವ ಪುಸ್ತಕವಿರಬಹುದು, ಟಿಪ್ಪು ಸುಲ್ತಾನ ಹಾಗೂ ಮೈಸೂರೊಡೆಯರ ಚರಿತ್ರೆಯಿರಬಹುದು, ಕರ್ನಾಟಕದ ಜತೆ ಲಗತ್ತಿರುವ ಕಟ್ಟಡ, ಸಂಸ್ಥೆ ಅಥವಾ ವ್ಯಕ್ತಿಗಳಿರಬಹುದು. ಸಂಶೋಧನೆಯಲ್ಲಿ ಆಸಕ್ತಿಯಿರುವ ನನಗಿದು ಬಹಳ ಪ್ರಯೋಜನವಾಯಿತು. ಬಂಗಾಳದಲ್ಲಿ ಸುಮಾರು ೮೦೦ರಷ್ಟು ಕನ್ನಡಿಗರಿದ್ದಾರಂತೆ. ಮೊದಲಿಗೆ ಕುಮಾರಪ್ಪ ಕೊಲ್ಕತ್ತೆಯ ಮೈಸೂರು ಅಸೋಸಿಯೇಶನ್ನಿಗೆ ನಮ್ಮನ್ನು ಕರೆದೊಯ್ದರು. ಅಲ್ಲಿ ಸೇರಿದ್ದ ಕನ್ನಡಿಗರ ಜತೆ ನಾನು ಮಾತುಕತೆಯಾಡಿದೆ. ಹೆಚ್ಚಿನವರು ಮೂರ್ನಾಲ್ಕು ವರ್ಷವಿದ್ದು ವರ್ಗಾವಣೆ ಪಡೆದು ಮರಳಲಿರುವ ಬ್ಯಾಂಕ್ ಅಧಿಕಾರಿಗಳು; ಮತ್ತೆ ಕೆಲವರು ವ್ಯಾಪಾರಿಗಳು; ಯಾರೂ ಬಂಗಾಳದಲ್ಲೇ ಬೇರುಬಿಡಲು ಬಯಸದವರು. ಆದರೆ ಇನ್ನು ಕೆಲವರು ಬಹುಕಾಲದಿಂದ ಬಂಗಾಳದಲ್ಲೇ ನೆಲೆಸಿ ಬೇರು ತಳೆದವರು. ಒಮ್ಮೆ ಕರ್ನಾಟಕಕ್ಕೆ ವಾಸಿಸಲು ಹೋಗಿ, ಆಗದೆ ಮರಳಿ ಕೊಲ್ಕತ್ತೆಗೆ ಬಂದವರೂ ಅವರಲ್ಲುಂಟು. ಅವರಿಗೆಲ್ಲ ಬಂಗಾಳಿ ಚೆನ್ನಾಗಿ ಬರುತ್ತದೆ. ಆದರೆ ಅವರು ಎರಡು ಪ್ರಾಂತ್ಯಗಳ ಸಾಂಸ್ಕೃತಿಕ ಕೊಡುಕೊಳೆಯ ಕೊಂಡಿಯಾಗಲು ಶಕ್ತರಲ್ಲ. ತಮ್ಮ ಪಾಡಿಗೆ ತಾವು ಬದುಕಬಯಸುವವರು.

ಈ ಹಿನ್ನೆಲೆಯಲ್ಲಿ ಕುಮಾರಪ್ಪ ವಹಿಸಿರುವ ಪಾತ್ರವನ್ನು ಅರ್ಥಮಾಡಿಕೊಳ್ಳಬೇಕು. ಅವರು ಕನ್ನಡಕ್ಕೆ ಬೇಕಾದ್ದನ್ನು ಬಂಗಾಳಿಯಿಂದಲೂ ಬಂಗಾಳಿಗಳಿಗೆ ಬೇಕಾದ್ದನ್ನು ಕನ್ನಡದಿಂದಲೂ ಅಂಗ್ರೇಜಿಯ ಹಂಗಿಲ್ಲದೆ ನೇರ ಹಾಯಿಸುತ್ತಿರುವ ಕೆಲಸದಲ್ಲಿ ತೊಡಗಿಕೊಂಡವರು. ಕನ್ನಡಕ್ಕೆ ಭಾರತೀಯ ಭಾಷೆಗಳ ಮೂಲಕ ಸಾಕಷ್ಟು ಸಾಹಿತ್ಯ ಮತ್ತು ಚಿಂತನೆ ಬಂದಿದೆ, ಬರುತ್ತಿದೆ. ಆದರೆ ಹೆಚ್ಚಿನದು ಹಿಂದಿ ಇಲ್ಲವೇ ಅಂಗ್ರೇಜಿ ಭಾಷೆಯ ಮಧ್ಯಸ್ಥಿಕೆಯ ಮೂಲಕ ಬಂದಿದೆ. ಆದರೆ ಅಂಗ್ರೇಜಿ ಮೂಲಕ ಭಾರತೀಯ ಭಾಷೆಯೊಂದರ ಸಾಹಿತ್ಯ ಇನ್ನೊಂದು ಭಾರತೀಯ ಭಾಷೆಗೆ ಹೋದರೆ, ಅದರ ಸಾಂಸ್ಕೃತಿಕ ಸತ್ವ ಹೇಗೋ ಊನಗೊಳ್ಳುತ್ತದೆ. ಆದರೆ ಬಂಗಾಳಿಯಿಂದ ಕನ್ನಡಕ್ಕೆ ನೇರ ಅನುವಾದದಲ್ಲಿ ಕುಮಾರಪ್ಪ ಮೊದಲಿಗರಲ್ಲ. ಈ ಕೆಲಸಕ್ಕೆ ಒಂದು ಶತಮಾನದ ಚರಿತ್ರೆಯಿದೆ. ಮೊದಲಿಗೆ ಬಂಗಾಳಿಯಿಂದ ನೇರ ಅನುವಾದ ಆರಂಭಿಸಿದವರು ಬಿ. ವೆಂಕಟಾಚಾರ್ಯರು; ಅವರು ಬಂಕಿಮಚಂದ್ರರ


ಕುಮಾರಪ್ಪ ಮತ್ತು ಕೊಲ್ಕತ್ತೆಯ ಕನ್ನಡಿಗರು

'ಆನಂದಮಠ' ಕಾದಂಬರಿಯನ್ನು ಕನ್ನಡಕ್ಕೆ ತಂದರು. (ಆಚಾರ್ಯರು ಬಂಗಾಳದ ಸುಧಾರಣಾವಾದಿ ಚಿಂತಕ ಈಶ್ವರಚಂದ್ರ ವಿದ್ಯಾಸಾಗರ ಅವರಿಂದ ಬಂಗಾಳಿ ಕಲಿತವರಂತೆ). ನಂತರದ ಹೆಸರು ಶರಚ್ಚಂದ್ರ ಚಟರ್ಜಿಯವರ ಕಾದಂಬರಿಗಳನ್ನು ಕನ್ನಡಕ್ಕೆ ತಂದ ಕೂಡಲಿ ಚಿದಂಬರಂ ಅವರದು. ಶರಚ್ಚಂದ್ರರು ತಮ್ಮ ಕಾದಂಬರಿಯ ಒಂದು ಹಸ್ತಪ್ರತಿಯನ್ನು ಕರ್ನಾಟಕಕ್ಕೆ ಕಳಿಸಿಕೊಟ್ಟು ಅದು ಬಂಗಾಳಿ ಮೂಲದ ಜತೆಗೇ ಕನ್ನಡದಲ್ಲೂ ಪ್ರಕಟವಾಗುವ ವ್ಯವಸ್ಥೆ ಇಟ್ಟುಕೊಂಡಿದ್ದರಂತೆ. ಮತ್ತೊಂದು ಹೆಸರು ಬಹುಶಃ ಅಹೋಬಲ ಶಂಕರರದು. ಟಾಗೂರರ ಕಾದಂಬರಿಗಳನ್ನು ತಂದ ಸಾವಿತ್ರಮ್ಮನವರಿಗೆ ಬಂಗಾಳಿ ಬರುತ್ತಿತ್ತೊ ಇಲ್ಲವೊ ತಿಳಿಯದು. ಒಟ್ಟಿನಲ್ಲಿ ಈ ನೇರ ಅನುವಾದ ಪರಂಪರೆ ಒಂದು ಕಾಲಘಟ್ಟದ ನಂತರ ನಿಂತಿತು. ಕುಮಾರಪ್ಪ ಬಂಗಾಳಕ್ಕೆ ಹೋದ ಬಳಿಕ ಅದು ಮತ್ತೆ ಆರಂಭವಾಯಿತು. ಹೂಗ್ಲಿ ಹೊಳೆಯ ನೀರು ಮತ್ತೆ ಕಾವೇರಿಯನ್ನು ಕೂಡತೊಡಗಿತು. ಬಹುಶಃ ಬಂಗಾಳದಲ್ಲಿದ್ದುಕೊಂಡು ಕನ್ನಡಿಸಿದವರು ಕುಮಾರಪ್ಪ ಒಬ್ಬರೇ ಎಂದು ಕಾಣುತ್ತದೆ.

ಕುಮಾರಪ್ಪ ಈಗಾಗಲೇ ೨೫ರಷ್ಟು ಕೃತಿಗಳನ್ನು ಕನ್ನಡಿಸಿದ್ದಾರೆ. ಅವುಗಳಲ್ಲಿ ಧೀಮಂತ ಚಿಂತಕ ದೇವಿಪ್ರಸಾದ ಚಟ್ಟೋಪಾಧ್ಯಾಯರ ಕೃತಿಗಳಿವೆ; ಮಹಾಶ್ವೇತಾ ದೇವಿ ಹಾಗೂ ಆಶಾಪೂರ್ಣ ದೇವಿ ಅವರ ಕಾದಂಬರಿಗಳಿವೆ; ರಾಮಕೃಷ್ಣ ಪರಮಹಂಸರ ಶಿಷ್ಯರಲ್ಲೊಬ್ಬರಾದ ಸ್ವಾಮಿ ಅಭೇದಾನಂದರು ತಮ್ಮ ಗುರುಗಳನ್ನು ಕುರಿತು ಬರೆದಿರುವ ಜೀವನಚರಿತ್ರೆಯಿದೆ; ಶರಚ್ಚಂದ್ರ ಚಟರ್ಜಿಯವರು ಮಕ್ಕಳಿಗೆಂದು ಬರೆದ ಕತೆಗಳಿವೆ. ನನಗೆ ಕುತೂಹಲ ಹುಟ್ಟಿಸುವುದು ಬಂಗಾಳದ ಸಾಮಾನ್ಯ ಮಹಿಳೆಯರು ಬರೆದುಕೊಂಡ ಆತ್ಮಕಥೆಗಳ ಅನುವಾದ. ಉದಾಹರಣೆಗೆ, ಸುಷ್ಮಿತಾ ಬಂದೋಪಾಧ್ಯಾಯ ಅವರ 'ಕಾಬೂಲಿವಾಲಾನ ಬಂಗಾಳಿ ಹೆಂಡತಿ' ಇಂತಹುದು. ಬಂಗಾಳಿ ಹುಡುಗಿಯಾದ ಸುಷ್ಮಿತಾ ಆಫ್‌ಘನ್ ತರುಣನನ್ನು ಮದುವೆಯಾಗಿ ಆಫ್‌ಘಾನಿಸ್ಥಾನದಲ್ಲಿ ಪಟ್ಟಪಾಡನ್ನು ಕುರಿತ ಕಥನವಿದು. ಇನ್ನೊಂದು ಬೇಬಿ ಹಾಲ್ದಾರ್ ಅವರ 'ನೋವು ತುಂಬಿದ ಬದುಕು'. ಇದು ಗಂಡನ ಹಿಂಸೆ ತಾಳಲಾರದೆ ಎಳೆಯ ಮಕ್ಕಳನ್ನು ಕಟ್ಟಿಕೊಂಡು ದೆಹಲಿಗೆ ಹೋದ ಹುಡುಗಿಯೊಬ್ಬಳು, ಅಲ್ಲಿನ ಸ್ಲಮ್ಮುಗಳಲ್ಲಿದ್ದು ಬದುಕನ್ನು ಕಟ್ಟಿಕೊಳ್ಳಲು ಮಾಡಿದ ಹೋರಾಟದ ಕತೆ.

ಆದರೆ ಕುಮಾರಪ್ಪ ಬಂಗಾಳಿಯಿಂದ ಕನ್ನಡಕ್ಕೆ ತಂದಷ್ಟು ಕನ್ನಡದಿಂದ ಬಂಗಾಳಿಗೆ ಹಾಯಿಸಿಲ್ಲ. ಕನ್ನಡದ ಕತೆ ಕವಿತೆಗಳ ಅನುವಾದಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿರುವುದುಂಟು. ಇದರಲ್ಲಿ ಅವರು ಅನುವಾದಿಸಿರುವ ಕನ್ನಡ ದಲಿತ ಕಾವ್ಯ ಕೊಂಚ ಹೆಸರು ಪಡೆದಿದೆ. ಅದರಲ್ಲೂ ಬಂಗಾಳಿ ದಲಿತ ಸಾಹಿತ್ಯ ಚಳುವಳಿಯ ಕಾರ್ಯಕ್ರಮಗಳಲ್ಲಿ ಸಿದ್ದಲಿಂಗಯ್ಯನವರ ಕವನವನ್ನು ''ದಲಿತರ್ ಆಸ್‌ಚೆನ್ ರಾಸ್ತಾದಾವ್, ದಲಿತರ್ ಹಾತೆ ರಾಜ್ಯಾದಾವ್ – ದಲಿತರು ಬಂದರು ದಾರಿಬಿಡಿ, ದಲಿತರ ಕೈಗೆ ರಾಜ್ಯ ಕೊಡಿ'' ಹಾಡುತ್ತಾರೆಂದು ನಾನು ತಿಳಿದುಕೊಂಡೆ. ಕನ್ನಡದಿಂದ ಬಂಗಾಳಿಗೆ ಅನುವಾದಿಸುವ ಪ್ರಮಾಣ ಯಾಕೆ ಕಡಿಮೆಯಾಗಿದೆ ಎಂದು ನಾನು ಕೇಳಿದೆ. ''ಬಂಗಾಳಿ ಅನುವಾದಗಳಿಗೆ ಪ್ರಕಾಶಕರು ಸಿಕ್ಕೋದು ಕಷ್ಟ. ಜತೆಗೆ ನನಗೆ ಬಂಗಾಳಿ ಓದಲು ಬರುತ್ತೆ, ಮಾತಾಡ್ತೀನಿ. ಕೇಳಿಸಿಕೊಳ್ತೀನಿ. ಆದರೆ ಬರೆಯೋಕೆ ಅಷ್ಟು ಅನುಭವವಿಲ್ಲ. ಈಗೀಗ ಅದನ್ನೂ ರೂಢಿಸಿಕೊಳ್ತಿದೀನಿ'' ಎಂದು ಉತ್ತರಿಸಿದರು. ಕುಮಾರಪ್ಪ ಸದ್ಯ ರಾಘವೇಂದ್ರ ಪಾಟೀಲರ 'ತೇರು' ಕಾದಂಬರಿಯನ್ನು ಬಂಗಾಳಿಗೆ ಅನುವಾದಿಸುತ್ತಿದ್ದಾರೆ. ಅವರಿಗೆ ಆಲನಹಳ್ಳಿಯವರ 'ಕಾಡು' ಕಾದಂಬರಿಯನ್ನೂ ಬಂಗಾಳದಲ್ಲಿ ಜನಪ್ರಿಯರಾಗಿರುವ ಅನಂತಮೂರ್ತಿ ಅವರ ಲೇಖನಗಳನ್ನೂ ಅನುವಾದಿಸುವ ಆಸೆಯಿದೆ. ಇಡೀ ಕರ್ನಾಟಕವನ್ನು ಸಾಂಸ್ಕೃತಿಕವಾಗಿ ಪರಿಚಯಿಸುವ ಒಂದು ಕೃತಿಯನ್ನು ಬಂಗಾಳಿಯಲ್ಲಿ ಬರೆಯುವ ಆಸೆಯೂ ಇದೆ.

ಬಂಗಾಳಿಯಲ್ಲಿ ಕನ್ನಡದ ಯಾವ ಲೇಖಕರು ಜನಪ್ರಿಯ ಎಂದು ಕೇಳಿದೆ. ಅನಂತಮೂರ್ತಿ, ಬಿ. ವಿ. ಕಾರಂತ, ಗಿರೀಶ್ ಕಾರ್ನಾಡ್, ಈಗೀಗ ಭೈರಪ್ಪನವರು! ಜವಾಬು ಅನಿರೀಕ್ಷಿತವಾಗಿರಲಿಲ್ಲ. ಅಂದರೆ, ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ, ಪುತಿನ, ನರಸಿಂಹಸ್ವಾಮಿ, ಲಂಕೇಶ್, ದೇವನೂರು, ತೇಜಸ್ವಿ ಇವರು ಬಂಗಾಳಿಯಲ್ಲಿ (ಹಿಂದಿಯಲ್ಲೂ) ಜನಪ್ರಿಯರಿರುವುದು ಇರಲಿ, ಪರಿಚಿತರೇ ಅಲ್ಲ. ಇದೊಂದು ವಿಚಿತ್ರ ಪರಿಸ್ಥಿತಿ. ಈ ಅನುವಾದದ ರಾಜಕಾರಣದಲ್ಲಿ ಇಂಗ್ಲಿಷಿಗೆ ಹೋಗುವುದು ಎಲ್ಲ ಲೇಖಕರಿಗೂ ಸಾಧ್ಯವಾಗಿಲ್ಲ. ಆದರೆ ನಮ್ಮ ಎಲ್ಲ ಪ್ರತಿಭಾವಂತ ಲೇಖಕರು ಬೇರೆ ಭಾರತೀಯ ಭಾಷೆಗಳಲ್ಲಿ ಸಮಾನ ಪ್ರಾತಿನಿಧ್ಯ ಪಡೆಯುವುದು ಹೇಗೆ ಮತ್ತು ಯಾವಾಗ ಎಂಬ ಪ್ರಶ್ನೆಯಿದೆ. ಮರಾಠಿಗೆ ಕನ್ನಡ ಕೃತಿಗಳನ್ನು ಅನುವಾದಿಸುವ ಒಬ್ಬರಿಗೆ ಒಮ್ಮೆ ನಾನು ಕೇಳಿದೆ, ''ಯಾಕೆ ನಿರ್ದಿಷ್ಟ, ಲೇಖಕರ ಕೃತಿಗಳನ್ನೇ ಮರಾಠಿಗರಿಗೆ ಪರಿಚಯಿಸುತ್ತೀರಿ'' ಎಂದು. ಅವರ ಪುಸ್ತಕಗಳಿಗೆ ಇಲ್ಲಿ ಡಿಮಾಂಡ್ ಇದೆ ಎಂದು ಬದಲು ಬಂದಿತು. ಮಾರುಕಟ್ಟೆಯ ಮಾಯಾಜಾಲದಲ್ಲಿ ಎಲ್ಲವೂ ಸಿಲುಕಿಕೊಂಡಂತಿದೆ.

ಕುಮಾರಪ್ಪ ಬಂಗಾಳದಲ್ಲಿದ್ದು ಮಾಡುತ್ತಿರುವ ಕೆಲಸಗಳನ್ನು ನೋಡುವಾಗ, ಎಲ್ಲ ರಾಜ್ಯಗಳಲ್ಲೂ ಇಂತಹ ಸಾಂಸ್ಕೃತಿಕ ಕೊಂಡಿಗಳಿದ್ದರೆ ಎಷ್ಟು ಚೆನ್ನ ಅನಿಸಿತು. ನಮಗೆ ಮರಾಠಿ, ಕೊಂಕಣಿ, ಮಲೆಯಾಳ, ತುಳು, ತೆಲುಗುಗಳಲ್ಲಿ ಸಾಂಸ್ಕೃತಿಕ ರಾಯಭಾರಿ ಎನ್ನಬಹುದಾದವರು ಇದ್ದಾರೆ. ಗುಜರಾತಿ, ಒಡಿಯಾ, ಅಸ್ಸಾಮಿ, ಕಾಶ್ಮೀರಿಗಳಲ್ಲಿ ಇದ್ದಂತಿಲ್ಲ. ಅಸ್ಸಾಮಿ ಭಾಷೆಯಲ್ಲಿ ದೊಡ್ಡ ವಿದ್ವತ್ತುಳ್ಳ, ಗೌಹಾತಿಯಲ್ಲಿ ಕಾಲು ಶತಮಾನ ಕಾಲ ವಾಸವಿದ್ದ ಎಂ. ಎಸ್. ಪ್ರಭಾಕರ್ (ಕಾಮರೂಪಿ) ಅವರಿದ್ದಾರೆ. ಕನ್ನಡಕ್ಕೆ ಮಾತ್ರವಲ್ಲ, ನಮ್ಮೆಲ್ಲ ರಾಜ್ಯಗಳಲ್ಲಿ ಎಲ್ಲ ಭಾರತೀಯ ಭಾಷೆಗಳಲ್ಲಿ ಪರಿಣತಿ ಪಡೆದ ಒಬ್ಬೊಬ್ಬರು ಇರುವುದು ಅಗತ್ಯ. ಅದರಲ್ಲೂ ಆಯಾ ರಾಜ್ಯಗಳಲ್ಲೇ ಇದ್ದು ಅಲ್ಲಿನ ಭಾಷೆ ಕಲಿತು ಕನ್ನಡಕ್ಕೆ ಕೊಡುವವರು ಇರುವುದು ಬಹಳ ಅಗತ್ಯ. ಬಹಳ ಹಿಂದೆ ವಿಷ್ಣುಪಾದ ಭಟ್ಟಾಚಾರ್ಯ ಎಂಬುವರು ಕನ್ನಡ ಕಲಿತು ಕಾರಂತರ 'ಮರಳಿ ಮಣ್ಣಿಗೆ'ಯನ್ನೂ ಚದುರಂಗರ 'ವೈಶಾಖ'ವನ್ನೂ ಬಂಗಾಳಿಸಿದರು. ಈಗ ಈ ಕೆಲಸಕ್ಕೆ ಯಾರೂ ಇದ್ದಂತಿಲ್ಲ.

ವಿಶೇಷವೆಂದರೆ, ಕುಮಾರಪ್ಪನವರು ಬಂಗಾಳಿ ಲೇಖಕರ ಜತೆ ಸಂಪರ್ಕ ಇರಿಸಿಕೊಂಡಿರುವುದು. ನಾನು ಕೊಲ್ಕತ್ತೆಯಲ್ಲಿದ್ದಾಗ, ಬಂಗಾಳದ ಪ್ರಸಿದ್ಧ ನಾಟಕಕಾರ ರುದ್ರಪ್ರತಾಪ ಸೇನರಿಗೆ ೭೫ ವರ್ಷ ತುಂಬಿ, ಒಂದು ಸನ್ಮಾನ ಕಾರ್ಯಕ್ರಮ ಏರ್ಪಟ್ಟಿತ್ತು. 'ಉರಿವ ಬಂಗಾಳ' ಎಂಬ ಪ್ರವಾಸ ಕಥನ ಬರೆದಿರುವ ಪೀರ್ ಬಾಶಾ ಸೇನರನ್ನು ಸಂದರ್ಶನ ಮಾಡಿದ್ದರು. 'ಆಂಗ್ರಿ ಓಲ್ಡ್‌ಮ್ಯಾನ್' ಎಂದು ಪ್ರಸಿದ್ಧರಾದ ರುದ್ರಪ್ರತಾಪ ಸೇನರು ತೀಕ್ಷ್ಣ ಚಿಂತನೆಯ ಲೇಖಕರು. ಅವರಲ್ಲಿ ಮಾತಾಡಬೇಕು ಅನಿಸಿ ಕುಮಾರಪ್ಪನವರಿಗೆ ಕೇಳಿದೆ. ಕುಮಾರಪ್ಪ ಅವರ ಫೋನು ನಂಬರನ್ನು ಕಂಠಪಾಠ ಮಾಡಿದ ಪದ್ಯದಂತೆ ಹೇಳಿದರು. ಮಾತ್ರವಲ್ಲ, ನಮ್ಮನ್ನು ಆ ಕಾರ್ಯಕ್ರಮಕ್ಕೆ ಕರೆದುಕೊಂಡು ಹೋದರು. ಅಲ್ಲಿ ಅನೇಕ ಬಂಗಾಳಿ ಲೇಖಕರನ್ನು ಪರಿಚಯಿಸಿದರು. ಅವರು ಅಲ್ಲಿ ಇಟ್ಟುಕೊಂಡಿರುವ ಆಪ್ತ ಸಂಬಂಧ ಕಂಡು ಸೋಜಿಗವಾಯಿತು.


ಕುಮಾರಪ್ಪ ಮತ್ತು ರಹಮತ್ ತರೀಕೆರೆ–ಹಿಂಭಾಗದಲ್ಲಿ ನ್ಯಾಶನಲ್ ಲೈಬ್ರರಿ



ರಹಮತ್ ತರೀಕೆರೆ-ಹಿಂಬದಿಯಲ್ಲಿ ಟ್ಯಾಗೂರರ ಪ್ರತಿಮೆ, ನ್ಯಾಶನಲ್ ಲೈಬ್ರರಿ

ಕುಮಾರಪ್ಪ ನಮ್ಮನ್ನು ಕೊಲ್ಕತ್ತೆಯ ಅನೇಕ ಗ್ರಂಥಾಲಯಗಳಿಗೆ, ಬುಕ್‌ಫೇರಿಗೆ, ಬಂಗಾಳಿ ಬಿರಿಯಾನಿ ಸಿಗುವ 'ಅನಾರ್ಕಲಿ'ಗೆ, ರಬೀಂದ್ರ ಸದನದಲ್ಲಿ ನಡೆಯುವ ನಾಟಕಗಳಿಗೆ ಕರೆದೊಯ್ದರು. ಸಿದ್ದಯ್ಯ ಪುರಾಣಿಕರಿಗೆ ಪ್ರಶಸ್ತಿಕೊಟ್ಟ ಭಾರತೀಯ ಭಾಷಾ ಪರಿಷತ್ತಿನ ಭೇಟಿ ಮಾಡಿಸಿದರು. ನ್ಯಾಶನಲ್ ಲೈಬ್ರರಿಯನ್ನು ಇಡಿಯಾಗಿ ತೋರಿಸಿದರು. ನಾನು ಗಮನಿಸುತ್ತಿದ್ದೆ. ಕುಮಾರಪ್ಪ ಅಳಿಲಿನಂತೆ ಹಲವಾರು ಮಹಡಿಗಳಿರುವ ಲೈಬ್ರರಿಯಲ್ಲಿ ಕೆಳಕ್ಕೂ ಮೇಲಕ್ಕೂ ಓಡಾಡುತ್ತಿದ್ದರು. ಬಂದ ಓದುಗರಿಗೆ ಪುಸ್ತಕ ಹುಡುಕಲು ನೆರವಾಗುತ್ತಿದ್ದರು. ಈ ಲೈಬ್ರರಿಯಲ್ಲಿರುವ ಅನೇಕ ಪುಸ್ತಕಗಳಿಗೆ ನೂರರಿಂದ ಇನ್ನೂರು ವರ್ಷ ಆಯಸ್ಸು. ಅವುಗಳಲ್ಲಿ ಕರ್ನಾಟಕ ಕುರಿತು ಬ್ರಿಟಿಷ್ ಅಧಿಕಾರಿಗಳು ಲೇಖಕರು ಮಾಡಿರುವ ದಾಖಲೆ ಮತ್ತು ಟಿಪ್ಪಣಿಗಳಿವೆ. ಕುಮಾರಪ್ಪ ಕೊಲ್ಕತ್ತೆಗೆ ಹೋದ ಪ್ರತಿಯೊಬ್ಬ ಕನ್ನಡಿಗರನ್ನು ಎಳೆದುಕೊಂಡು ಹೋಗಿ, ಆ ಪುಸ್ತಕಗಳ ಧೂಳು ಕೊಡವಿ, ಅವನ್ನೆಲ್ಲ ತೋರಿಸುತ್ತಾರೆ; ನ್ಯಾಶನಲ್ ಲೈಬ್ರರಿಯ ಆರ್ಕೈವ್ಸಿಗೆ ಕರೆದೊಯ್ಯುತ್ತಾರೆ; ಅಲ್ಲಿ ಕರ್ನಾಟಕದ ಉಲ್ಲೇಖಗಳಿರುವ ಶತಮಾನಗಳ ಹಿಂದಿನ ಹಸ್ತಪ್ರತಿಗಳನ್ನು ನಕ್ಷೆಗಳನ್ನು ತೋರಿಸುತ್ತಾರೆ; ಅವರ ಜತೆ ನ್ಯಾಶನಲ್ ಲೈಬ್ರರಿಯಲ್ಲಿ ಓದಲು ಅಲ್ಲ, ಬರೀ ಸುತ್ತಲು ಒಂದು ದಿನ ಸಾಲದು. ಅವರ ಪ್ರಕಾರ ಕನ್ನಡದಲ್ಲಿ ಯಾವುದೇ ಸಂಶೋಧನೆ ಮಾಡುವವರು, ಒಮ್ಮೆಯಾದರೂ ಈ ಲೈಬ್ರರಿಗೆ ಬಂದು ಹೋಗಬೇಕು.

ಕಂಡಕಂಡವರಿಗೆಲ್ಲ ಈ ರೀತಿಯಲ್ಲಿ ಒದಗುವುದಕ್ಕೆ ತೆತ್ತುಕೊಂಡಿರುವ ಕುಮಾರಪ್ಪನವರಿಗೆ ಕೆಲವು ಕಹಿ ಅನುಭವಗಳಾಗಿವೆ. ಅದೂ ಕನ್ನಡದ ಕೆಲವು ಲೇಖಕರಿಂದ. ಮಾತಾಡುತ್ತ ಇದು ನನಗೆ ಸೂಕ್ಷ್ಮವಾಗಿ ತಿಳಿಯಿತು. ಕುಮಾರಪ್ಪನವರ ಇಂತಹ ಉಪದ್ವ್ಯಾಪಗಳಿಗೆ ನೈತಿಕ ಬೆಂಬಲದಂತಿರುವ ಮಡದಿ ಕೋಮಲ ಅವರು ಗಂಡ ಮನೆಗೆ ಕರೆತರುವ ಕನ್ನಡಿಗರಿಗೆ ಪ್ರೀತಿಯಿಂದ ಅಡುಗೆ ಮಾಡಿ ಬಡಿಸುತ್ತಾರೆ; ಗಂಡ ಕನ್ನಡಿಗರಿಗೆ ಮಾಡುವ ಸೇವೆ ಬಗ್ಗೆ ಅವರಿಗೂ ಅಭಿಮಾನವಿದೆ; ಆದರೆ ಕುಮಾರಪ್ಪ ದಣಿಯುವ ಪರಿಗೆ, ಒಂದು ಮಾತು ಅನಿಸಿಕೊಂಡು ನೋಯುವ ಪರಿಗೆ, ಅವರಲ್ಲಿ ಬೇಸರವೂ ಇದೆ. ಅದನ್ನು ನಮ್ಮ ಜತೆ ತೋಡಿಕೊಂಡರು. ನಾನು ಅವರ ಭಾವನೆಯನ್ನು ಅನುಮೋದಿಸಿದೆ. ಆದರೇನು ಮಾಡುವುದು ? ಕುಮಾರಪ್ಪ ಬದಲಾಗುವುದಿಲ್ಲ. ಅವರಲ್ಲಿ ಕೊಲ್ಕತ್ತೆಯ ಮಳೆನೀರನ್ನೂ ಕೊಳೆನೀರನ್ನೂ ಸಮಾನವಾಗಿ ಸ್ವೀಕರಿಸಿ ಹರಿಯುವ ಹೂಗ್ಲಿಯ ಗುಣವಿದೆ. ನಾವು ಅವರ ಬಗ್ಗೆ ಗುಸುಗುಸು ಮಾತಾಡಿಕೊಳ್ಳುತ್ತಿರುವಾಗಲೇ, ಅವರು ಯಾರಿಗೊ ಜೋರಾದ ದನಿಯಲ್ಲಿ, ಕೊಲ್ಕತ್ತೆಗೆ ಬಂದ ಕೂಡಲೇ ತಮಗೆ ಫೋನು ಮಾಡಬೇಕೆಂದು ತಮ್ಮ ಸೆಲ್ ನಂಬರನ್ನು ಕೊಡುತ್ತಿದ್ದರು.

ಕುಮಾರಪ್ಪ ಒಂದು ದಿನ ನಮ್ಮನ್ನೂ ತಮ್ಮ ಮನೆಗೊಯ್ದು ಒಂದು ಔತಣ ಕೊಟ್ಟರು. ಕೊನೆಯ ದಿನ ಹೂಗ್ಲಿ ನದಿ ಕಡಲನ್ನು ಕೂಡುವ ಗಂಗಾಸಾಗರ ದ್ವೀಪಕ್ಕೆ ನಮ್ಮ ಜತೆ ಬರಬೇಕೆಂದು ಕುಮಾರಪ್ಪ ದಂಪತಿಗಳನ್ನು ಕರೆದೊಯ್ದೆವು. ೨೫ ವರುಷದ ತಮ್ಮ ಬಂಗಾಳದ ಅನುಭವಗಳನ್ನು ಕುಮಾರಪ್ಪ ಕಡಲಿನ ಅಲೆಅಲೆಯಂತೆ ಹೇಳುತ್ತಾ ಹೋದರು. ಬಂಗಾಳದ ಬದುಕಿನಿಂದ ನೂರಾರು ಘಟನೆಗಳನ್ನು ಹೇಳಿ ನಗಿಸಿದರು. ದಯವಿಟ್ಟು ಇದನ್ನೆಲ್ಲ ಬರೀರಿ ಒಂದು ಅದ್ಭುತ ಕಥನವಾಗುತ್ತದೆ ಎಂದೆ. ಆದರೆ ಬಿ. ಜಿ. ಎಲ್. ಸ್ವಾಮಿಯವರ 'ತಮಿಳು ತಲೆಗಳ ನಡುವೆ' ಬರೆಹದಲ್ಲಿರುವ ಎಂತಹುದೂ ಒಂದು ಪೂರ್ವಗ್ರಹೀತ ಕುಮಾರಪ್ಪನವರಲ್ಲೂ ಇದ್ದಂತೆ ತೋರಿತು. ಅವರು ಬಂಗಾಳಿಗಳನ್ನು ಸೋಮಾರಿಗಳು ಎಂದು ಕರೆದರು. ಕೃಷ್ಣಾನಂದ ಕಾಮತರು ೪೦ ವರ್ಷಗಳ ಹಿಂದೆ ಬರೆದ 'ವಂಗದರ್ಶನ'ದಲ್ಲಿ ಕೂಡ ಬಂಗಾಳಿಗಳ ಮೇಲೆ ಇಂತಹವೇ ಟೀಕೆಗಳಿವೆ. ಭಾರತಕ್ಕೆ ಅಷ್ಟೊಂದು ಲೇಖಕರನ್ನೂ ಚಿಂತಕರನ್ನೂ ಸ್ವಾತಂತ್ರ್ಯ ಹೋರಾಟಗಾರರನ್ನೂ ಕಲಾವಿದರನ್ನೂ ಸಿನಿಮಾ ನಿರ್ದೇಶಕರನ್ನೂ ಕೊಟ್ಟಿರುವ ನಾಡನ್ನು ಹೀಗೆ ಕರೆಯಬಹುದೇ ? ನಾನು ಶಂಕಿಸಿದೆ. ಕಾಮತರ ಹೇಳಿಕೆಗಳಲ್ಲಿ ಒಂದು ಶಬ್ದವನ್ನೂ ತೆಗೆದುಹಾಕುವಂತಿಲ್ಲ ಎಂದು ಕುಮಾರಪ್ಪ ಖಂಡಿತ ದನಿಯಲ್ಲಿ ಹೇಳಿದರು. ತಾವು ಕೆಲಸ ಮಾಡುವ ಸಂಸ್ಥೆಯಲ್ಲಿ ಸಂಘಗಳನ್ನು ಕಟ್ಟಿಕೊಂಡು ಮೈಗಳ್ಳರಾಗಿರುವ ಸರ್ಕಾರಿ ನೌಕರರನ್ನು ಕಂಡೊ ಅಥವಾ ತಮ್ಮ ಏರಿಯಾದ ಮಧ್ಯಮವರ್ಗದ ಜನರನ್ನು ಮನಸ್ಸಲ್ಲಿ ಇಟ್ಟುಕೊಂಡೊ ಕುಮಾರಪ್ಪ ಈ ಅಭಿಪ್ರಾಯ ರೂಪಿಸಿಕೊಂಡಿರಬಹುದೇ ? ಅವರ ಆಕ್ಷೇಪವು ಬಂಗಾಳದ ಹಳ್ಳಿಗರಿಗೆ ಅನ್ವಯವಾಗುತ್ತದೆಯೇ ? ಕಾಲು ಶತಮಾನದ ಅನುಭವ ಅವರದು. ನನ್ನದೂ ಕೆಲವೇ ದಿನಗಳ ಓಡಾಟ. ಆದರೂ ಬಂಗಾಳದ ಕೆಲವು ಹಳ್ಳಿಗಳಲ್ಲಿ ಓಡಾಡಿ ಬಂದ ನನಗೆ ಅವರ ಹೇಳಿಕೆಯನ್ನು ಒಪ್ಪಬೇಕು ಎಂದು ಯಾಕೊ ಅನಿಸಲಿಲ್ಲ. ನಮ್ಮ ಊರು, ಜನ, ಭಾಷೆಗಳ ಮಹತ್ವವು ಅದರಿಂದ ದೂರ ಹೋದಾಗಲೇ ಆಗುವುದು. ಆದರೆ ಈ ಅಗಲಿಕೆ ಮತ್ತು ಪರನಾಡಿನಲ್ಲಿ ವಾಸವನ್ನೂ ಕೆಲವರು ಅರ್ಥಪೂರ್ಣ ಮಾಡಬಲ್ಲರು. ಕುಮಾರಪ್ಪ ಅದನ್ನು ಮಾಡಿದ್ದಾರೆ. ಅವರೀಗ ಕೊಲ್ಕತ್ತೆಯಲ್ಲೇ ಸ್ವಂತ ಮನೆ ಮಾಡಿದ್ದಾರೆ. ಬೇರುಬಿಡಲು ಮನೆ ಕಟ್ಟಿಕೊಳ್ಳುವುದು ಮೊದಲನೇ ಉಪಾಯ; ಆದರೆ ಸ್ಥಳೀಯ ಭಾಷೆ ಕಲಿಯದೆ ನಿಜವಾಗಿ ಬೇರುಬಿಡಲಾಗದು. ಬಿಟ್ಟರೂ ಫಲಕೊಡಲಾಗದು. ಕುಮಾರಪ್ಪನವರ ಪ್ರಕಾರ, ಮುಂಬೈನಲ್ಲಿ ಮರಾಠಿ ಕಲಿಯದೆ, ಬೆಂಗಳೂರಲ್ಲಿ ಕನ್ನಡವಿಲ್ಲದೆ ಬದುಕು ತೆಗೆಯಬಹುದು. ಆದರೆ ಚೆನ್ನೈನಲ್ಲಿ ತಮಿಳಿಲ್ಲದೆ, ಕೊಲ್ಕತ್ತೆಯಲ್ಲಿ ಬಂಗಾಳಿಯಿಲ್ಲದೆ ಬದುಕುವುದು ಕಷ್ಟ. 'ಅಪೊನೊ ಜೊನ್' (ನಮ್ಮವರು) ಎನಿಸಿಕೊಳ್ಳುವುದು ಕಷ್ಟ. ಕೊಲ್ಕತ್ತೆಗೆ ಬರುವ ತಮಿಳರಿಗಿಂತ ಕನ್ನಡಿಗರು ಬೇಗನೆ ಬಂಗಾಳಿ ಕಲಿತು ಒಂದಾಗುತ್ತಾರಂತೆ. ಕನ್ನಡಿಗರ ಈ ಹೊಂದಾಣಿಕೆಯ ಗುಣವು ಮಿಥ್ಯೆಯೊ ಸತ್ಯವೊ ತಿಳಿಯದು. ಕುಮಾರಪ್ಪನವರಿಗೆ ಬಂಗಾಳಿ ಕಲಿಯುವ ಹಠ ಹುಟ್ಟಿದ್ದು ಮಾತ್ರ ಒಬ್ಬ ಹೂಮಾರುಗನ ಜತೆ ಹಿಂದಿಯಲ್ಲಿ ಮಾಡಿದ ಜಗಳದಿಂದ. ಜಗಳದ ಕೊನೆಯಲ್ಲಿ ಅವನು "ಈ ಅಬಂಗಾಳಿ ಬೊಡ್ಡಿಮಕ್ಕಳು ನಮ್ಮ ದೇಶಕ್ಕೆ ಬಂದು ನಮ್ಮ ಜತೆಗೇ ಜಗಳ ತೆಗೆಯುತ್ತಾರೆ" ಎಂದು ಕೊಂಕು ನುಡಿದನಂತೆ. ಕೊಲ್ಕತ್ತೆಗೆ ಬಂದ ಮೊದಲಲ್ಲಿ ಕುಮಾರಪ್ಪ ಇಂತಹ ಅನೇಕ ಕಟಕಿಗಳನ್ನು ಕೇಳಿಸಿಕೊಂಡಿದ್ದಾರೆ. ಆದರೀಗ ಅವರು ಚೆನ್ನಾಗಿ ಬಂಗಾಳಿ ಕಲಿತು ಬಂಗಾಳಿಗಳ ಕಣ್ಣಲ್ಲಿ ಅಪೊನ್ ಜೊನ್ ಆಗಿದ್ದಾರೆ. (ಕೋಮಲ, ಗಂಡನಿಗಿಂತ ಚೆನ್ನಾಗಿ ಬಂಗಾಳಿ ಕಲಿತು ಸ್ಥಳೀಕರಾಗಿದ್ದಾರೆ); 'ಅವರ್ತ' ಎಂಬ ಬಂಗಾಳಿ ಪತ್ರಿಕೆಯ ಕರ್ನಾಟಕ ಸಂಚಿಕೆಯನ್ನು ಸಂಪಾದಿಸಿ, ಕರ್ನಾಟಕದ ಬಗ್ಗೆ ಬಂಗಾಳಿಗಳ ಅರಿವು ಹೆಚ್ಚಿಸಿದ್ದಾರೆ. ಆದರೆ ಕನ್ನಡಿಗರಿಗೆ ಉಪಯುಕ್ತವಾಗಲು ಅಥವಾ ಬಂಗಾಳಿಗಳ ಕಣ್ಣಲ್ಲಿ ಇವ ನಮ್ಮವ ಅನಿಸಿಕೊಳ್ಳಲು ಕುಮಾರಪ್ಪ ಬಹಳ ಬೆಲೆ ತೆತ್ತಿದ್ದಾರೆ. ಇದನ್ನು ಅವರ 'ಬೇರುಬಿಡದೇ ಚಿಗುರುವ ಆಸೆ' ಎಂಬ ಬರೆಹವನ್ನು ಓದುತ್ತ ನಾನು ಫೀಲ್ ಮಾಡಿದೆ. ಈ ಬರೆಹದಲ್ಲಿ ಊರನ್ನು ಬಿಟ್ಟು ಕೊಲ್ಕತ್ತೆಗೆ ಹೊರಡುವ ದಿನದ ಅನುಭವವೊಂದು ಹೀಗಿದೆ :

**ಸರ್ಕಾರಿ ನೌಕರರಿಗೆ ಪ್ರಥಮ ದರ್ಜೆ ವಿಮಾನ ಪ್ರಯಾಣ ಭಾಗ್ಯ**




ತಾವು ವಿಮಾನದಲ್ಲಿ ಓಡಾಡಿ.. ಅದ್ರೆ. ನಮ್ಮ ಕೆಲಸ ನಾಳೆ.. ನಾಡಿದ್ದು ಆಗುತ್ತೆ ಅಂತ ನಮಗೆ ರೈಲು ಹತ್ತಿಸೋದನ್ನಾದ್ರೂ ನಿಲ್ಲಿಸಿ ಸಾರ್...?!

"ಹೊರಡುವ ದಿನ ಹತ್ತಿರವಾದಂತೆ ಊರುಕೆರೆಯ ಏರಿಯ ಮೇಲೆ ನಿಂತು ಊರನ್ನು ಕಣ್ತುಂಬ ತುಂಬಿಕೊಳ್ಳುತ್ತೇನೆ. ತುಂಬಿದ ಕೆರೆಯ ಮೇಲಿಂದ ಹಾದು ಬರುವ ತಂಗಾಳಿಯನ್ನು ಎದೆತುಂಬ ಹೀರಿಕೊಳ್ಳುತ್ತೇನೆ. ಮನೆಯ ಅಂಗಳದಲ್ಲಿ ಅಂಗಾತ ಮಲಗಿ ರಾತ್ರಿ ಆಕಾಶದಲ್ಲಿ ಮಿಣಮಿಣನೆ ಮಿರುಗುವ ನಕ್ಷತ್ರಗಳನ್ನು ಮನಸಲ್ಲಿ ಹಿಡಿದಿಟ್ಟುಕೊಳ್ಳುತ್ತೇನೆ. ಹಸಿರು ತುಂಬಿದ ಹೊಲದ ಬದುವಿನ ಮೇಲೆ ನಡೆದು ಹಸಿರು ಹುಲ್ಲಿನ ನವಿರು ಸ್ಪರ್ಶವನ್ನು ಮೈಮನದಲ್ಲಿ ತುಂಬಿಕೊಳ್ಳುತ್ತೇನೆ. ಈ ಗಾಳಿ, ಈ ನೋಟ, ಈ ಹಸಿರು ಹುಲ್ಲಿನ ನವಿರು ಸ್ಪರ್ಶದ ನೆನಪು ಮತ್ತೆ ನಾನು ವಾಪಾಸು ಬರುವವರೆಗೆ ನನ್ನಲ್ಲಿ ಇರಲಿ ಎಂದು ಬಯಸುತ್ತೇನೆ. ಇದೋ ಹೊರಡುವ ದಿನ ಬಂದೇ ಬಿಟ್ಟಿತು. ಕಳಿಸಲು ಬಂದ ಎಲ್ಲರಿಗೂ ಕೈಬೀಸಿ ಬಸ್ಸಿನಲ್ಲಿ ಕುಳಿತರೆ ಸೆರಗಿನಿಂದ ಕಣ್ಣು ಒರೆಸಿಕೊಳ್ಳುತ್ತಿರುವ ಅವ್ವನದೇ ಚಿತ್ರ."

ಜಗತ್ತು ಹಳ್ಳಿಯಂತಾಗಿರುವ ಈ ದಿನಮಾನದಲ್ಲಿ, ದುಡಿಯಲು ಖಂಡಾಂತರಗಳ ಪಯಣವನ್ನು ಈಗಿನ ತಲೆಮಾರು ನಿರ್ಭಾವುಕವಾಗಿ ಮಾಡುತ್ತಿರುವಾಗ, ಕುಮಾರಪ್ಪ ಕೊಂಚ ಭಿನ್ನವಾಗಿ ತೋರುತ್ತಾರೆ. ಇದಕ್ಕೆ ಕಾರಣ, ಅವರಲ್ಲಿರುವ ಹಳ್ಳಿಗತನವೇ ಇರಬೇಕು. ಎಷ್ಟೊ ಸಲ 'ಥತ್ ! ಯಾರಿಗೆ ಬೇಕು ಈ ಪರದೇಸಿ ಜೀವನ' ಎಂದು ಕೆಲಸಕ್ಕೆ ರಾಜಿನಾಮೆ ಒಗೆದು ಕರ್ನಾಟಕಕ್ಕೆ ಹೋಗಬೇಕೆಂದು ಅನಿಸುತ್ತದೆಯಂತೆ. ಅದರಲ್ಲೂ ತಮ್ಮ ಮಾವ ತೀರಿಕೊಂಡ ಸುದ್ದಿ ಬಂದಾಗ, ಅದನ್ನು ಅಡಗಿಸಿ, ಮಡದಿಯನ್ನು ಊರಿಗೆ ಕರೆದುಕೊಂಡು ಬಂದ ಬಳಿಕ ಹೇಳಿದ ಘಟನೆಯನ್ನು ಅವರು ಬಹಳ ವೇದನೆಯಿಂದ ಹೇಳಿದರು. ಮತ್ತೆ ಕೊಲ್ಕತ್ತಕ್ಕೆ ಹೋಗಬಾರದು ಎಂದು ಅನಿಸಿದರೂ, ಬಾಳಿನ ಪರಿಸ್ಥಿತಿ ಅವರನ್ನು ಅನಿವಾರ್ಯವಾಗಿ ಕೊಲ್ಕತ್ತೆಗೆ ಮತ್ತೆ ಮತ್ತೆ ಕರೆದೊಯ್ಯಿತು. ಆದರೆ ಹದ್ದಿನಂತೆ ಎರಗಿ ಬರುವ ಒಂಟಿತನ ಮತ್ತು ಗ್ರಂಥಾಲಯದಲ್ಲಿ ಸಿಗುವ ಅಪಾರ ಸಮಯ ಅವರನ್ನು ಕನ್ನಡ ಸಂಘಗಳಲ್ಲಿ ದುಡಿಯಲು ಹಚ್ಚಿದೆ; ವಲಸಿಗ ಕನ್ನಡಿಗರಿಗೆ ಬಾಡಿಗೆ ಮನೆ ದೊರಕಿಸಿಕೊಡಲು ನೆರವಾಗುವಂತೆ ಮಾಡಿದೆ; ಬಂದ ಲೇಖಕರಿಗೆ ಕೊಲ್ಕತ್ತೆ ತೋರಿಸಿ ಸಂತೋಷ ಪಡುವಂತೆ ಮಾಡಿದೆ; ನ್ಯಾಶನಲ್ ಲೈಬ್ರರಿಗೆ ಬರುವ ಕನ್ನಡ ಪುಸ್ತಕಗಳನ್ನು ಓದುವಂತೆ ಮಾಡಿದೆ; ಮುಖ್ಯವಾಗಿ ಬಂಗಾಳಿಯಿಂದ ಕನ್ನಡಕ್ಕೆ ಅನುವಾದಿಸುವಂತೆ ಮಾಡಿದೆ; ತಮ್ಮ ಅನುವಾದಗಳಿಂದ ಅವರೀಗ ಬಂಗಾಳದಲ್ಲಿರುವ ಕರ್ನಾಟಕದ ಅನಧಿಕೃತ ಸಾಂಸ್ಕೃತಿಕ ರಾಯಭಾರಿ.

ಆದರೆ ಈ ರಾಯಭಾರಕ್ಕಾಗಿ ಕುಮಾರಪ್ಪ ತೆತ್ತಿರುವ ಬೆಲೆ ಅಪಾರವಾಗಿದೆ. ಮಗ ದೂರದೂರಿಗೆ ಹೋಗುವಾಗ ತಾಯಿ ಸೆರಗಿನಿಂದ ಕಣ್ಣೀರಿನ ರಿಣವು ಕುಮಾರಪ್ಪ ಕನ್ನಡಕ್ಕೆ ಕೊಟ್ಟಿರುವ ಬಂಗಾಳಿ ಸಾಹಿತ್ಯ ಕೊಡುಗೆಯಲ್ಲಿ ಸೇರಿಕೊಂಡಿದೆ; ತನ್ನ ಬಂಧುಗಳನ್ನು ಅಗಲಿ ಪರಸ್ಥಳದಲ್ಲಿ ಗಂಡನಿಗೆ ಬೆಂಬಲವಾಗಿ ನಿಂತಿರುವ ಅವರ ಮಡದಿಯ ರಿಣವೂ ಮಿಳಿತವಾಗಿದೆ ಅನಿಸುತ್ತದೆ.

ವಿಶೇಷವೆಂದರೆ, ಕುಮಾರಪ್ಪ ಮಾಡುತ್ತಿರುವ ಕೊಂಡಿಯ ಕೆಲಸ ಅವರು ಕೊಲ್ಕತ್ತೆ ಬಿಟ್ಟು ಮರಳಿ ತಾಯ್ನಾಡಿಗೆ ಬಂದರೂ ನಿಲ್ಲುವುದಿಲ್ಲ. ಇದು ಅವರ ಮನೆಗೆ ಹೋದಾಗ ಗೊತ್ತಾಯಿತು. ಅವರ ಕಪಾಟಿನ ತುಂಬ ಬಂಗಾಳಿ ಪುಸ್ತಕಗಳೇ ತುಂಬಿಕೊಂಡಿದ್ದನ್ನು ಕಂಡು ಕಾರಣ ಕೇಳಿದೆ. "ರಿಟೈರ್ಡ್ ಆಗಿ ಕರ್ನಾಟಕಕ್ಕೆ ಬಂದ ಮೇಲೆ ಅನುವಾದಿಸುವುದಕ್ಕೆ ಅಂತ ಕೊಂಡುಕೊಂಡು ಇಟ್ಟುಕೊಂಡಿದ್ದೇನೆ" ಎಂದು ಅವರು ಹೇಳಿದರು.

ಚಿತ್ರಗಳು : ರಹಮತ್ ತರೀಕೆರೆ

ಪ್ರೊ॥ ರಹಮತ್ ತರೀಕೆರೆ
"ಸಾಕ್ಷಿ", ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ - ೫೮೩ ೨೦೧




ನದಿ ದಡದಲ್ಲಿ ತೆಂಗಿನ
ಮರದ ನೆರಳಡಿಯಲ್ಲಿ,
ಮರಳು ಹರಳಿನಾಟವಾಡುತ್ತ
ಕೊರಳು ಕೊಂಕಿಸಿ,
ಅರಳು ಹುರಿದಂತೆ ಮಾತಾಡಿ,
ಮೋಹನರಾಗ ನುಡಿಸಿದ
ನಿನ್ನ ಆ ದಿನದ
ಚಪಲಕ್ಕೆ ಸಾಕ್ಷಿ ಬೇಕs ?

ಮಾತುಗಳೆಲ್ಲ ಮುಗಿದು
ಮೌನವೇ ಬಂಗಾರವಾಗಿ,
ಶೃಂಗಾರ ಸೀಮೆಯಲ್ಲಿ
ಲೋಲಾಡುವ ಭೃಂಗಗಳಂತಾದ,
ಇಬ್ಬರ ಸೊಲ್ಲನಾಲಿಸಲು
ಬಂದ ಹುಲ್ಲೆಯನ್ನು
ಹಿಡಿಯಲು,
ಚಂಗನೆ ನೀನು
ನೆಗೆದು ಓಡಾಡಿದ್ದಕ್ಕೆ
ಸಾಕ್ಷಿ ಎಲ್ಲಿಂದ
ತರಲಿ ?

ಧುಮುಕುತ್ತಿರುವ ಜಲಧಾರೆಯನ್ನು
ವಾರೆ ನೋಟದಲ್ಲಿ
ನೋಡುತ್ತಾ , ತಂತಿ
ಪೂಲಿನ ಮೇಲೆ
ನಿಂತವಳನ್ನು ನನ್ನ
ಕಣ್ಣ ಕ್ಯಾಮರಾದಲ್ಲಿ
ಸೆರೆ ಹಿಡಿದು,
ಸಂಭ್ರಮಿಸಿದುದಕ್ಕೆ
ಸಾಕ್ಷಿ ಬೇಕs...?

ನೀನು ಕೇಳುವ
ಎಲ್ಲವುಗಳಿಗೆ ಸಾಕ್ಷಿ
ನುಡಿಯುವ ಕಾಲಪುರುಷ
ಮೂಕ ವ್ರತ
ಆಚರಿಸುತ್ತಿದ್ದಾನೆ.
ಏನು ಮಾಡಲಿ...!?

ಎಸ್. ಆರ್. ರಾವಳ
ತೇಜಸ್ವಿನಿ ಪ್ರಕಾಶನ, ಶ್ರೀ ಶಿವಾನಂದ ಆಶ್ರಮ ರಸ್ತೆ, ದೇವರಾಜ ನಗರ
ತೇರದಾಳ - ೫೮೭ ೩೧೫, ಜಮಖಂಡಿ ತಾಲ್ಲೂಕು, ಬಾಗಲಕೋಟ ಜಿಲ್ಲೆ

# ಶ್ರಮಿಕರು ಜಗತ್ತಿನ ಇತಿಹಾಸವನ್ನೇ ಬದಲಿಸಬಲ್ಲರು!

ಡಾ|| ಮಲ್ಲಿಕಾರ್ಜುನ ಕುಂಬಾರ

ಭಾರತ ದೇಶದಲ್ಲಿ ಕಿತ್ತು ತಿನ್ನುತ್ತಿರುವ ಬಡತನ ಒಂದೆಡೆಯಾದರೆ, ಮತ್ತೊಂದೆಡೆ ಉಳ್ಳವರಲ್ಲಿ ತುಂಬಿ ತುಳುಕುತ್ತಿರುವ ಶ್ರೀಮಂತಿಕೆ, ಹೀಗಿರುವಾಗ ಈ ದೇಶದಲ್ಲಿ ಸಮಾನತೆ ಎಂಬುದು ಎಲ್ಲಿಂದ ಬಂದಿತು ? 'ಕೈ ಕೆಸರಾದರೆ ಬಾಯಿ ಮೊಸರು' ಎನ್ನುತ್ತಾರೆ. ಆದರೆ ಇಂದು ಏನಾಗಿದೆ ? ಕೈ ಕೆಸರಾದವರ ಬಾಯಿಗೆ ಮೊಸರು ಇಲ್ಲದೆ ಅವರ ಬಾಯಿಗೆ ಮಣ್ಣು ಬೀಳುತ್ತಿದೆ; ಕೈ ಕೆಸರಾಗದವರ ಬಾಯಿಗೆ ಏನೆಲ್ಲಾ ಅಮೃತ ಬೀಳುತ್ತಿದೆ; ಇದು ಇಂದಿನ ವಾಸ್ತವ ಚಿತ್ರಣ! ಬೆವರಿನೊಂದಿಗೆ ರಕ್ತ ಸುರಿಸಿ ದುಡಿಯುವವರಿಗೆ ಒಂದು ಹೊತ್ತಿನ ಊಟಕ್ಕೂ ಸಾಲದ ವೇತನ, ಆದರೆ ದಿನದಲ್ಲಿ ಒಂದೆರಡು ತಾಸು ಕೆಲಸ ಮಾಡುವವರಿಗೆ ಸಾವಿರಾರು ರೂಪಾಯಿಗಳ ಪಗಾರ! ಸಣ್ಣ ಕೆಲಸಕ್ಕೆ ದೊಡ್ಡ ವೇತನ, ದೊಡ್ಡ ಕೆಲಸಕ್ಕೆ ಸಣ್ಣ ವೇತನ, ಇದು ಎಂತಹ ವಿರೋಧಾಭಾಸ ? ಆದರೂ ಪಗಾರ ಸಾಲುತ್ತಿಲ್ಲವೆಂದು ಸತ್ಯಾಗ್ರಹ, ಹೋರಾಟ ಬೇರೆ.



ಈ ದೇಶದಲ್ಲಿ ದುಡಿಯುವ ವರ್ಗ ಒಂದಾದರೆ, ದುಡಿಯದೆ ತಿನ್ನುವ ವರ್ಗ ಮತ್ತೊಂದೆಡೆ. ಇಂತಹ ತಿನ್ನುವ ವರ್ಗವು ಹಸಿವೆಯಾಗುವದಿಲ್ಲವೆಂದು ವೈದ್ಯರ ಮೊರೆಹೋದರೆ, ದುಡಿಯುವ ವರ್ಗವು ಯಾಕಾದರೂ ಹಸಿವೆಯಾಗುತ್ತಿದೆ ಎಂದು ದೈವಕ್ಕೆ ಶರಣು ಇಡುತ್ತಿದೆ. ಇದನ್ನೆ ಸುಭಾಷಿತಕಾರರು ''ಶ್ರೀಮಂತರಿಗೆ ಊಟಮಾಡಿ ಜೀರ್ಣಿಸಿಕೊಳ್ಳುವ ಶಕ್ತಿ ಇರುವದಿಲ್ಲ; ಕಟ್ಟಿಗೆಗಳು ಸಹ ಬಡವರಿಗೆ ಜೀರ್ಣವಾಗುತ್ತವೆ'' ಎಂದು ಹೇಳುತ್ತಾರೆ. ತಿನ್ನಲು ಇದ್ದರೂ ಅದನ್ನು ಇತರರಿಗೆ ಹಂಚದೆ ಕಸದ ತೊಟ್ಟಿಗೆ ಚೆಲ್ಲುವ ಶ್ರೀಮಂತರು, ಅದೇ ತೊಟ್ಟಿಯಲ್ಲಿ ಅನ್ನಕ್ಕಾಗಿ ನಾಯಿಯೊಂದಿಗೆ ಸೆಣೆಸಾಡುವ ಹಸಿದವರ ಚಿತ್ರಣ ಕಂಡಾಗ ಮನ ಕಲುಕುತ್ತದೆ. ಶಕ್ತಿಹೀನ ಮುದುಕರು, ಏನೂ ಅರಿಯದ ಹರೆಯಕ್ಕೂ ಬಂದಿರದ ಮಕ್ಕಳು ರಕ್ತ ಬಸಿಯುತ್ತಾ, ಬಿಸಿಲು – ನೆರಳೆನ್ನದೆ, ಆಸರಿಕೆ ಬೇಸರಿಕೆ ಇಲ್ಲದೆ ದುಡಿಯದಿದ್ದರೆ ಗುಡಿಸಲಿನಲ್ಲಿರುವ ಅವರ ಕುಟುಂಬದವರು ಬದುಕುವದು ತುಂಬಾ ದುಸ್ತರವಾಗುತ್ತಿದೆ. ಬಡತನದ ಶೋಷಣೆಯ ಬೆಂಕಿಯಲ್ಲಿ ಬೇಯುತ್ತಾ, ದುಡಿತದಲ್ಲಿಯೇ ಅಕ್ಷರ ಲೋಕದ ಪರಿಚಯವಿಲ್ಲದೆ ಮಣ್ಣಾದರೆ, ಬಂಡವಾಳಶಾಹಿಗಳು ಮಾತ್ರ ಶ್ರೀಮಂತರಾಗುತ್ತಾ, ಬಡತನ-ಶ್ರೀಮಂತಿಕೆಯ ಅಂತರವನ್ನು ಹೆಚ್ಚಿಸುತ್ತಿದ್ದಾರೆ. ಇಂದು ನಾವು ದುಡಿದು ಉಣ್ಣುವ ಅನ್ನ ಅಮೃತಕ್ಕೆ ಸಮಾನ ಎಂಬುವದನ್ನು ಮರೆತಿದ್ದೇವೆ.

ಹನ್ನೆರಡನೆಯ ಶತಮಾನದ ಶ್ರಮಸಂಸ್ಕೃತಿಗೆ ಆದ್ಯತೆಯನ್ನು ನೀಡಿದ ಶರಣರು ಇಂದಿನವರಿಗೆ ಮಾದರಿಯಾಗಿದ್ದಾರೆ. ''ಇಷ್ಟಕ್ಕಿಯಾಸೆ ನಿಮಗೇಕೆ ?'' ಎಂದು ಆಯ್ದಕ್ಕಿ ಲಕ್ಕಮ್ಮನಂತಹ ಶರಣೆಯು ಇಡೀ ಸಮುದಾಯವನ್ನು ಪ್ರಶ್ನಿಸುವ ಮೂಲಕ ಗಳಿಕೆಯ ಸಂಸ್ಕೃತಿಯ ಬಗ್ಗೆ ಎಚ್ಚರಿಸಿದಳು. ''ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ, ಇಂದಿಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ'' ಎಂದು ಸಂಗ್ರಹ ಪ್ರವೃತ್ತಿಯನ್ನು ಖಂಡಿಸಿದರು. ದೇವತೆಗಳು ಕೂಡ ಕಾಯಕವನ್ನು ಮಾಡಲೇಬೇಕೆಂದು ಕಟ್ಟಪ್ಪಣೆಯನ್ನು ಶರಣರು ಆಚರಣೆಗೆ ತಂದಿದ್ದರು. ಅಂದಿನ ಕಾಯಕ ತತ್ವದ ಮುಖ್ಯ ಅಂಶಗಳು, ಸೋಮಾರಿತನದ ಜೀವನವನ್ನು ನಡೆಸುವದು, ಅನ್ಯಾಯವಾಗಿ ಹಣವನ್ನು ಸಂಪಾದಿಸುವದು ಹೇಯಕರ ಕೆಲಸ; ಆದ್ದರಿಂದ ಪ್ರತಿಯೊಬ್ಬನೂ ಒಂದಿಲ್ಲೊಂದು ವೃತ್ತಿಯನ್ನು ಅನುಸರಿಸಬೇಕು. ತನ್ನ ವೃತ್ತಿಯನ್ನು ದೇವರ ಪೂಜೆಯೆಂದು, ಪೂಜ್ಯ ಭಾವನೆಯಿಂದ ಮಾಡಬೇಕು. ತನ್ನ ಕೆಲಸವು ಎಷ್ಟು ಹಣವನ್ನು ಪಡೆಯಲರ್ಹವೋ ಅಷ್ಟನ್ನು ಮಾತ್ರ ಸ್ವೀಕರಿಸಬೇಕು. ತಾನು ಸಂಪಾದಿಸಿದ ಇಂಥ ಹಣವನ್ನು ಸಮಾಜ ಸೇವೆಗಾಗಿ ವಿನಿಯೋಗಿಸಿದ ನಂತರ ತಾನು ಅನುಭವಿಸಬೇಕು. ಆದರೆ ಹಣವನ್ನು ಕೂಡಿಹಾಕಬಾರದು. ಮಾಡುವ ಎಲ್ಲ ಕೆಲಸಗಳು ಸಮಾನವಾದವುಗಳು. ಬುದ್ಧಿ, ಕೌಶಲ್ಯಗಳನ್ನನುಸರಿಸಿ ಕಾಯಕ ಭೇದವುಂಟಾಗುತ್ತದೆಯೇ ಹೊರತು ಅದು ವ್ಯಕ್ತಿಗೆ ಸಲ್ಲಬೇಕಾದ ಗೌರವಕ್ಕೆ ಕಾರಣವಾಗಬಾರದು. ಹೀಗೆ ಅವರ ತತ್ವಗಳು ವೈಚಾರಿಕ ಕಾಣಿಕೆಗಳಾಗಿವೆ. ಒಬ್ಬರನ್ನೊಬ್ಬರು ಶೋಷಿಸುವ ಪದ್ಧತಿಯನ್ನು ನಿಲ್ಲಿಸಲು ಇದು ತಕ್ಕ ಉಪಾಯವನ್ನು ಸೂಚಿಸುವದಲ್ಲದೆ, ಶ್ರಮಸಂಸ್ಕೃತಿಗೆ ತುಂಬ ಗೌರವವನ್ನು ನೀಡುತ್ತದೆ. ಅಂದಿನ ಕಾಲದ ಸಮಷ್ಟಿ ಜೀವನದ ಮೇಲೆ ಇದು ಬೆಳಕು ಬೀರುತ್ತದೆ. ಕಾಯಕಜೀವಿಗಳ ದೊಡ್ಡ ಆಂದೋಲನವೆ ಅಂದು ನಡೆಯಿತು. ಇಂತಹ ಚಳುವಳಿಯನ್ನು ಹೊಂದಿದ ಈ ನಾಡಿನಲ್ಲಿ ಇಂದು ಏನಾಗಿದೆ ? ಪುನಃ ಪುರೋಹಿತಶಾಹಿ, ಬಂಡವಾಳಶಾಹಿಗಳು ಅಟ್ಟಹಾಸಗೈಯುತ್ತಾ ಫಿನಿಕ್ಸ್ ಹಕ್ಕಿಯಂತೆ ಮೇಲೇಳುತ್ತಿವೆ. ಅಂತಹ ಚಳುವಳಿ ಪುನಃ ಜರುಗಲೇ ಇಲ್ಲ. ಪ್ರಾಚೀನ ಇತಿಹಾಸ ಹಿನ್ನೋಟವನ್ನು ಗಮನಿಸಿದರೆ ಶ್ರಮಿಕವರ್ಗವು ಸದಾ ಬೆವರು ಸುರಿಸಿ ಉತ್ಪಾದನೆಯ ಕ್ಷೇತ್ರವನ್ನು ಹೆಚ್ಚಿಸುತ್ತದೆ. ಆ ಉತ್ಪಾದನೆಯ ಲಾಭವು ಬಂಡವಾಳಗಾರನಿಗೆ ಸೇರುತ್ತದೆ ಎಂಬುದನ್ನು ಕಾಣುತ್ತೇವೆ. ಇದರಿಂದ ಬಂಡವಾಳಶಾಹಿ, ಪುರೋಹಿತಶಾಹಿಗಳು ಶ್ರಮಿಕವರ್ಗವನ್ನು ಮೇಲೆತ್ತಲು ಅವಕಾಶವನ್ನೇ ಕೊಡುವದಿಲ್ಲ.

ನಮ್ಮ ನಾಡಿನಲ್ಲಿದ್ದು ಸಮಾನತೆಯನ್ನು ಸಾಧಿಸಿ ತೋರಿಸಿದ ಬಸವಾದಿಶರಣರ ನಂತರ ಸುಮಾರು ೬-೭ ನೂರು ವರ್ಷಗಳ ನಂತರ ೧೯ನೆಯ ಶತಮಾನದ ಜರ್ಮನ್ ದೇಶದ ಚಿಂತಕ, ಜಗತ್ತಿನ ಇತಿಹಾಸವನ್ನು ಬದಲಿಸಲು ಹೊರಟ ಕಾರ್ಲ್ ಮಾರ್ಕ್ಸನು ಇದೇ ಸಮಾನತೆಯನ್ನು ಬೋಧಿಸಿದನು. ಈತನು ಆರ್ಥಿಕ ವ್ಯವಸ್ಥೆಗಳು ಹೇಗೆ ಬದಲಾದರೂ ಶ್ರಮಜೀವಿಗಳು ಮಾತ್ರ ಸದಾ ಶೋಷಣೆಗೊಳಗಾಗುತ್ತಾರೆ, ಇದರಿಂದ ಕಾರ್ಮಿಕರು ಒಂದಾಗಬೇಕು. ಶ್ರಮಜೀವಿಗಳ ಹಿತ ಕಾರ್ಮಿಕ ವರ್ಗದ ಸರ್ವಾಧಿಕಾರತ್ವದಿಂದ ಮಾತ್ರ



ದಿನಾಂಕ 20-6-2010ರ ಭಾನುವಾರ ನವಕರ್ನಾಟಕ ಪ್ರಕಟಿಸಿರುವ ಡಾ|| ಕೆ. ಉಲ್ಲಾಸ ಕಾರಂತರ 'ಕಾಡುಪ್ರಾಣಿಗಳ ಜಾಡಿನಲ್ಲಿ' ಮತ್ತು ಶ್ರೀ ಕೆ. ಎಂ. ಚಿಣ್ಣಪ್ಪ ಅವರ 'ಕಾಡಿನೊಳಗೊಂದು ಜೀವ' – ಈ ಎರಡು ಕೃತಿಗಳ ಲೋಕಾರ್ಪಣೆ ಬೆಂಗಳೂರಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆಯಲ್ಲಿ ನಡೆಯಿತು. ಪತ್ರಕರ್ತ ಶ್ರೀ ನಾಗೇಶ್ ಹೆಗಡೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ಮತ್ತು ಪುಸ್ತಕಗಳ ಅನಾವರಣಗೊಳಿಸಿದರು. ಶ್ರೀಮತಿ ಬಿ. ಕೆ. ಸುಮತಿ ಕೃತಿ ಪರಿಚಯ ಮಾಡಿಕೊಟ್ಟರು.

ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಆರ್. ಎಸ್. ರಾಜಾರಾಮ್, ಡಾ|| ಕೆ. ಉಲ್ಲಾಸ ಕಾರಂತ, ಶ್ರೀ ನಾಗೇಶ ಹೆಗಡೆ, ಶ್ರೀ ಕೆ. ಎಂ. ಚಿಣ್ಣಪ್ಪ ಮತ್ತು ಶ್ರೀ ಟಿ. ಎಸ್. ಗೋಪಾಲ್ (ಕೃತಿಯ ನಿರೂಪಕರು).

ಸಾಧ್ಯವೆಂದು ಹೇಳಿದನು. ಆದರಿನ್ನೂ ಅದು ಬಂಡವಾಳ ಶಾಹಿಗಳ ಕಪಿಮುಷ್ಟಿಯಲ್ಲಿಯೇ ಉಳಿದಿದೆ. ಇತ್ತೀಚಿನ ಸಣ್ಣ ಉದಾಹರಣೆಯೊಂದನ್ನು ಹೇಳುವದಾದರೆ ಶ್ರಮ ಜೀವಿಗಳಿಗಿರುವ ಸರಕಾರದ ಉದ್ಯೋಗ ಖಾತ್ರಿ ಯೋಜನೆ ಇಂದು ಬರೀ ಭ್ರಷ್ಟಾಚಾರದಿಂದ ಕೂಡಿದೆ. ಅದು ಶ್ರಮಿಕ ವರ್ಗಕ್ಕೆ ಸಿಗದೆ ಅಲ್ಲಿನ ಎಲ್ಲರೂ ಸೇರಿ ಕೇವಲ ಕಾಗದದ ಮೇಲೆ ಉದ್ಯೋಗವನ್ನು ಸೃಷ್ಟಿಸಿ, ಆ ಮೂಲಕ ಸರಕಾರದಿಂದ ಮಂಜೂರಾದ ಕೋಟ್ಯಂತರ ರೂಪಾಯಿ ಗಳು ಉಳ್ಳವರ ಪಾಲಾಗುತ್ತಿದೆ. ಇಂಥ ಯೋಜನೆಗಳು ವಿಫಲವಾಗಿ ನೊಂದ ಶ್ರಮಜೀವಿಗಳು ಕೆಲಸವಿಲ್ಲದೆ ಪುನಃ ನಗರ ಪ್ರದೇಶಗಳಿಗೆ ಗುಳೆಹೋಗುವದು ತಪ್ಪುತ್ತಿಲ್ಲ. ಹಾಗಾದರೆ ಶ್ರಮಿಕರಿಗಾಗಿ ಸರಕಾರ ಮಾಡಿದ್ದೇನು? ಪ್ರತಿ ವರ್ಷ ಮೇ ೧ರಂದು ನಡೆಸುವ ಕಾರ್ಮಿಕ ದಿನಾಚರಣೆಯ ಅರ್ಥವಾದರೂ ಏನು?

ಬಂಡವಾಳಶಾಹಿ ಪದ್ಧತಿಯಲ್ಲಿ ಇಂದು ಉತ್ಪಾದನೆಯ ಕ್ಷೇತ್ರಗಳು ಖಾಸಗಿ ಒಡೆತನಕ್ಕೆ ಸೇರಿ, ಅದರ ಪೂರ್ತಿ ಲಾಭವನ್ನು ಖಾಸಗಿಯವರೇ ಪಡೆಯುತ್ತಿರುವದರಿಂದ ಇದು ಉತ್ಪಾದನಾ ಶಕ್ತಿಗಳ ಬೆಳವಣಿಗೆಗೆ ಆತಂಕ ವನ್ನುಂಟುಮಾಡುತ್ತಿದೆ. ಮುಂದಾಳತ್ವವನ್ನು ವಹಿಸಿ ಬಂಡವಾಳಶಾಹಿ ಪದ್ಧತಿಯನ್ನು ಅಂತ್ಯಗೊಳಿಸುವ ಶಕ್ತಿಯು ಶ್ರಮಿಕ ವರ್ಗದಲ್ಲಿದೆ. ಏಕೆಂದರೆ ಶ್ರಮಿಕ ವರ್ಗವು ಬಂಡವಾಳಶಾಹಿಯ ಅಖಂಡ ಭಾಗವಾಗಿದೆ. ಕಾರ್ಮಿಕ ವರ್ಗವು ಬಂಡವಾಳಶಾಹಿಗಳಿಗೆ ಬದ್ಧ ವಿರೋಧವಾಗಿದೆ. ಬಂಡವಾಳಶಾಹಿಗಳು ಬೆಳೆದಂತೆ ಅದರ ಜೊತೆಯಲ್ಲಿಯೆ ಕಾರ್ಮಿಕ ವರ್ಗವೂ ಬೆಳೆಯುತ್ತದೆ. ಬಂಡವಾಳಶಾಹಿ ಗಳನ್ನು ವಿರೋಧಿಸುತ್ತಾ ಆ ತಿಕ್ಕಾಟಗಳ ನಡುವೆ ಕಾರ್ಮಿಕ ವರ್ಗವು ಸಂಘಟಿತವಾಗುತ್ತದೆ. ನಂತರ ಬಂಡವಾಳಶಾಹಿಯ ವಿರೋಧವಿರುವ ಶಕ್ತಿಗಳನ್ನು ಒಂದುಗೂಡಿಸಬೇಕು. ಬಂಡವಾಳಶಾಹಿಗಳ ಪ್ರಭುತ್ವವನ್ನು ಅಂತ್ಯಗೊಳಿಸಲು ಶ್ರಮಜೀವಿಗಳಾದ ಕಾರ್ಮಿಕ ವರ್ಗವು ತನ್ನ ಪ್ರಭುತ್ವವನ್ನು ಸ್ಥಾಪಿಸಿಕೊಂಡು ಅದರ ಮೂಲಕ ಶೋಷಣೆಯೂ, ವರ್ಗಭೇದವೂ ಇಲ್ಲದ ಹೊಸ ಸಮಾಜವನ್ನು ರೂಪಿಸ ಬೇಕಾಗಿದೆ. ಬೆವರು ಸುರಿಸುವ ವರ್ಗವು ತನ್ನ ಆಶಯ ಗಳನ್ನು ಈಡೇರಿಸಿಕೊಳ್ಳಲು ಸ್ವಂತಿಕೆಯನ್ನು ಬೆಳೆಸಿಕೊಳ್ಳ ಬೇಕು. ನಾಡಿನ ಚರಿತ್ರೆಯನ್ನು ನಿರ್ಮಿಸುವುದು ಸಮಾಜ; ಹಳೆಯದನ್ನು ಅಳಿಸಿ ಪ್ರಗತಿಯನ್ನು ಸಾಧಿಸಿ, ಹೊಸ ಸಮಾಜವನ್ನು ಕಟ್ಟುವದು ಜನತೆ. ಇಂತಹ ಚಾರಿತ್ರಿಕ ಪಾತ್ರವನ್ನು ನೆರವೇರಿಸುವವರು ಈ ನಾಡನ್ನು ಕಟ್ಟುವ ಶ್ರಮಜೀವಿಗಳು! ಇವರ ಗುಡಿಸಲುಗಳು ಗುಡುಗಿದರೆ ಅಧಿಕಾರಶಾಹಿ ವಿಧಾನಸೌಧ, ಪಾರ್ಲಿಮೆಂಟ್ ಕೂಡ ನಡುಗೀತು. ಸೈನ್ಯಗಳಿಗಿಂತ ಬಲವಾದುದು ಆಲೋಚನೆ ಗಳು. ಅವರು ಮನಸ್ಸು ಮಾಡಿದರೆ ವರ್ಗಗಳ ನಡುವಿನ ಹಾವು-ಮುಂಗುಸಿಯ ಈ ಹೋರಾಟದಲ್ಲಿ ಒಂದಿಲ್ಲೊಂದು ದಿನ ಶ್ರಮಿಕರೇ ಜಯ ಗಳಿಸುವರು. ಇದು ಖಚಿತ! 'ಶ್ರಮ ಏವ ಜಯತೇ'.

**ಡಾ|| ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ - ೫೮೨ ೨೩೦, ರೋಣ ತಾ. ಗದಗ ಜಿಲ್ಲೆ

# ಸಾದರ ಸ್ವೀಕಾರ

**ನಾ ಬಂದ ಹಾದಿಯಲ್ಲಿ** *ಪ್ರೊ|| ಕೆ. ವಿ. ಘನಶ್ಯಾಮ*
**ಪುಟ : ೩೬೦** **ಬೆಲೆ : ರೂ. ೨೦೦**
**ಕೊಳವಳ್ಳಿ ಪ್ರಕಾಶನ,** ೨೧೪, ೩ನೇ ಮುಖ್ಯರಸ್ತೆ, ೧೦ನೇ ಅಡ್ಡರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

**ಶಾಂತಾದೇವಿ ಮಾಳವಾಡ** (ಜೀವನ)
*ಡಾ|| ಶಾಂತಾ ಇಮ್ರಾಪೂರ*
**ಪುಟ : ೭೮** **ಬೆಲೆ : ರೂ. ೧೦**

**ಕಾಯಕಯೋಗಿ ಗೊಗ್ಗ ಬಸಯ್ಯನವರು** (ಜೀವನ)
*ಡಾ|| ಮೃತ್ಯುಂಜಯ ರುಮಾಲೆ*
**ಪುಟ : ೧೬೨** **ಬೆಲೆ : ರೂ. ೧೦**

**ಪರಮಾನಂದ ಸುಧೆ** *ಸಂ. : ಡಾ|| ಎಂ. ಎಂ. ಕಲಬುರ್ಗಿ*
*ಡಾ|| ವೀರಣ್ಣ ರಾಜೂರ*
**ಪುಟ : ೪೨೪** **ಬೆಲೆ : ರೂ. ೨೦೦**

**ಮರಾಠಿ ಸಂತ ಕವಯಿತ್ರಿಯರು** ಮರಾಠಿ ಮೂಲ :
ಪಿರೋಜ ಆನಂದಕರ
ಕನ್ನಡಕ್ಕೆ : *ಡಾ|| ರತ್ನಶೀಲಾ ಗುರಡ್ಡಿ*
**ಪುಟ : ೧೩೪** **ಬೆಲೆ : ರೂ. ೭೫**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಲಿಂಗಾಯತ ಅಧ್ಯಯನ ಸಂಸ್ಥೆ,** ಎಡೆಯೂರು ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ - ಗದಗ.

**ದಲಿತ ಪೀಠಾಧಿಪತಿ** ಮಾಣಿಕ ಆರ್. ಭುರೆ
**ಪುಟ : ೮೦** **ಬೆಲೆ : ರೂ. ೫೦**
**ಶರಣ ಉರಿಲಿಂಗ ಪೆದ್ದಿಮಠ (ಟ್ರಸ್ಟ್),** ಬೇಲೂರ, ಬಸವಕಲ್ಯಾಣ ತಾಲ್ಲೂಕು, ಬೀದರ ಜಿಲ್ಲೆ.

**ಮನ್ವಂತರಿ (ಆಲ್ಬರ್ಟ್ ಐನ್‌ಸ್ಟೈನರ ಜೀವನ ಮತ್ತು ಸಾಧನೆ)**
*ಡಾ|| ಶಂಕರ ರಾಮಚಂದ್ರ ಕಂದಗಲ್ಲ*
**ಪುಟ : ೭೨** **ಬೆಲೆ : ರೂ. ೩೦**
**ಕನ್ನಡ ಸಂಘ,** ಬಿ. ವ್ಹಿ. ವ್ಹಿ. ಸಂಘದ ಬಸವೇಶ್ವರ ವಿಜ್ಞಾನ ಮಹಾವಿದ್ಯಾಲಯ, ಬಾಗಲಕೋಟೆ.

**ನವುಲೂರಮ್ಮನ ಕಥೆ** (ಕಥಾ ಸಂಕಲನ) ಎಂ. ಜವರಾಜ್
**ಪುಟ : ೧೪೪** **ಬೆಲೆ : ರೂ. ೮೫**
**ಯಡಿಯೂರು ಸಿದ್ಧಲಿಂಗೇಶ್ವರ ಪ್ರಕಾಶನ,** ನಂ. ೩೫೯, ಲಿಖಿತ ನಿಲಯ, ೫ನೇ ಮೈನ್, ೪ನೇ ಹಂತ, ಟಿ. ಕೆ. ಲೇಔಟ್, ಮೈಸೂರು.

**ದಾರಿ ನೆಂಟ** (ಕವನ ಸಂಕಲನ) *ಲಲಿತಾ ಸಿದ್ಧಬಸವಯ್ಯ*
**ಪುಟ : ೧೦೦** **ಬೆಲೆ : ರೂ. ೫೦**
**ಚಿನ್ಮಯಿ ಪ್ರಕಾಶನ,** 'ಪುಸ್ತಕ', ಗುರುಸನ್ನಿಧಿಯ ಮೊದಲ ಮಹಡಿ, ೨ನೇ ತಿರುವು, ಅಶೋಕನಗರ, ತುಮಕೂರು - ೫೭೨೧೦೨

**ಮಳೆಬಿದ್ದ ನೆಲದಲ್ಲಿ** (ಕವನ ಸಂಕಲನ) ಎಚ್. ಎಸ್. ಶಿವಪ್ರಕಾಶ್
**ಪುಟ : ೭೨** **ಬೆಲೆ : ರೂ. ೫೦**

**ಗಂಗಾವತರಣ** (ಗಂಗೂಬಾಯಿ ಹಾನಗಲ್ ಜೀವನಚಿತ್ರ)
*ದಮಯಂತಿ ನರೇಗಲ್ಲ*
**ಪುಟ : ೧೬೮** **ಬೆಲೆ : ರೂ. ೭೫**

**ವಿಸ್ತರಣೆ** (ಲೇಖನ ಸಂಕಲನ) *ಶ್ರೀಧರ ಹೆಗಡೆ ಭದ್ರಾನ್*
**ಪುಟ : ೧೮೦** **ಬೆಲೆ : ರೂ. ೧೦೦**

**ಕಾಲಮಾನ** (ಲೇ. ಸಂಕಲನ) *ಯು. ಆರ್. ಅನಂತಮೂರ್ತಿ*
**ಪುಟ : ೧೬೦** **ಬೆಲೆ : ರೂ. ೭೫**

**ಕಣ್ಣಂಚಿನ ಕಡಲು** (ಕವನ ಸಂಕಲನ)
*ನಾಗರಾಜ ಹೆಗಡೆ, ಅಪಗಾಲ*
**ಪುಟ : ೮೦** **ಬೆಲೆ : ರೂ. ೫೦**

**ಎಳೆಯ ಪಾಪದ ಹೆಸರು ನಿಮ್ಮಿಚ್ಛೆಯಂತೆ ಇಟ್ಟುಕೊಳ್ಳಿ**
(ಕವನಸಂಕಲನ) *ನಮೇಶ ಅರೋಲಿ*
**ಪುಟ : ೮೮** **ಬೆಲೆ : ರೂ. ೫೦**

ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ಅಭಿನವ,** ೧೭/೧೮೨, ಮೊದಲನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

**ಅಪರಿಮಿತದ ಕತ್ತಲೆ** (ವೈಚಾರಿಕ ಲೇಖನಗಳು)
*ಡಾ|| ಮೂಡ್ನಾಕೂಡು ಚಿನ್ನಸ್ವಾಮಿ*
**ಪುಟ : ೧೩೨** **ಬೆಲೆ : ರೂ. ೮೦**
**ಸುಮೇಧ ಪ್ರಕಾಶನ,** ಪ್ಲಾಟ್ ನಂ. ೨೦, ನಂ. ೧-೯೪೯, ಹಳೆ ಜೇವರ್ಗಿ ರಸ್ತೆ, ದೇವನಗರ, ಗುಲಬರ್ಗಾ - ೫೮೫ ೧೦೨

**ಪಿಳ್ಳಂಗೋವಿ** (ಲೇಖನ ಮತ್ತು ಮುನ್ನುಡಿಗಳು)
*ಡಾ|| ಬಂಜಗೆರೆ ಜಯಪ್ರಕಾಶ*
**ಪುಟ : ೨೮೮** **ಬೆಲೆ : ರೂ. ೧೮೦**
**ಕಿಟಕಿ ಪ್ರಕಾಶನ,** ನಂ. ೧೧೭, ೨ನೇ ಕ್ರಾಸ್ ದಕ್ಷಿಣ ಅನಿಕೇತನ ರಸ್ತೆ, ಮೈಸೂರು - ೫೭೦ ೦೨೩

**ಬೀಜ ಹಸಿರಾಗುವ ಗಳಿಗೆ** (ಕವನ ಸಂಕಲನ)
*ವಿಜಯಶ್ರೀ ಹಾಲಾಡಿ*
**ಪುಟ : ೧೦೪** **ಬೆಲೆ : ರೂ. ೬೦**
**ಅಕ್ಕ ಪ್ರಕಾಶನ,** ೯೩೦, ಕುವೆಂಪು ನಗರ, ಬಿ. ಎಂ. ರಸ್ತೆ, ಕುಣಿಗಲ್ - ೫೭೨ ೧೩೦

**ವಿಚಿತ್ರ ಸತ್ಯಗಳು, ಕುತೂಹಲಕರ ಕತೆಗಳು** *ಜಿ. ವಿ. ಗಣೇಶಯ್ಯ*
**ಪುಟ : ೮೮** **ಬೆಲೆ : ರೂ. ೧೦೦**

**ಸಾಧಕನ ಹೆಜ್ಜೆಗಳು** (ಭಾರತರತನ್ನ ಸರ್ ಎಂ. ವಿಶ್ವೇಶ್ವರಯ್ಯನವರ ಜೀವನ ಪರಿಚಯ)
*ಟಿ. ಆರ್. ಅನಂತರಾಮು*
**ಪುಟ : ೧೦೪** **ಬೆಲೆ : ರೂ. ೭೦**

**ಸ್ತ್ರೀಮಾರಕ ವ್ಯಾಧಿ ಸ್ತನ ಕ್ಯಾನ್ಸರ್. ಕಾರಣ-ತಪಾಸಣೆ - ಪರಿಹಾರ** *ಇಂಗ್ಲಿಷ್ ಮೂಲ : ಪ್ರೊ|| ಎ. ರಮೇಶ ರಾವ್*
*ಕನ್ನಡ ಅನು : ಡಾ|| ಹೆಚ್. ರಾಮಚಂದ್ರಸ್ವಾಮಿ*
**ಪುಟ : ೧೬೦** **ಬೆಲೆ : ರೂ. ೧೧೦**

**ಮೆಕಾಲೆಯ ಮಕ್ಕಳು** (ಶಿಕ್ಷಣ ನೀತಿಯ ಕುರಿತು ಒಂದು ಅಧ್ಯಯನ)
*ಡಾ|| ಮಹಾಬಲೇಶ್ವರ ರಾವ್*
**ಪುಟ : ೪೮** **ಬೆಲೆ : ರೂ. ೩೦**

**ಅಣು, ಪರಮಾಣು ಮತ್ತು ಸಂಯುಕ್ತಗಳು**
*ಡಾ|| ಹೆಚ್. ರಾಮಚಂದ್ರಸ್ವಾಮಿ*
**ಪುಟ : ೧೨೦** **ಬೆಲೆ : ರೂ. ೬೦**

**ಜೈವಿಕ ತಂತ್ರಜ್ಞಾನ** *ಡಾ|| ಎನ್. ಎಸ್. ಲೀಲಾ*
**ಪುಟ : ೧೨೮** **ಬೆಲೆ : ರೂ. ೬೦**

ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / JULY 2010 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)